# ಒಡೆದ ಮುತ್ತು

ಒಡೆದ ಮುತ್ತು

ಕಾದಂಬರಿ

ದೇವುಡು

ದೇವುಡು






# ಒಡೆದ ಮುತ್ತು

## ೧

ಮುರಳೀಧರರಾಯನು ಮಹಡಿಯ ಮೇಲೆ ಕಿಟಕಿಯ ಮಗ್ಗುಲಲ್ಲಿ ಒಂದು ಸೋಫಾದ ಮೇಲೆ ಒರಗಿಕೊಂಡಿದ್ದಾನೆ. ಬಾಯ ತುಂಬಾ ಇರುವ ಅಡಿಕೆಲೆಯನ್ನು ಅಗೆಯುತ್ತಾ, ಆಗಾಗ ಮಗ್ಗುಲಲ್ಲಿರುವ ಪೀಕುದಾನಿಯೊಳಕ್ಕೆ ಉಗಿಯುತ್ತಾ ಏನೋ ಮಹತ್ತರವಾದ ಆಲೋಚನೆಯಲ್ಲಿ ಮುಳುಗಿದ್ದಾನೆ. ಮಂಗಳೂರು ಗಣೇಶ ಬೀಡಿಯ ಕಟ್ಟು, ಒಂದು ದೀಪದಕಡ್ಡಿ ಪೆಟ್ಟಿಗೆ, ಮಗ್ಗುಲಲ್ಲಿರುವ ಟೀಪಾಯಿನ ಮೇಲೆ ಕುಳಿತಿವೆ.

ಅವನಿಗೆ ಈಗ ರಮೇಶನ ಯೋಚನೆಯೇ ಯೋಚನೆ. ರಮೇಶನೀಗ ಭಾರಿ ಲಾಯರ್ ಆಗುವ ಸೂಚನೆಗಳು ಚೆನ್ನಾಗಿ ಕಂಡುಬರುತ್ತಿವೆ. ಮಳೆಯಾಗುವುದಕ್ಕೆ ಮೊದಲು ಮೋಡಗಳು ಗುಡಿಕಟ್ಟಿ ಮಿಂಚು ಮಿಂಚಿ, ಗುಡುಗು ಅಬ್ಬರಿಸುವಂತೆ, ಕೋರ್ಟಿನಲ್ಲಿ ಕಕ್ಷಿಗಾರರ ತಂಡಗಳಲ್ಲಿ ರಮೇಶನ ಪಾಂಡಿತ್ಯ, ವಚೋವೈಖರಿ, ನಾಟಕದಲ್ಲಿ ಪಾರ್ಟುಮಾಡಿದವನ ಹಾಗೆ ಮಾತಾಡುವಾಗ ತೋರಿಸುವ ಭಾವ ಇವೆಲ್ಲ ಚರ್ಚೆಗೆ ಬಂದಿವೆ. ರಮೇಶನು ಗೆದ್ದ ಕೇಸಿನಿಂದ ಲಾಭ ಪಡೆದ ಕಕ್ಷಿಗಾರನು ತಮ್ಮ ಲಾಯರ್ ಫೋಟೋ ಒಂದೂ ಪತ್ರಿಕೆಯಲ್ಲಿ ಹಾಕಿದ್ದ. ಅಂದಿನಿಂದ ರಮೇಶನ ಮೇಲೆ ಫೋಟಾಲಾಯರುಗಳಿಗೆಲ್ಲ ಕೊಂಚ ಕಣ್ಣು ಕೆಂಪಗಾಗಿದೆ.

ಮುರಳೀಧರನಿಗೆ ಇದೆಲ್ಲ ಗೊತ್ತು. "ಒಳ್ಳೆಯ ಗರುಡನ ಮರಿ ಮೋಡ ಒಡೆದುಕೊಂಡು ನುಗ್ಗುವಂತೆ, ಜೋರಾಗಿ ಮಗನು ಕೀರ್ತಿಯ ಕಳಸದ ಕಡೆಗೆ ನುಗ್ಗುತ್ತಿದ್ದಾನೆ. ಈಗಲೂ ತಾನು ಹೋಟಲು ಇಟ್ಟುಕೊಂಡಿದ್ದರೆ, ಮಗನಿಗೆ ಅಪಮಾನವೋ ಏನೋ? ತನ್ನಿಂದ ಅವನ ಸೌಭಾಗ್ಯಕ್ಕೆ ತೊಂದರೆಯಾದೀತೋ ಏನೋ?" ಎಂದು ಯೋಚನೆ. "ಯಾರನ್ನಾದರೂ ಕೇಳುವ ಎಂದರೆ ಈ ಜನ, ಈ ಮೈಸೂರಿನ ಜನ ಇದ್ದ ಬುದ್ಧಿಯನ್ನೆಲ್ಲಾ ಸಂತೆಯಲ್ಲಿ ಮಾರಿದರು. ಒಂದು ಅಡುಗೆ ಸೌಟೂ

ಹಿಡಿದುಕೊಳ್ಳದೆ, ಹತ್ತು ರೂಪಾಯಿ ನಡುವಿನಲ್ಲಿ ಸಿಕ್ಕಿಸಿಕೊಂಡು ಬಂದು, ಕಾವಲಿ ಬಾಂಡ್ಲೆ ಇಟ್ಟುಕೊಂಡು ಮೂರು ಬಂಗ್ಲೆ ಕಟ್ಟಿರುವ ಧೀರ ಯಾರನ್ನು ಕೇಳಬೇಕು?" ಆ ಯೋಚನೆ ಬಂದಾಗ ಮುರಳೀಧರ ಮೀಸೆಯನ್ನು ತಿರುಹಿದನು ಸಣ್ಣ ನಗೆ ಭಾರಿ ತಿರಸ್ಕಾರ ಬೀರುತ್ತ ಆ ಮುಖದಲ್ಲಿ ಮಿನುಗಿತು. ಎಷ್ಟೇ ಆಗಲಿ ಘಟ್ಟದ ಕೆಳಗಿನವನು. ಕಡಾಯಿಯಲ್ಲಿ ಮುಳುಗಿದ ಹಾಗೆ ಮೈಯನ್ನು ಕೊಬ್ಬರಿಯೆಣ್ಣೆಯಲ್ಲಿ ಅದ್ದುವವನು. ಬೆಳ್ಳಗೆ ಹಾಲು ಸೋರೆಯ ಹಾಗಿರುವ ಮೈ. ನರೆತಿರುವ ಕೂದಲಿನ ಬಿಳುಪಿಗಿಂತ ಬೆಳ್ಳಗಿರುವ ಆ ಮುಖ ತಾನು ಗೆದ್ದವನೆಂಬ ಅಹಂಕಾರದಿಂದ ಕೆಂಪೇರಿತು.

ಹಾಗೆ ಒಂದು ಗಳಿಗೆ ಯೋಚನೆ ಮಾಡುತ್ತಿದ್ದು "ಮತ್ತೇಕೆ ಇಷ್ಟು ಯೋಚನೆ? ಅವನನ್ನೇ ಕೇಳಿದರಾಯಿತಲ್ಲವೋ?" ಎಂದುಕೊಂಡನು. ಆ ವೇಳೆಗೆ ಮಾಣಿ ಬಂದು ಏನೋ ಅತ್ತ ಸುಳಿದನು. ಅವನನ್ನು ಕಂಡು ರಾಯನು ತನ್ನ ಯಜಮಾನ್ಯದ ಸೊಕ್ಕಿನಿಂದ ಕೂಡಿದ್ದ ರೂಕ್ಷ್ಮದುಪನ್ನು ಬಿಡದ ಗಂಟಲಿನಿಂದ "ಎಲಾ, ಯಾರೋ ಅವ? ಹೋಗಿ ನಮ್ಮ ಮಗನ್ನ ಕರೆದು ತಾ" ಎಂದನು. ಮಾಣಿಯು ಓಡಿದನು.

ಇನ್ನೊಂದು ಗಳಿಗೆಯೊನ್ನುವುದರೊಳಗಾಗಿ ಸುಮಾರು ಪೈಲೇ ಪಂಚವೀಸೇ ಆಗತಾನೇ ಮುಗಿದಿರಬಹುದಾದ ತರುಣನೊಬ್ಬನು ಸಿಲ್ಕ್ ಜುಬ್ಬಾದಲ್ಲಿ ಬಂದು ಕಾಣಿಸಿಕೊಂಡನು. ಅಡಕೆಲೆಯನ್ನು ಆಗತಾನೇ ಉಗುಳಿ ಬಾಯಿ ಮುಕ್ಕಳಿಸಿ ಬಂದಿದ್ದನೆಂದು ಆ ಬಾಯಿಯ ಕೆಂಪು ಕೂಗಿ ಹೇಳುವಂತಿತ್ತು. ತರುಣನ ವಿನಯ ಬಾಯ ತುಂಬಾ ಹೊಗಳುವಹಾಗಿದ್ದು ಬಂದವ ಕಂಬ ಒರಗಿಕೊಂಡು ನಿಂತು ನೋಕವನ್ನು ತೋರಿಸಿದನು.

ರಾಯನಿಗೆ ಮಗನನ್ನು ಕಂಡು ಮನಸ್ಸು ಹಿಗ್ಗಿತು. "ಕೋರ್ಟಿನಲ್ಲಿ ಜಡ್ಜಿಗಳನ್ನು ಜಜ್ಜಿಹಾಕುವಷ್ಟು ಜೋರಾಗಿ ಜಬರ್‌ದಸ್ತಿನಿಂದ ಜಡಿಯುವ ಗಂಡು" ಮಳ್ಳಿಯಮರಿಯಹಾಗೆ ನಿಂತಿರುವುದನ್ನು ಕಂಡು ಮುದುಕನಿಗೆ ಅಭಿಮಾನದಿಂದ ಕಣ್ಣು ಒದ್ದೆಯಾದರೆ ಏನು ಅತಿಶಯ?

ಮಗನನ್ನು ಕರೆದು "ಕೂತುಕೋ, ಜೊಂಚಮಾತನಾಡಬೇಕಾದ್ದು ಅದೆ. ಮೊದಲೇ ಹೇಳ್ತೀನಿ. ಸಂಕೋಚವಿಲ್ಲದೆ ಎದೆ ತೆರೆದು ಬಾಯಿಬಿಚ್ಚಿ ಹೇಳಬೇಕಾದ್ದು ಹೇಳಲೇ ಬೇಕು. ತಿಳೀತಾ?" ಎಂದನು. ಮಗನು ಆಗಲೆಂದು ಬಂದು ಒಂದು ಕುರ್ಚಿಯನ್ನು ಎಳೆದುಕೊಂಡು ಕುಳಿತನು.

ಮುದುಕನು ಹೇಳತೊಡಗಿದನು: "ನೋಡು, ರಮು, ನಿನ್ನ ಲಾಯರಿ ಕೆಲಸ ಜನದ ಮನಸ್ಸಿಗೆ ಹಿಡಿದಂಗದೆ. ಮಾತೆತ್ತಿದರೆ ಮೂಗು ಮುರಕೊಂಡು ಸೊಟ್ಟಮಾತು ಬಿಟ್ಟು ಬೇರೆ ಮಾತೇ ಕಾಣದ ಪಿಟ್ಟಕಿಷ್ ರಾಯ್ ಕೂಡ, ನಿನ್ನ ಹೊಗಳುತಾನೆ ಅಂದಮೇಲೆ ನೀನು ಭಾರಿ ಲಾಯರ್ ಆಗವನೇ! ಅದರಲ್ಲೇನು ಘೋಕಾ ಇಲ್ಲ. ಈಗ ನನಗೆ ಅನಿಸತಾ ಅದೆ, ನಾನು ಹೋಟಲಿಟ್ಟುಕೊಂಡು ಸೌಟು ಮೊಗಚೋ ಕೈಮೊಗಜುತ್ತಿದ್ದರೆ ನಿನ್ನ ಕೀರ್ತಿಗೆ ಹುಳಿಹಿಂಡಿದಹಾಗೆ ಆದೀತೇನೋ? ಅಂತ. ನ್ಯಾಯವಾಗಿದ್ದರೆ ಮೂರು ತಲೆ ಕೂತು ಉಂಡರೂ ಸಮೆಯ ದಿದ್ದಷ್ಟು ಕೊಟ್ಟಿದ್ದಾನೆ ಮಂಜುನಾಥ. ನನಗೂ ವಯಸ್ಸು ಆಯಿತು. ಆದರೂ ದೇಹ ಗಟ್ಟಿಮುಟ್ಟಾಗದೆ ಅನ್ನು, ನೀನು ಹೇಳು. ನೀನು ಏನು ಮಾಡು ಅಂದರೆ ಅದೇ ಕೊನೆ ಮಾತು. ನಾನು ಇನ್ನು ಯಾರನ್ನೂ ಕೇಳೊಲ್ಲ." ಮಾತಿನ ಭಾವದಲ್ಲೂ ನಿರ್ಧಾರವು ಒಡೆದು ಕಾಣಿಸುತ್ತಿತ್ತು.

ತಂದೆಯ ಮಾತನ್ನು ಕೇಳಿ ಮಗನು ನಕ್ಕನು: "ಭಾವ, ನೀ ಈ ಮಾತು ಇವೊತ್ತು ಏಕೆ ಎತ್ತಿದೆ? ಯಾರಾದರೂ ಏನಾದರೂ ಅಂದರೇನು?"

"ಯಾರು ನನ್ನ ಅನ್ನೋರು? ಏನಾದರೂ ಅಂದರೆ ಕಿವಿಕಿತ್ತು ಕೈಗೆ ಕೊಟ್ಟೇನು. ನನಗೆ ಯಾರಾದರೂ ಸಮಯದಲ್ಲಿ ಮೂರು ಕಾಸು, ಒಂದು ಅಡಕೆ ಹೋಳು, ಏನಾದರೂ ಸಾಯಾ ಮಾಡಿದ್ದಾರಾ? ಇನ್ನೂ ನಾನು ಕಾಂಗ್ರೆಸ್ಸಿನವರು, ರಾಮೋತ್ಸವದವರು ಅವರೂ ಇವರೂ ಬಂದಾಗ ನೂರಾರು ರೂಪಾಯಿ ಕೊಟ್ಟಿದ್ದೀನಿ. ಆಗ ಆ ಮುದುಕ ಗಾಂಧಿ ಬಂದಾಗ ಎಂಥಾ ಜನ ಬಂತು! ಅವರನ್ನೆಲ್ಲ ಒಂದು ಕಾಸು ಕೂಡ ತಕೊಳ್ಳದೆ ಇಟ್ಟುಕೊಂಡಿರಲಿಲ್ಲವಾ! ಅದೇನಿಲ್ಲ ಅನ್ನು.

ಬೆಂಗಳೂರು ಜನ ಸಣ್ಣದರಿಂದ ಹಿಡಿದು ದೊಡ್ಡದರ ವರೆಗೆ ಮುರಳೀಧರ ರಾಯ ಎಂದರೆ ಮರ್ಯಾದೆಬಿಟ್ಟು ಮಾತಾಡೋ ಹಾಗೇನೂ ಮಾಡಿ ಕೊಂಡಿಲ್ಲ ಮಾರಾಯ! ಆದರೂ ಸಣ್ಣ ಜನ. ಸಾಲದೆ ನಾವು ದುಡ್ಡು ಇದ್ದೋರು ಈ ಗತಿಯಿಲ್ಲದವರ ಕಣ್ಣು ನಮ್ಮ ಮೇಲೆ! ಸೋತವ ಗೆದ್ದವ ನಿಗೆ ಯಾವಾಗ ಟಾಂಗ್ ಹೊಡೆದೇನು ಅಂತ ಕಾದಿರೋ ಕಾಲ! ಕಲಿಬಂದೋಯ್ತಪ್ಪಾ! ಎಲಾ! ನಾವೂ ಜೆವರು ಬಸಿದು ಕಾಸು ಮಾಡೋಣ ಅನ್ನೋದಿಲ್ಲ. ಏನಾದರೂ ಆಗಲಿ. ದುಡ್ಡು ಹೊಡೆಯೋಣ ಅನ್ನೋ ಬುದ್ಧಿ. ಹುಂ ಅದೆಲ್ಲ ಇರಲಿ, ಈಗ ಹೇಳು. ನಾ ಹೋಟಲಿಟ್ಟು ಕೊಂಡಿದ್ದರೆ ನಿನಗೆ, ನಿನ್ನ ಲಾಯರೀತನಕ್ಕೆ, ಏನಾದರೂ ತೊಂದರೆ ಉಂಟಾ! ಅದು ಹೇಳು."

ಮಗನು ನಗುನಗುತ್ತಲೇ ಹೇಳಿದನು, "ನಿನ್ನೆ ಕ್ಲಬ್ಬಿನಲ್ಲಿ ಒಂದು ಸಂಗತಿ ನಡೀತು. ಅದೇನಾದರೂ ನಿಮ್ಮ ವರೆಗೂ ಬಂತೇನೋ ಅಂತ ಕೇಳಿದೆ."

"ಏನದು?"

"ಆ ಡಾಕ್ಟರ್ ಮಗ ಕೇಶವುಲು ನಿನ್ನೆ ಇಸ್ಪೇಟಿನಲ್ಲಿ ಸೋತು ಹೋದ. ಸೋತವನಿಗೆ ಇನ್ನು ಇರೋದು, ರೇಗೋದು ಒಂದು ತಾನೇ? ರೇಗಿದ. ರೇಗಿನಲ್ಲಿ 'ಬಿಡೋ ಹೋಟಲ್ ಮಾಣಿ' ಎಂದುಬಿಟ್ಟ. ನಾನೂ ಕೋಪ ಎಲ್ಲಾ ನುಂಗಿಕೊಂಡು 'ಹೋಟಲ್ ಮಾಣಿ ಹೆಣ ಕುಯ್ಯೋನ ಮಗನಿಗೆ ಹೇಳುವುದು ಏನೆಂದರೆ' ಎಂದು ಆರಂಭಿಸಿದೆ, ಎಲ್ಲರೂ ಘೊಳ್ಳೆಂದರು. ಅವನಿಗೆ ಅಲ್ಲಿ ನಿಲ್ಲುವುದಕ್ಕೂ ಆಗದೆ ಹೊರಟು ಹೋದ. ಅದೇನಾದರೂ ನಿಮ್ಮ ವರೆಗೂ ಬಂತೇನೋ ಅಂತಿದ್ದೆ."

"ಹೂಂ. ನೋಡಪ್ಪ, ಹೀಗೆ ನಿನ್ನ ಹೆಸರಿಗೆ ಇವರೇನಾದರೂ ಕೀಲೆಣ್ಣೆ ಬಳಿದಾರು ಅಂತಲೇ ನಾನು ಹೇಳಿದ್ದು."

"ಭಾವ, ಈಗ ಕಾಲ ಬದಲಾಯಿಸಿದೆ. ಡೆಲ್ಲಿಯಲ್ಲಿ ಹರಿಜನ ಕಾರ್ಪೊರೇಷನ್ ಮೆಂಬರಾಗಿದ್ದಾನೆ. ದನ ತಿನ್ನೋ ಜನ ರಾಜ್ಯ ಆಳು ತ್ತಿರುವ ಈ ಕಾಲದಲ್ಲಿ ನಾವು ಹಿಂದಿನವರ ಹಾಗೆ ಏನೇನೋ ಅಭಿಮಾನ

ಕಟ್ಟಿಕೊಂಡು ಒದ್ದಾಡೋದು ನ್ಯಾಯವಿಲ್ಲ. ಈ ದೇಹ ಎಲ್ಲಾ ನಿಮ್ಮದು. ನೀವು ವಡೆ ಪಕೋಡಾ ಮಾರಿಕೊಂಡು ತಂದ ದುಡ್ಡಿನ ಬಲದಿಂದಲೇ ನಾನೂ ಬಿ.ಎ., ಎಲ್‌ಎಲ್.ಬಿ. ಮಾಡಿದ್ದು. ನಾನು ಕೈಲಾಗದವನಾ ಗಿದ್ದರೆ ಇವರೂ ನನ್ನ ವಡೆ ಪಕೋಡಾ ಲಾಯರ್ ಅಂದೇಬಿಡುತ್ತಿದ್ದರು. ಆದರೆ, ನಿಮ್ಮ ಕೈಯ್ಯ ತಿಂಡಿಯಲ್ಲಿ ಯಾವ ರುಚಿ ಇರುತ್ತಿತ್ತೊ, ಅದೇ ರುಚಿ ನನ್ನ ನಾಲಗೆ ಮಾತಿನದೂ ಇದೆ. ನಿಮ್ಮ ಕೈ ಗೆದ್ದ ಹಾಗೇ ನನ್ನ ನಾಲಗೆಯೂ ಗೆಲ್ಲುತ್ತಿದೆ. ಹೀಗಿರುವಾಗ ನಿಮ್ಮನ್ನು ಈ ಉದ್ಯೋಗ ಬಿಡಿ ಎನ್ನುವುದು ಯಾವ ನ್ಯಾಯ? ಈಗಿನ ಕಾಲದಲ್ಲಿ ಹಣದ ಸಂಪಾ ದನೆ ಮುಖ್ಯವೇ ಹೊರತು, ಹೇಗೆ ಸಂಪಾದಿಸಿದನೆಂದು ಕೇಳುವವರು ಯಾರು? ಅಲ್ಲದೆ, ನೀವು ಸಂಪಾದಿಸಿದ ಬಂಗ್ಲಿ, ನೀವು ಕೊಂಡುಕೊಂಡ ಕಾರು, ಇರುವ ವೇಳೆಗೇ ನಾನು ಇವೊತ್ತು ಈ ದೊಡ್ಡ ದೊಡ್ಡ ಲಾಯರು ಗಳಿಗೂ ಬಗ್ಗದೆ ತಲೆಯೆತ್ತಿಕೊಂಡು ತಿರುಗುತ್ತಿರುವುದು. ನೀವು ಏನೂ ಯೋಚನೆ ಮಾಡಬೇಡಿ. ನನ್ನ ಲಾಯರುಗಿರಿ ನಿಮ್ಮ ಹೋಟಲ್ ಬಲ ದಿಂದಲೇ ಬಲವಾಗಿರುವುದು" ಎಂದನು.

ಮುದುಕನಿಗೆ ಸಮಾಧಾನವಾಯಿತು. "ಅಂದರೆ ಈಗಿರೊ ಹಾಗೆ ಇರಲಿ ಅಂತ, ಅಲ್ಲವಾ?"

"ಹೌದು. ಅಷ್ಟೇ ಅಲ್ಲ, ಇದು ಬೆಳೆಯಬೇಕು. ಯೂರೋಪ್ ಅಲ್ಲೆಲ್ಲಾ ಇರುವಂತೆ ನಮ್ಮ ಹೋಟೆಲ್ ನೂರಾರು ವರ್ಷ ಇರಬೇಕು."

* * * *

ರಮೇಶನಿಗೆ ಇಂದು ಮಗಳಾಗಿದ್ದಾಳೆ. ಭಾರಿಯ ಲಾಯರು. ಇದೇ ಸಂದರ್ಭವನ್ನು ಉಪಯೋಗಿಸಿಕೊಂಡು ಊರಿನ ದೊಡ್ಡ ಮನುಷ್ಯ ರನ್ನೆಲ್ಲ ತಾಂಬೂಲಕ್ಕೆ ಕರೆದಿದ್ದಾನೆ. ಬಂದವರಿಗೆಲ್ಲಾ ಸೀ ಬೂಂದಿಯ ಪೊಟ್ಟಣಗಳು. ಅವೊತ್ತು ಮುರಳೀಧರರಾಯರು ಕಲಾಪತ್ತಿನ ಪಂಚೆ ಉಟ್ಟು, ಭಾರಿಯ ವಲ್ಲಿ ಹೊದೆದು, ಸೊಗಸಾದ ವಜ್ರದ ಉಂಗುರ ಇಟ್ಟು ಕೊಂಡು, ಬಂದವರನ್ನೆಲ್ಲಾ ಸ್ವಾಗತಿಸುತ್ತಿದ್ದಾರೆ. ರಮೇಶನಂತೂ ಒಂದು ಸಿಲ್ಕ್ ಜುಬ್ಬಾ, ಒಂದು ಸಣ್ಣ ಕಲಾಪತ್ತಂಚಿನ ಸೊಗಸಾದ ಧೋತ್ರ,

ಒಂದು ಜಂಭವಿಲ್ಲದ ವಲ್ಲಿ ಹೊದೆದುಕೊಂಡು ಮಧ್ಯಮ ವರ್ಗದ ಗೃಹಸ್ಥನಂತೆ ತಿರುಗುತ್ತಿದ್ದಾನೆ. ದಿವಾನರಿಂದ ಹಿಡಿದು ಸಣ್ಣಪುಟ್ಟ ಅಂಗಡಿಯ ಪಾನ್‌ವಾಲಾಗಳಿಗೂ ಆಹ್ವಾನ ಹೋಗಿದೆ. ಅಂತೂ ಎಲ್ಲಾ ಮುಗಿಯಿತು.

ಸುಮಾರು ಹತ್ತು ಗಂಟೆ ಇರಬಹುದು. ರಮೇಶನು ತಂದೆಯನ್ನು ಹುಡುಕಿಕೊಂಡು ಬಂದನು. ಜೊತೆಯಲ್ಲಿ ಶ್ರೀಕಂಠಜೋಯಿಸರು. "ಭಾವಾ, ಜೋಯಿಸರು ನಿಮ್ಮನ್ನ ನೋಡಿಕೊಂಡು ಹೋಗಬೇಕೆಂದು ಬಂದಿದ್ದಾರೆ" ಎಂದನು.

ರಾಯನು "ಬನ್ನಿ ಬನ್ನಿ. ನಿನ್ನೆಯೆಲ್ಲ ತಿಂಡಿ ಮಾಡಿಸುವುದರಲ್ಲಿ ಕಳೆದುಹೋಯಿತು. ಇವೊತ್ತು ಬೆಳಗಿನಿಂದ ಅಲಂಕಾರ ಮಾಡೋದರಲ್ಲಿಯೇ ಕಳೆದುಹೋಯಿತು. ಸಂಜೆಯ ತನಕ ಬಂದವರಿಗೆ ಕೈಮುಗಿಯೋದರಲ್ಲಿ, ತಲೆ ಕೆರೆದುಕೊಳ್ಳೋಕೂ ಹೊತ್ತು ಸಿಕ್ಕಲಿಲ್ಲ. ಜೋಯಿಸರು ಕೋಪ ಮಾಡಿಕೊಳ್ಳಬಾರದು. ಬನ್ನಿ, ಅಷ್ಟು ಹೊತ್ತು ಕುಳಿತುಕೊಳ್ಳೋಣ. ನಿಮಗೆ ಹೊತ್ತಾಯಿತು ಅಂತ ಯೋಚನೆ ಬೇಡ. ಕಾರಿನಲ್ಲಿ ಕಳಿಸೋಣವಂತೆ. ಬನ್ನಿ" ಎಂದು ಮೇಲಕ್ಕೆ ಕರೆದುಕೊಂಡು ಹೋದನು. ರಮೇಶನೂ ತಂದೆಯ ಅಪ್ಪಣೆಯಂತೆ ಜೊತೆಯಲ್ಲಿ ಹೋದನು.

ಯಜಮಾನನು ಜೋಯಿಸರನ್ನು ಕೇಳಿದನು, "ಏನು, ಮಗುವಿನ ಜಾತಕ ಹೇಗಿದೆ?"

"ಜಾತಕ ಅದ್ಭುತವಾಗಿದೆ. ಗಂಡಾಗಿದ್ದರೆ ಈ ದೇಶದ ಮಂತ್ರಿಯಾಗಿ ರಾಜ್ಯ ಆಳುತ್ತಾನೆ ಎಂದು ಹೇಳಬಹುದಾಗಿತ್ತು. ಹೆಣ್ಣು. ಆದರೂ ಬೆಲ್ಲ ಇದ್ದ ಕಡೆ ಇರುವೆ ಮುತ್ತುವ ಹಾಗೆ ಇವಳು ಇದ್ದ ಕಡೆ ಹತ್ತಾರು ಜನ, ಕೈಗೆ ಒಂದು, ಕಾಲಿಗೆ ಒಂದಾಗಿ ಇರಬೇಕು. ಅದಲ್ಲದೆ ಈ ಮಗುವಿನ ಕೈಯಲ್ಲಿ ಒಂದು ಹಣ ಖರ್ಚಾಗುತ್ತೆ, ಕಾಲುವೆಯಲ್ಲಲ್ಲ ನದಿಯಲ್ಲಿ ನೀರು ಹೋಗುವ ಹಾಗೆ. ಬೆಟ್ಟದಂಥಾ ಕೀರ್ತಿ, ಪರ್ವತದಂಥಾ ಹಣ."

"ಅಣ್ಣ ತಮ್ಮಂದಿರು?"

"ಇವಳೇ ಮೊದಲನೆಯವಳು ಎಂದಮೇಲೆ ಇನ್ನು ಅಣ್ಣನೆಲ್ಲಿ? ತಮ್ಮಂದಿರು, ತಂದೆತಾಯಿಗಳ ಯೋಗದಿಂದ ಆಗಬೇಕೇ ವಿನಾ ಇವಳ ಯೋಗದಿಂದ ಆಗುವಂತಿಲ್ಲ. ಈ ಜಾತಕ ನೋಡಿದರೆ, ತಂದೆತಾಯಿಗಳಿಗೆ ಇವಳೇ ಮಗ ಮಗಳು ಎಲ್ಲಾ" ಎನ್ನುವ ಹಾಗಿದೆ.

"ತಂದೆತಾಯಿಗಳಿಗೆ, ತಾತನಿಗೆ ಎಲ್ಲರಿಗೂ ಅನುಕೂಲವಾಗಿದೆಯೋ?"

"ತಂದೆತಾಯಿಗಳಿಗೆ ಬಹಳ ಚೆನ್ನಾಗಿದೆ."

"ಮಗುವಿಗೆ ಆಯುಸ್ಸು ಹ್ಯಾಗಿದೆ?"

"ಅರುವತ್ತು ವರ್ಷದ ವರೆಗೂ ತಲೆಯ ಮೇಲೆ ಕಲ್ಲು ಎತ್ತಿ ಹಾಕಿದರೂ ದಿಗಿಲಿಲ್ಲ."

ಮುದುಕನಿಗೆ ಮುಂದೆ ಏನು ಕೇಳಬೇಕೋ ತೋರಲಿಲ್ಲ. ಮಗನ ಮುಖವನ್ನು ನೋಡಿ "ಇನ್ನೇನಾದರೂ ಕೇಳಬೇಕೇನಪ್ಪಾ?" ಎಂದನು.

"ಏನು ಕೇಳಬೇಕೋ ನನಗೇನು ಗೊತ್ತು? ಆಯುಸ್ಸು ಆಯಿತು, ಐಶ್ವರ್ಯ ಆಯಿತು, ತಂದೆತಾಯಿ, ಒಡಹುಟ್ಟು ಕೇಳಿಯಾಯಿತು. ಇನ್ನು ಸುಖವಾಗಿ ಇರುತ್ತಾಳೆಯೇ ಎಂದು ಕೇಳಬೇಕು. ಅಷ್ಟೇ!"

"ಅದೂ ನೋಡಿ, ಜೋಯಿಸರೇ! ಈ ಮಗು ಏನು ಸುಖವಾಗಿರುತ್ತದೆಯೋ? ಹ್ಯಾಗೆ?"

"ಐದು ವರ್ಷದ ವರೆಗೂ ರಾಜಭೋಗ ತಪ್ಪಿದ್ದಲ್ಲ. ಆಮೇಲೆ ಕೊಂಚ ಹಾಗೇ ಹೀಗೇ ಇದ್ದು ಮತ್ತೆ ರಾಜಯೋಗ ಆರಂಭವಾಗುತ್ತದೆ. ಬಹಳ ಪ್ರಭಾವಶಾಲಿಯಾದ ಜಾತಕ. ಬೇಕಾದಹಾಗೆ ತಾನೂ ಸುಖಪಟ್ಟು ಲೋಕಕ್ಕೂ ಉಪಕಾರ ಮಾಡಿ, ಕೀರ್ತಿ ಪಡೆಯುವ ಜಾತಕ."

ತಂದೆ ಮಕ್ಕಳು ಇಬ್ಬರಿಗೂ ಸಂತೋಷವಾಯಿತು. ತಾಂಬೂಲ ತರಿಸಿ ಹತ್ತು ರೂಪಾಯಿ ದಕ್ಷಿಣೆ ಇಟ್ಟು, ಮಗನ ಕೈಯಿಂದ ಕೊಡಿಸಿ, ಬಹು ಮರ್ಯಾದೆಯಾಗಿ "ಜೋಯಿಸರೆ, ತಾವು ಒಂದು ತಿಂಗಳಾದರೂ ಸರಿ, ಎಲ್ಲಾ ಚೆನ್ನಾಗಿ ಲೆಕ್ಕ ಮಾಡಿ, ಈ ಮಗುವಿನ ಜಾತಕ ವಿಸ್ತಾರವಾಗಿ, ಚೆನ್ನಾಗಿ, ಸಾಹುಕಾರ್ರ ಮಕ್ಕಳ ಜಾತಕ ಬರೆಯುವ ಹಾಗೆ

ಬರೆದು ಕೊಡಿರಿ. ತಮ್ಮ ಶ್ರಮ ವ್ಯರ್ಥವಾಡುವುದಿಲ್ಲ" ಎಂದು ಹೇಳಿದನು.

ಜೋಯಿಸನೂ ಯಥೋಚಿತವಾಗಿ ಉತ್ತರ ಕೊಟ್ಟು ಹೊರಟನು. ಆತನನ್ನು ಕೂರಿಸಿಕೊಂಡು ಕಾರು ಓಡಿತು.

ದಾರಿಯಲ್ಲಿ ಡ್ರೈವರು, "ಮಗುವಿನ ಜಾತಕ ಚೆನ್ನಾಗಿದೆಯೇ ಗುರುವೇ ?" ಎಂದು ಕೇಳಿದನು.

ಜೋಯಿಸನು, "ದೊಡ್ಡಮನುಷ್ಯರ ಮನೆಯಲ್ಲಿ ಹುಟ್ಟಿದ ಮಗು ಜಾತಕ ಯಾವಾಗಲೂ ಕೆಟ್ಟಿರುವುದಿಲ್ಲ. ಬಡವರ ಮನೆ ಮಕ್ಕಳಿಗೆ ಎಲ್ಲಾ ಕೊಂಚ ಕೊಂಚ. ಶ್ರೀಮಂತರ ಮನೆ ಮಕ್ಕಳಿಗೆ ಎಲ್ಲಾ ಹೆಚ್ಚು ಹೆಚ್ಚು. ಅಷ್ಟೇ! ಅಲ್ಲದೆ ನೋಡಿ ಡ್ರೈವರ್, ನಾವು ಹೇಳುವುದೆಲ್ಲಾ ಒಳ್ಳೆಯದೇ ಹೇಳಬೇಕು. ಬಾಯಲ್ಲಿ ನುಡಿಯುವಾಗ ಹೊತ್ತು ಒಳ್ಳೆಯದಾಗಿದ್ದರೆ ಒಳ್ಳೆಯದಾಗಿಹೋಗುತ್ತದೆ."

"ಕೆಟ್ಟದು ಇದ್ದರೆ?"

"ಇದ್ದರೆ, ಅವರಾಗಿ ಕೇಳಿದರೆ, ಹೇಳುವುದು. ಕೆಟ್ಟದು ಇದ್ದರೂ ತೇಲಿಸಿ ಹೇಳುವುದು. ಇಲ್ಲದೆ ಕೆಟ್ಟದು ಕಾದಿದೆ ಎಂದು ಮೊದಲೇ ಹೇಳಿ ಕೇಳಿದವರ ತಲೆ ಕೆಡಿಸುವುದು ನನಗೆ ಸಮ್ಮತವಿಲ್ಲ. ಈಗ ಈ ಮಗು ಶುದ್ಧ ಹಾದರದ ಕೊಂಪೆಯಾಗುತ್ತದೆ ಎನ್ನಿಸುವ ಹಾಗಿದೆ ಜಾತಕ. ಆದರೆ ನಾನದನ್ನು ಕೆಟ್ಟದಾಗಿ ಏಕೆ ಹೇಳಲಿ? ರಾಜಭೋಗ ಎಂದೆ. ಅರಸನಿಗೆ ಅರು ಬೀದಿ. ಕಾಣಿರಾ? ದೇವರೊಬ್ಬ ಇದ್ದಾನೆ ಎಂದು ನಂಬಿ ಒಳ್ಳೆಯದಾಡೋಣ. ಗುಲಾಬಿ ಗಿಡದ ಹತ್ತಿರಕ್ಕೆ ಹೋಗೋದು ಹೂವಿಗೋ? ಮುಳ್ಳಿಗೋ?"

ಡ್ರೈವರಿಗೆ ಆ ವಾದ ಹಿಡಿಸಿತು. ಆ ವೇಳೆಗೆ ಮನೆಯೂ ಸಿಕ್ಕಿತು. ಅವರನ್ನು ಬಿಟ್ಟು ಹಿಂತಿರುಗಿ ಬರುವಾಗ ಶುದ್ಧ ಹಾದರದ ಕೊಂಪೆ—ರಾಜಭೋಗ. "ಗುಲಾಬಿ ಗಿಡದ ಹತ್ತಿರ ಹೋಗುವುದು ಹೂವಿಗೆ ಮುಳ್ಳಿಗಲ್ಲ" ಎಂಬ ಎರಡೇ ಮಾತೇ ಅವನ ಕಿವಿಯಲ್ಲಿ ಗುಯ್ ಗುಯ್ ಎನ್ನುತ್ತಿತ್ತು.

"ನಿಜ. ಹಣವಂತರ ಭೋಗ ಎಂದರೆ ಇನ್ನೇನು? ನಾವು ಡ್ರೈವರ್‌ಗಳು ಮಾಡುವುದು ತಾನೇ ಇನ್ನೇನು? ನಾವು ನಮಗೆ ಗೊತ್ತಿರುವುದನ್ನೆಲ್ಲ ಹೊರಗೆ ಹೇಳಿದರೆ ಈ ಯಜಮಾನರುಗಳ ಮಾನ ಉಳಿದೀತೆ? ನಾವು ಎಷ್ಟೋ ನುಂಗೋಲ್ಲವೆ? ಹಾಗೇ ಈ ಜೋಯಿಸರೂ ಎಷ್ಟೋ ನುಂಗಿದರೆ ತಪ್ಪೇನು?........ಅಲ್ಲದೆ ದೊಡ್ಡ ಮನುಷ್ಯರ ಮನೆಯಲ್ಲಿ ಷೋಕಿಲಾಲಗಳೇ ಹುಟ್ಟಬೇಕು. ಆಗ ಕೆರೆಯ ತೂಬು ಎತ್ತಿದ ಹಾಗೆ ಐಶ್ವರ್ಯ ಹರಡುತ್ತದೆ........ಈ ಐಶ್ವರ್ಯ ಇನ್ನು ಯಾವ ರೂಪವಾಗಿ ಈಚೆಗೆ ಬರಬೇಕು? ಪುಣ್ಯಕ್ಕೋ ಪಾಪಕ್ಕೋ ಅಂತೂ ಹೋಗಬೇಕು. ನಮ್ಮ ರಾಯರದೇ ತಕೊಂಡರೆ, ಮುದುಕಂದು ಲಕ್ಷಾಂತರ. ಇವರದೂ ಭಾರಿಯ ಸಂಪಾದನೆ. ಏನಿಲ್ಲ ಎಂದರೂ ತಿಂಗಳಿಗೆ ಒಂದೊಂದೂವರೆ ಸಾವಿರ ರೂಪಾಯಿ. ಇಷ್ಟೆಲ್ಲಾ ಏನಾಗ ಬೇಕು! ಪುಣ್ಯಕ್ಕೆ ಕೊಡೋಕೆ ಆಗೋದಿಲ್ಲ. ಅದರಿಂದ ಪಾಪಕ್ಕೇ ಹೋಗಬೇಕು. ಹೋಗಲಿ. ಅಂತೂ ಇಂತೂ ಐಶ್ವರ್ಯ ಒಂದು ಕಡೆ ಇರೋದಿಲ್ಲ...." ಎಂದು ಏನೇನೋ ಯೋಚಿಸಿಕೊಂಡು ಬಂದನು. ಯೋಚನೆ ಮುಗಿಯಲಿಲ್ಲ; ದಾರಿ ಮುಗಿಯಿತು. ಕಾರು ಷೆಡ್ಡಿನಲ್ಲಿ ಬಿಟ್ಟುಬಂದನು.

ರಮೇಶನೇ ಬಂದು "ಡ್ರೈವರ್, ಊಟ ಮಾಡಿಕೊಂಡು ತಾಂಬೂಲ ತೆಗೆದುಕೊಂಡು ಹೋಗಬೇಕು" ಎಂದು ಹೇಳಿದನು. ಚೊಕ್ಕಭೋಜನ—ಯಜಮಾನರು ಎದುರಿಗೆ ಕುರ್ಚಿ ಹಾಕಿಕೊಂಡು ಬಲವಂತ ಮಾಡಿ ಬಡಿಸಿಸಿದರು. ಒಂದೂವರೆಯೂಟ ಹೊಡೆದು ಎದ್ದು ಬರುವ ವೇಳೆಗೆ ತಾಂಬೂಲವೂ ಬಂದಿತ್ತು. ಅದರಲ್ಲಿ ಒಂದು ಕಾಗದವೂ ಇತ್ತು. ಅದು ಹತ್ತು ರೂಪಾಯಿ ಎಂದು ನೋಡುತ್ತಿದ್ದ ಹಾಗೇ ತಿಳಿಯಿತು.

ಡ್ರೈವರಿಗೂ ಸಂತೋಷವಾಯಿತು. ಮನೆಗೆ ಹೋಗುತ್ತಾ ದಾರಿಯಲ್ಲಿ ತ್ರೀಕ್ಯಾಸಲ್ಸ್ ಒಂದು ಪ್ಯಾಕೆಟ್ ತೆಗೆದುಕೊಂಡು, ಸೇದುತ್ತಾ ಹೋದನು. ಅದೇನೋ ಊಟವಾದ ಮೇಲೆ ಜೋಯಿಸನ

ಮಾತು ವ್ಯತ್ಯಸ್ತವಾಗಿ "ರಾಜಭೋಗ ಎಂದರೆ ಇನ್ನೇನು ಬರಿಯ ಹಾದರದ ಕೊಂಪೆ" ಎಂಬುದಾಗಿ ಅವನ ಮನಸ್ಸಿನಲ್ಲಿ ನುಡಿಯುತ್ತಿತ್ತು. ಅವನ ಮನಸ್ಸೂ "ಬಿಡು, ಹೆಣ್ಣಿಗೆ ಗಂಡು, ಗಂಡಿಗೆ ಹೆಣ್ಣು, ಬಿಟ್ಟರೆ ಈ ಲೋಕದಲ್ಲಿ ಇನ್ನೇನು ಇದೆ, ದೇವರು ಇನ್ನೇನಾದರೂ ಪೋಕೀ ದಾರಿ ತೋರಿಸಿದ್ದಾನೇನು?" ಎಂದು ಇನ್ನೂ ಏನೇನೋ ಯೋಚನೆ ಮಾಡುತ್ತಿತ್ತು.

* * *

ಕೊನೆಗೂ ಜೋಯಿಸರು ಧೈರ್ಯ ಮಾಡಿ ರಾಯರ ಹತ್ತಿರ ಹೇಳಿಯೇಬಿಟ್ಟರು: "ಏಕಾದಶದಲ್ಲಿ ಶುಕ್ರ ನೀಚನಾಗಿದ್ದಾನೆ. ದ್ವಾದಶದಲ್ಲಿ ರವಿ ನೀಚನಾಗಿದ್ದಾನೆ. ಅದರಿಂದ ಒಂದು ಶಾಂತಿ ಆಗಬೇಕು. ಇಲ್ಲದಿದ್ದರೆ ದುರ್ಯೋಗಗಳು ತಪ್ಪುವಹಾಗಿಲ್ಲ." ಎಂದು. ರಾಯರು ಶಾಂತಿಗೆ ಒಪ್ಪಿದರು ಇನ್ನೊಂದು ದಿನ ಹತ್ತಾರು ಜನ ಕರೆದು ಅನ್ನ ಹಾಕಿ ಹೊಗಳಿಸಿಕೊಳ್ಳಬಹುದು ಎಂದು. ರಮೇಶ ಒಪ್ಪಿದನು ತಂದೆಯ ಮನಸ್ಸು ಯಾಕೆ ಮುರಿಯಬೇಕು ಎಂದು. ಅಂತೂ ಹನ್ನೊಂದನೆಯ ದಿನ, ತಂದೆಗೆ ಆದರೆ ಆಗಿಹೋಗಲಿ ಎಂಬ ಭಾವದಿಂದ, ತಾತನಿಗೆ ಆದರೆ ಒಳ್ಳೆಯದು, ನಮ್ಮ ಹೆಸರು ಅಷ್ಟು ಬೆಳೆದೀತು ಎಂಬ ಭಾವದಿಂದ, ಅಂತೂ ಶಾಂತಿಯಾಗಿ ನಾಮಕರಣವಾಯಿತು.

ಶಾಂತಿಯ ದಿನ ರಾಯರು ಹತ್ತು ಜನ ಎಂದು ಐವತ್ತು ಜನ ವನ್ನು ಊಟಕ್ಕೆ ಕರೆದಿದ್ದರು. ತಂದೆಗೆ "ಏನೋ 'ಬ್ರಾಹ್ಮಣರು' ಬಂದು ತಿಂದುಹೋಗಲಿ. ಎಷ್ಟೇ ಆಗಲಿ 'ಗಾಯಿತ್ರೀ' ಜಪ ಮಾಡುವ ಮಂದಿಯಲ್ಲವೋ? ನಮ್ಮದಷ್ಟು ಆ ಹೊಟ್ಟೆಯಲ್ಲಿ ಬಿದ್ದಿದ್ದರೆ, ಸೇವಿಂಗ್ಸ್ ಬ್ಯಾಂಕ್ ಹಣದ ಹಾಗೆ ಯಾವೊತ್ತಿಗಾದರೂ ಕೆಲಸಕ್ಕೆ ಬಂದೀತು" ಎಂಬ ಭಾವನೆ. ಜೊತೆಗೆ ಮುದುಕನಿಗೆ ದೇವತೆಗಳಿಲ್ಲ ಎನ್ನುವ ಧೈರ್ಯ ಇಲ್ಲ. ಅವನೇ ಸಾಕ್ಷಾತ್ತು ಸುಬ್ರಹ್ಮಣ್ಯ, ಧರ್ಮಸ್ಥಳ ಗಳಿಗೆ ಹೋಗಿ ಬಂದಿದ್ದನಲ್ಲವೋ? ಆ ಹೋಗಿದ್ದಾಗ ಅಲ್ಲಿ ಒಬ್ಬರ ಮೇಲೆ ಒಂದು ಬ್ರಹ್ಮರಾಕ್ಷಸ ಬಂದು, ಮಂಜಪ್ಪನ ಮುಂದೆ ಪ್ರಮಾಣ

ಾಡಿ, "ನಾನು ಹೋಗುತ್ತೇನೆ. ಇರುವುದಿಲ್ಲ" ಎಂದು ಮಾತು ೊಟ್ಟಿದ್ದು: ಆ ದಿನದ ರಂಪ, ರಾದ್ಧಾಂತ, ಆಗಾತ್ಯ, ಅಬ್ಬ, ನ್ನೂ ಕಣ್ಮುಂದೆ, ಈಗ ನಡೆಯುತ್ತಿದ್ದ ಹಾಗೇ ಇದೆ. ಏನೋ ಂತೋ ಅಂತೂ ದೇವತೆಗಳ ಹೆಸರಿನಲ್ಲಿ ಒಂದಿಷ್ಟು ತುಪ್ಪ ಸುಟ್ಟಿದ್ದರೆ, ನಾದರೂ ಕೆಟ್ಟದ್ದು ಆಗುವ ಸಂದರ್ಭ ಬಂದಾಗ ಅವರು ಅಡ್ಡಿ ಂದರೂ ಬಂದಾರು ಎಂಬ ಲೇವಾದೇವಿಯ ಭಾವ.

ಮಗುವಿನ ತಂದೆ ರಮೇಶನಿಗೆ ಎರಡು ಲಾಭ. ಕಾಸು ಬಿಚ್ಚು ವಕ್ಕೆ ಹಿಂತೆಗೆಯುವ ತಂದೆಯ ಅಂಕೆಯಿಲ್ಲದೆ ಕ್ಲಬ್ಬಿನ ಗೆಳೆಯರನ್ನು ೂಟಕ್ಕೆ ಕರೆಯಬಹುದು ಒಂದು. ತಂದೆಯ ಬಳಿ ನಮ್ಮ ರಮೇಶ ನ್ನ ಮಾತು ಮೀರುವುದಿಲ್ಲ ಎಂದು ಒಳ್ಳೆಯ ಮಾತು ಪಡೆದುಕೊಳ್ಳ ಹುದು ಎಂಬುದು ಇನ್ನೊಂದು. ಅಂತೂ ಶಾಂತಿ ನಾಮಕರಣ ಡೆಯಿತು.

ಅಂದಿನ ರಾತ್ರಿ ರಮೇಶನ ಗೆಳೆಯರೆಲ್ಲ ಬಂದಿದ್ದಾರೆ. ರಮೇಶನು ಂದವರನ್ನೆಲ್ಲ ಕೈಕಾಲಿಗೆ ನೀರು ಕೊಟ್ಟು ಉಪಚಾರ ಮಾಡಿ ಕರೆದು ೊಂಡುಬಂದು ಊಟಕ್ಕೆ ಕೂಡಿಸಿದ್ದಾನೆ. ಸೊಗಸಾದ ಬಾಳೆಯೆಲೆಗಳು. ದರ ತುಂಬಾ ಚಟ್ನಿಯಿಂದ ಹಿಡಿದು ಪಾಯಸದ ವರೆಗೆ ಬೇಕುಬೇಕಾ ುದನ್ನೆಲ್ಲ ಬಡಿಸಿದೆ.

ಊಟವು ಆರಂಭವಾಯಿತು. ಪ್ರತಿಯೊಬ್ಬರೂ ಸ್ವತಂತ್ರರು. ೇಕಾದ ಮಾತು ಆಡಬಹುದು. ಬಂದವರೆಲ್ಲ ತಮ್ಮ ಮನಸ್ಸಿಗೆ ಂದಂತೆ ಬ್ಯಾಟೋ ಬಾಲೋ ತೆಗೆದುಕೊಂಡು ಫೀಲ್ಡಿಗೆ ಇಳಿದರೆ ೇನಾಗಬಹುದೋ ಹಾಗೆ ಮಾತು ನಾನಾ ಮುಖವಾಗಿದೆ.

ಒಬ್ಬರು ಕೇಳಿದರು: "ಏನ್ರಿ? ನಿಮ್ಮ ಒಪಿನಿಯನ್ ಏನು? ಈಸ್ ಅಟ್ಲೀಸ್ ಗವರ್ನಮೆಂಟ್ ಸೀರಿಯಸ್ ಇನ್ ಆಫರಿಂಗ್ ಇಂಡಿ-ಪೆಂಡೆನ್ಸ್ ?"

ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದರು: "ನೋಡ್ರಿ, ಇಂಗ್ಲಿಷ್ ಆರ್ ಮಾಸ್ಟರ್ಸ್ ಇನ್ ಡಿಪ್ಲೋಮಸಿ. ಹೀಗೆ ಅಂತ

ಅವರ ವಿಷಯ ಹೇಳೋಹಾಗಿಲ್ಲ. ದೇ ಚೇಂಜ್ ದೇರ್ ಕಿಂಗ್ಸ್ ಜಸ್ಟ್ ಅಸ್ ಯೂ ಅಂಡ್ ಐ ಡು ಅವರ್ ಹ್ಯಾಟ್ಸ್. ಅಂಥಾವರು ದೇ ಕ್ಯಾನ್ ಡು ಎನಿಥಿಂಗ್"

"ದಯವಿಟ್ಟು ಕ್ಷಮಿಸಿ ಸಾರ್. ಇಟ್ ಈಸ್ ದಿ ಡಿಪ್ಲೋಮ್ಯಾಟಿಕ್ ಮೂವ್. ದೇ ಮಸ್ಟ್ ಹ್ಯಾವ್ ಸಮ್‌ಥಿಂಗ್ ಅಪ್ ದೇರ್ ಸ್ಲೀವ್"

"ನೋ ನೋ, ದಿ ಫಾರ್ಟಿ ಟೂ ಅಪ್ ಹೀವಲ್ ಹ್ಯಾಸ್ ಓಪನ್ಡ್ ದೇರ್ ಐಸ್. ದೇ ಮೇ ಲೀವ್ ಇಂಡಿಯ."

"ಇಲ್ಲರೀ, ದೇ ಆರ್ ಓಲ್ಡ್ ಬ್ಯಾಂಡಿಕೂಟ್ಸ್, ಎಲ್ಲಿ ಬಿಡುತಾರ್ರಿ, ಇಟ್ಸ್ ಎ ಫಾಂಡ್ ಹೋಪ್ ಅವರ್ ಕಾಂಗ್ರೆಸ್ ಲೀಡರ್ಸ್"

"ಮುಚ್ಚರೀ, ಯೂ ಡೋಂಟ್ ನೋ ವಾಟ್ ಕಾಂಗ್ರೆಸ್ ಹ್ಯಾಸ್ ಡನ್! ದಿ ಹೋಲ್ ಕಂಟ್ರಿ, ದಿ ಹೋಲ್ ಕಾಂಟಿನೆಂಟ್, ಈಸ್ ಅಪ್ ಅಗೇಯ್‌ನ್‌ಸ್ಟ್ ದಿ ಬ್ರಿಟಿಷ್ ರೂಲ್. ಈಗ ಹೇಗಿರಿ ಅವರು ಆಳೋದು?"

"ಮೈ ಫ್ರೆಂಡ್! ಕೊಂಚ ನಿದಾನಿಸಿ. ದಿ ಬ್ರಿಟಿಷರ್ ರೈಸಸ್ ಟು ದಿ ಅಕೇಷನ್. ಹಿ ಹ್ಯಾಸ್ ಡೆಮಾನ್‌ಸ್ಟ್ರೇಟೆಡ್ ಹೀಸ್ ಮೆಯಿಲ್ ಫಿಸ್ಟ್."

"ಐಸೆ, ಅದಿರಲಿ, ಇನ್ನೊಂದು ಮಾತು. ಉಶ್ ಹಿಯರ್! ಡಸ್ ದಿ ಕಂಟ್ರಿ ವಾಂಟ್ ಇಂಡಿಪೆಂಡೆನ್ಸ್ ಆರ್ ದಿ ಕಾಂಗ್ರೆಸ್?"

"ಹೇಳಲೇನ್ರಿ? ವಿತ್ ಡ್ಯೂ ಅಪಾಲಜೀಸ್ ಟು ಅವರ್ ಕಾಂಗ್ರೆಸ್ ಫ್ರೆಂಡ್. ಇಟ್ಸ್ ದಿ ಕಾಂಗ್ರೆಸ್ ದಟ್ ವಾಂಟ್ಸ್ ಇಂಡಿಪೆಂಡೆನ್ಸ್ ಅಂಡ್ ನಾಟ್ ದಿ ಕಂಟ್ರಿ."

"ಸಾಕು ಸುಮ್ಮನಿರ್ರಿ. ಷಟ್ ಅಪ್, ಅಂತೀನಿ. ದಿ ಹೋಲ್ ಕಂಟ್ರಿ ಈಸ್ ವಿತ್ ಕಾಂಗ್ರೆಸ್. ನಿಮ್ಮಂಥಾವರು ಕೆಲವರು. ಬಾಯಿ ಬಿಟ್ಟು ಹೇಳಿತೀನಿ. ಐ ಡೋಂಟ್ ವಾಂಟ್ ಟು ಕಾಲ್ ಯೂ ಕವರ್ಡ್ಸ್, ನಿಮ್ಮಂಥಾವರು ಗವರ್ನಮೆಂಟ್ ಸೈಡ್ ಹಿಡಿದಿದ್ದೀರಿ, ಅಷ್ಟೆ?"

"ಗೀವ್ ಹಿಮ್ ಸಮ್ ಕೋಲ್ಡ್ ವಾಟರ್ ಐಸೆ. ಎಂಜಿನ್ ಈಸ್
ಾಪರ್ ಹೀಟೆಡ್, ನೋಡಿ, ದಯವಿಟ್ಟು ಸಭಿಕರೆಲ್ಲ ನೋಡಿ. ನಾವು
ವರ್ಡ್ಸ್, ಲಾ ಅಂಡ್ ಆರ್ಡರ್ ಎಂತ ಒದ್ದಾಡುತೀವಿ. ಸೀ,
ಬ್‌ಸರ್ವ್ ದಿಸ್ ಹೀರೋ ಹೂ ಲೂಸಸ್ ಹಿಸ್ ಹೆಡ್ ಎವ್ವೆರಿ
ಾಮೆಂಟ್ ದಿ ಅಪರ್ಚುನಿಟಿ ಕಮ್ಸ್. ನಾಳೆ ಇಂಡಿಪೆಂಡೆನ್ಸ್ ಬಂದರೆ,
ಸ್ಯಂಡ್ ಇಟ್, ಇಫ್ ಇಟ್ ಕಮ್ಸ್, ಇವರು, ಇವರ ಕುಲ ತಾನೇ
ುನಿಸ್ಟರ್ಸ್ ಆಗೋದು? ಆಗ ಜನ ಏನಂತಾರೆ ಗೊತ್ತೆ? ಕನ್ನಡದಲ್ಲಿ
ಾದೆ ಇದೆಯಲ್ಲ ಕರೆಯೋ ಎಮ್ಮೆ ಕೊಟ್ಟು ಅಂತ ಹಾಗಾಗೋಲ್ಲ;
ದನ್ನು ಕಂಡ ಸಮ್ಮಂಥಾ ಕವರ್ಡ್ಸ್, ಓ ಲಾರ್ಡ್, ಸೇವ್ ಅಸ್
ರ್ಾಂ ಅವರ್ ಫ್ರೆಂಡ್ಸ್ ಅಂತ ಒಂದು ಎಸ್. ಓ. ಎಸ್. ಡೈರೆಕ್ಟಾಗಿ
ೇವನ್ನಿಗೇ ಕಳುಹಿಸಿದರೆ ತಪ್ಪೇನ್ರಿ?"

"ಇರಲಪ್ಪಾ! ಆಸ್ ಐ ಸೇ ಇನ್ ಕೋರ್ಟ್, ಲೆಟ್ ದಿಸ್ ಬಿ
ಕಾರ್ಡೆಡ್. ಮುಂದಕ್ಕೆ ಹೋಗೋಣ. ಇಂಡಿಪೆಂಡೆನ್ಸ್ ಬಂತೂ
ನ್ನಿ. ಆಗ ಕಂಟ್ರಿ ಏನಾಗತ್ತೆ?"

"ಆಗೋದೇನ್ರಿ, ಮಹಾತ್ಮಾ ಈಸ್ ದಿ ಲೀಡರ್. ಹಿಸ್ ಈಸ್
ಸಾಬರಮತಿ ಪಾಲಿಸಿ. ಮುಸ್ಲಿಂ ಲೀಗಿಗೆ ಪಟ್ಟಾಕಟ್ಟಿ ಅವರು ಚರಕಾ
ೊಡೀತಾ ಕೂತು ಕೇಳ್ತಾರೆ."

"ಡು ಅದರ್ಸ್ ಅಗ್ರೀ?"

"ಆರ್ ಯೂ ಷ್ಯೂರ್ ದೇರ್ ಆರ್ ಅದರ್ಸ್ ಹೂಸ್ ಡಿಸಗ್ರಿ
ಮೆಂಟ್ ಕೌಂಟ್ಸ್, ಇಂಪಾಸಿಬಲ್, ನೋಡತಿರ್ರಿ, ದಿ ಲೀಗ್ ವಿನ್ಸ್
ಇಯದರ್ ವೇ! ಇಯದರ್ ಪಾಕಿಸ್ತಾನ್, ಆರ್ ಪವರ್ ಇನ್ ಹಿಂದೂ
ಸ್ತಾನ್. ಬೆಳಕಿನ ಜೊತೇಲೆ ಕತ್ತಲೆ ಬೆಳೆದ ಹಾಗೆ, ಫಾರ್ ದಿ ಲಾಸ್ಟ್
ಕ್ವಾರ್ಟರ್ ಆಫ್ ಎ ಸೆಂಚುರಿ, ಕಾಂಗ್ರೆಸ್ಸಿನ ಸ್ಟ್ರೆಂಗ್ತ್ ಬೆಳೆದ ಹಾಗೆಲ್ಲ
ಮುಸ್ಲಿಂ ಲೀಗ್ ಹ್ಯಾಸ್ ಗ್ರೋನ್."

"ಹಾಗಾದರೆ ವಾಟ್ ಈಸ್ ದಿ ಸಲ್ಯೂಷನ್?"

"ಸಲ್ಯೂಷನ್ ಏನು. ವಿ ವಾಂಟ್ ಎ ಲಿಂಕನ್, ಆರ್ ಅಬ್ರಹಾಂ

ಲಿಂಕನ್. ಹೂಸ್ ಕಾಮನ್‌ಸೆನ್ಸ್ ಸೆಡ್ ದಿ ಸಜೆಸ್ ಸ್ಟೇಟ್ಸ್ ಷಲ್ ನಾಟ್ ಸೆಸೀಡ್. ವಿ ಷಲ್ ಹೋಲ್ಡ್ ದೆಂ. ಬಟ್, ಸ್ವಾಮಿ, ಮಹಾತ್ಮಾ ಕೆನಾಟ್ ಡು ದಟ್. ಅಂಡ್ ವಿ ಕೆನಾಟ್ ಸೀ ಬಿಯಾಂಡ್ ಮಹಾತ್ಮಾ! ಕಂಟ್ರಿ ಈಸ್ ಡೂಮ್ಡ್!"

"ಓ, ಬಿಡರಿ, ವಿ ಆರ್ ಅವೇಕನ್‌ಡ್. ವೇರ್ ದಿ ಬ್ರಿಟಿಷ್ ಫೇಯಿಲ್ಡ್, ದಿ ಮುಸ್ಲಿಂ ಡಸ್ ನಾಟ್ ಸಕ್ಸೀಡ್."

"ಬಿಡಿರಿ, ಈ ಬ್ಲಫ್! ಮುಸ್ಲಿಂ ನೋಸ್ ದಟ್ ಹಿ ರೂಲ್ಡ್ ಇಂಡಿಯ ಫಾರ್ ಎ ಥೌಸಂಡ್ ಇಯರ್ಸ್. ನೀವು ತ್ರೇತಾಯುಗದ ರಾಮ, ದ್ವಾಪರ ಯುಗದ ಯುಧಿಷ್ಠಿರ ಕೃಷ್ಣರನ್ನು ಹೇಳಿದರೆ, ಅವನು ಅಕ್ಬರ್ ಔರಂಗ್‌ಜೇಬ್ ಹೇಳುತ್ತಾನೆ. ಫರ್ದರ್, ನಮಗೆ, ಮಹಾಸ್ವಾಮಿ, ನಮಗೆ, ಯೂನಿಟಿ ಇಲ್ಲ: ಪರ್ಪಸ್ ಇಲ್ಲ: ಮ್ಯೂಚಲ್ ಟ್ರಸ್ಟ್ ಇಲ್ಲ; ಕಾನ್‌ಫಿಡೆನ್ಸ್ ಇಲ್ಲ, ಈಗ ಬ್ರಿಟಿಷರು ದಬಾಯಿಸ್ತಿದ್ದಾರೆ ಅಂತ ದೇರ್ ಈಸ್ ಎಸೆಂಬ್ಲೆನ್ಸ್; ಎ ಷೋ ಆಫ್ ಪೆಟ್ರಿಯಾಟಿಕ್ ಅಪ್ಪೊಸಿಷನ್, ಸ್ಟೀಲ್ ಫ್ರೇಂ ಅಂದನಲ್ಲ ಆ ಚರ್ಚ್‌ಹಿಲ್, ಆ ಸ್ಟೀಲ್ ಫ್ರೇಂ ನಮ್ಮಲ್ಲಿ ಇದೆಯೇನ್ರಿ? ಡು ಯು ನೋ, ವಾರ್‌ನಲ್ಲಿ ಅಂಡಿಸೈರ-ಬಲ್ಸ್ ಹ್ಯಾವ್ ಅನ್‌ಸ್ಕ್ರೂಪಲಸ್ಲಿ ಅಕ್ವೈರ್ಡ್ ಮನಿ. ಮನಿ ಮೀನ್ಸ್ ಇನ್‌ಫ್ಲೂಯನ್ಸ್. ನಾಳೆ ಇಂಡಿಪೆಂಡೆನ್ಸ್ ಬಂದರೆ, ಈ ಅನ್‌ಸ್ಕ್ರೂಪಲಸ್ ಅನ್‌ಡಿಸೈರಬಲ್ಸ್ ಕೈಗೇ ಪವರ್ ಬಂದ ಹಾಗೆ ತಿಳಿಕೊಳ್ಳಿ."

"ಯೂ ಆರ್ ಪರ್ಫೆಕ್ಟ್ಲಿ ರಾಂಗ್, ಗೊತ್ತೇನ್ರಿ? ಕಾಂಗ್ರೆಸ್ ವಾಂಟ್ಸ್ ಪವರ್ ಟು ಮರ್ಸಿಲೆಸ್ಲಿ ಪುಟ್‌ಡೌನ್ ಅನ್‌ಸ್ಕ್ರೂಪಲಸ್ ಅಕ್ವಿಜಿಷನ್."

"ಆರ್, ಹೇಳಿ."

"ನೀವೇ ಹೇಳಿ."

"ಸಕಂಬ್ಸ್ ಟು ಇಟ್."

* * * *

ರಮೇಶನಿಗೆ ಅಲ್ಲಿಗೆ ಸಾಕು ಮಾಡದಿದ್ದರೆ ವಿರಸವಾದೀತು ಅನ್ನಿಸಿತು. ತನ್ನ ಗೆಳೆಯನಿಗೆ ಸನ್ನೆ ಮಾಡಿದನು.

ಮಧ್ಯದಲ್ಲಿ ಇನ್ನೊಬ್ಬರು ಬಾಯಿ ಹಾಕಿದರು: ಪಾಯಿಂಟ್ ಆಫ್ ಆರ್ಡರ್ ಪ್ಲೀಸ್, ರಮೇಶ್‌ರು ನಮ್ಮನ್ನು ಊಟಕ್ಕೆ ಕರೆದುದು ಪಾಲಿಟಿಕ್ಸ್ ಡಿಸ್‌ಕಸ್ ಮಾಡೋಕೆ ಇನ್ನು ಒಂದು ಫ್ರಂಟ್ ಸೃಷ್ಟಿಸುವುದಕ್ಕಲ್ಲ. ಅವರಿಗೆ ಮಗುವಾದ ಸಂತೋಷ ನಮಗೆ ತೋರಿಸಿ, ಇಫ್ ಯೂ ಕೆನ್, ಬ್ಲೆಸ್‌ಹರ್ ಬ್ಲೆಸ್ ಮಿ ಟೂ ಇಫ್ ಯು ಪ್ಲೀಸ್. ಎಂದು. ಈಗ ಟು ದಿ ಪಾಯಿಂಟ್. ರಮೇಶರಾವ್, ಅವರ ಮಗು, ಇಬ್ಬರನ್ನೂ ಬ್ಲೆಸ್ ಮಾಡುವ ಕೆಲಸ ನಡೆಯಲಿ"

"ಸರ್ಟನ್ಲಿ, ಪಾಣೇಶ್ ನಿಜ ನಿಮ್ಮ ಮಾತು. ಇಫ್ ಯೂ ಕೇ ಬ್ಲೆಸ್ ಹರ್, ಆಯಿತು. ಇಫ್ ಏಕೆ ಹಾಕಿದಿರಿ? ನಮಗೆಲ್ಲ ಬ್ಲೆಸ್ಸಿಂಗ್ ಪವರ್ ಇಲ್ಲ ಎಂತ ನಿಮಗೆ ಯಾರು ಹೇಳಿದರು?"

"ಅದು ಇಂಗ್ಲಿಷ್ ಈಡಿಯಮ್ ಕಣ್ರಿ"

"ಈಡೀಯಮ್ಮೂ ಅಲ್ಲ ಮಣ್ಣೂ ಅಲ್ಲ. ಪ್ರಾಣೇಶ್ ಡಿಡ್ ಇಟ್ ಡೆಲಿಬರೇಟ್ಲಿ, ಅವರೂ ಬಹಳ ಕಿಲಾಡಿ, ಈ ಲಾಡು, ಈ ಫೇಣಿ, ಈ ಖೀರು ಹೊಡೆದು ಹೊಟ್ಟೆತುಂಬಿ, ಮನಸ್ಸು ತಣ್ಣಗಾಗಿರುವಾಗ, ನಿಮ್ಮ ಸ್ವರೂಪ ನೋಡಿಕೊಳ್ಳಿ ಎಂದು ಅಬ್ಯೂಸ್ ಮಾಡಿದರೂ ಯಾರೂ ಮೇಲೆ ಬೀಳೋಲ್ಲ ಅಂತ. ಹೌದೋ ಅಲ್ಲವೋ? ನಿಜ ಹೇಳ್ರಿ! ಪ್ರಾಣೇಶ್"

ಪ್ರಾಣೇಶ್ ಖೀರು ಕುಡಿಯುತ್ತಿದ್ದರು. ಕಪ್ಪು ಕೆಳಗಿಟ್ಟು "ಅಯ್ಯೋ, ಮಾತು ಆಡಿದೆಯೋ ಮುತ್ತು ಒಡೆದೆಯೋ ಅಂತ ಗಾದೆ. ನಾನು ಇಟ್ಸ್ ಓವರ್. ನಾನು ಆಡಿದ್ದು ಆಗಿಹೋಯ್ತು, ಅದಕ್ಕೆ ಏನೇನು ಇಂಟರ್‌ಪ್ರೆಟೇಷನ್ ಬಂದರೂ ಬರಲಿ ಎನ್ನಬೇಕು. ನಾವು ಲಾಯರ್‌ಗಳು ಮೂರು ಹೊತ್ತೂ ಮಾತು ಮಾತು ಮಾತು. ನಮ್ಮ ಪ್ರೊಫೆಷನ್ನೇ ಅದು. ಇಲ್ಲಿ ನೋಡಿ. ಡೂಸ್ ಅಂಡ್ ಡೋಂಟ್ಸ್, ಘಟಾನುಘಟಿಗಳು, ಅವರು ಮಾತನಾಡಲಿ, ಕೇಳೋಣ."

ಅವರಲ್ಲೊಬ್ಬರು ನಗುತ್ತಾ ಉತ್ತರಕೊಟ್ಟರು: "ನಮ್ಮದೆಲ್ಲ ಏನು ಮಹಾ ಸಾರ್! ಫ್ಯಾಕ್ಟ್ಸ್ ಫಿಗರ್ಸ್ ಇಟ್ಟುಕೊಂಡು ಟು ದಿ ಪಾಯಿಂಟ್ ಎರಡು ಮಾತಾಡೋರು. ನಿಮ್ಮ ಹಾಗೆ ಆ ಫ್ಲಾಷ್, ಆ ರೋರ್ ನಮಗೆಲ್ಲಿ ಬರಬೇಕು? ಅಲ್ಲದೆ, ನಮ್ಮ ಸಂಗೀತಗಾರರ ಹಾಗೆ ಯೂ ಆಲ್‌ವೇಸ್ ಪ್ರಾಕ್ಟೀಸ್ ಯುವರ್ ಆರ್ಟ್ ಅಂಡ್ ಗೆಟ್ ಪೆಯಿಡ್ ಫಾರ್ ಇಟ್."

"ನೋಡಿದಿರೇನಯ್ಯಾ! ಅವರನ್ನು ಮಾತನಾಡಿಸಿದಿರಿ, ಯೂ ಬ್ಲಫ್, ಯೂ ಬ್ಲರ್ಟ್ ಎಂದರು. ಬಟ್ ಪ್ರೊಫೆಸರ್, ಇಟ್ ಈಸ್ ದಿಸ್ ಕ್ಲಾಸ್ ದಟ್ ಸಪ್ಲೈಸ್ ಯುವರ್ ರೂಲರ್ಸ್, ಹೌದೋ ಅಲ್ಲವೋ?"

ಅಷ್ಟರೊಳಗಾಗಿ ರಮೇಶ್ ಬಾಯಿಹಾಕಿ "ಆನರ್‌ಬಲ್ ಮೆಂಬರ್ಸ್ ವಿಲ್ ಅಡ್ಜರ್ನ್ ಟು ದಿ ಅಪ್‌ಸ್ಟೇಯರ್ಸ್" ಎಂದು ಕೈಮುಗಿದನು.

ಮತ್ತೆ ಎಲ್ಲರೂ ಮಹಡಿಯ ಮೇಲೆ ಸೇರಿದರು. ಅಡಕೆಲೆ, ಸಿಗರೇಟು, ಎಲ್ಲ ಕಾದಿತ್ತು, ಅಲ್ಲಿ ಕೆಲವರು ಸೋಫಾದ ಮೇಲೆ, ಕೆಲವರು ಕೆಳಗೆ ಕುಳಿತಿದ್ದಾರೆ. ಅಡಕೆಲೆ ಆಯಿತು. ಧೂಮಪಾನ ಆಗುತ್ತಿದೆ. ಮತ್ತೆ ಮಾತಿನ ಹೊಳೆ ಹರಿಯಿತು. ಆ ಮಾತು ಈ ಮಾತು ಆಡುತ್ತಾ ಒಬ್ಬರು "ವಿ ಹ್ಯಾವ್ ಟು ಥ್ಯಾಂಕ್ ದಿ ಸ್ಟಾರ್ಸ್ ಫಾರ್ ದಿಸ್ ಗುಡ್ ಡಿನ್ನರ್" ಎಂದರು.

"ಬೈ ದಿ ಬೈ, ಪ್ರೊಫೆಸರ್, ಯೂ ಆರ್ ದಿ ಪ್ರಾಪರ್ ಮ್ಯಾನ್ ಟು ಟೆಲ್ ಅಸ್. ಏನ್ರಿ? ಈ ಅಸ್ಟ್ರಾಲಜಿ ಹೇಳೋದು ನಿಜವೇ? ನೀವು ನಂಬುತ್ತೀರಾ?"

"ಫೇಯಿತ್ ಬೇರೆ, ನಾಲೆಜ್ ಬೇರೆ, ಫೇಯಿತ್ ನಿಮ್ಮದು, ನಾಲೆಜ್ ಎಲ್ಲರಿಗೂ ಸೇರಿದ್ದು. ನೀವು ನಂಬಿ, ಬಿಡಿ, ಅದು ನಿಮ್ಮ ಲುಕ್ಔಟ್. ಆದರೆ ನಾಲೆಜ್ ಹಾಗೆಲ್ಲ ಬೈಂಡಿಂಗ್. ಆದರಿಂದ ನಾನು ನಂಬುತ್ತೇನೋ

ಲ್ಲವೋ ಅದನ್ನು ಬಿಟ್ಟು ಮುಂದೆ ಮಾತಾಡೋಣ. ನಮ್ಮ ಹಿಂದಿನವರ ನಾತು ನಾವು ಇವೊತ್ತು ಏನಿದ್ದರೂ ಪ್ಲಾಟ್‌ಫಾರಂಗಳ ಮೇಲೆ ನಿಂತಾಗ ನೆಸಿಕೊಳ್ಳುತ್ತೇವೆಯೇ ಹೊರತು ನಿತ್ಯಜೀವನದಲ್ಲಿ ಅದಕ್ಕೆ ಅವಕಾಶವೇ ಬಿಟ್ಟಿಲ್ಲ. ಅವರಿಂದ ಆ ಮಾತು ಬಿಟ್ಟು ಇವೊತ್ತು ಈಗಿನ ಸೈನ್ಸ್ ನು ಹೇಳುತ್ತದೆಯೆಂದು ನೋಡೋಣ. ಪ್ಯೂರ್ ಸೈನ್ಸ್ ಈ ವಿಚಾರ ತ್ತುವುದಿಲ್ಲ. ಆದರೂ ಜನವೇನೋ ಅಸ್ಟ್ರಾಲಜಿ ಬಿಟ್ಟಿಲ್ಲ. ಇತ್ತ ಕಡೆ ನೋಡಿದರೆ, ಈ ಯೂನಿವರ್ಸ್ ಎಲ್ಲಾ ಯಾವಾಗಲೋ ಒಂದು ಕಾಲ ಲ್ಲಿ ಒಂದೇ ಯೂನಿಟ್ ಆಗಿತ್ತು ಎನ್ನುವ ಭಾವ ಬೆಳೆದಿದೆ. ಎಲ್ಲದ ಕ್ಕಿಂತ ಹೆಚ್ಚಾಗಿ ನಮ್ಮ ವರ್ಲ್ಡ್ ಪ್ಲಾನೆಟ್ಸ್ ಪೈಕಿ ಒಂದು, ಇವೆಲ್ಲ ಬ್ಬನೇ ಸೂರ್ಯನಿಂದ ಬಂದವು. ಆ ಸೂರ್ಯನಿಂದ ಹುಟ್ಟಿಬಂದು, ಸೂರ್ಯನ ಗ್ರಾವಿಟೇಷನ್‌ಗೆ ಸಿಕ್ಕಿ, ತಿರುಗುತ್ತಾ ಇರುವ ಈ ಪ್ಲಾನೆಟ್ಟಿನಲ್ಲಿ ಸೂರ್ಯನ ಇನ್‌ಫ್ಲೂಯೆನ್ಸ್ ಇಲ್ಲವೆನ್ನುವುದು ಹೇಗೆ? ಜೊತೆಗೆ ಈಚೆಗೆ ನೋಡಿ, ಸನ್‌ಸ್ಪಾಟ್‌ಗಳಿಗೂ ಈ ಜಗತ್ತಿನ ಸುಖದುಃಖಗಳಿಗೂ ನೋ ಸಂಬಂಧವಿದೆಯೆನ್ನುತ್ತಾರೆ, ಕಾಸ್ಮಿಕ್ ರೇಸ್ ಬಂದು ಟೆರ್ರೆಸ್ಟ್ರಿ ಯಲ್ ಮ್ಯಾಗ್ನೆಟಿಸಂ ಹೆಚ್ಚು ಕಡಿಮೆ ಮಾಡುತ್ತದೆ ಎನ್ನುತ್ತಾರೆ. ಬ್ಸ್‌ಅಂಟೈಡ್ಸ್ ಇರಲಿ, ಕ್ಲೌಡ್ ಅಂಡ್ ವಿಂಡ್ಸ್ ಇಂದ ಕ್ಲೌಡ್ಸ್, ವಿಂಡ್ಸ್, ಬ್ಸ್ ಅಂಡ್ ಟೈಡ್ಸ್‌ಗಳಿಗೆಲ್ಲ ಸನ್ ಅಂಡ್ ಮೂನ್ ಕಾರಣ ಎನ್ನುವುದು ಸ್ಪಷ್ಟವಾಗಿ ಗೊತ್ತಿದೆ. ನಮ್ಮ ಹೆಲ್ತ್ ಬೇಕಾದ ಹಾಗೆ ಅಫೆಕ್ಟ್ ಆಗುವುದು ನಮಗೆ ಗೊತ್ತಿದೆ.

"ಇದೆಲ್ಲಕ್ಕಿಂತ ಇನ್ನೊಂದು ಬಹಳ ಸ್ಟ್ರಾಂಗ್ ಆರ್ಗ್ಯೂಮೆಂಟ್ ನೋಡಿ. ಒಂದು ಕೆರೆಗೆ ಒಂದು ಕಲ್ಲು ಎತ್ತಿಹಾಕಿದಿರಿ ಎನ್ನಿ. ಕಲ್ಲು ದೊಡ್ಡದಾಗಿರಲಿ, ಸಣ್ಣದಾಗಿರಲಿ ಆ ಕೆರೆಯು ಸೀದಲ್ಲಾ ಡಿಸ್ಟರ್ಬ್ ಆಗ ಬೇಕೋ ಬೇಡವೋ? ಕಲ್ಲು ದೊಡ್ಡದಾಗಿದ್ದರೆ ಡಿಸ್ಟರ್ಬನ್ಸ್ ಎಲ್ಲರಿಗೂ ಕಣ್ಣಿಗೆ ಕಾಣುವಷ್ಟು ದೊಡ್ಡದಾಗಿರುತ್ತದೆ. ಸಣ್ಣದಾಗಿದ್ದರೆ ಕಾಣದೆ ಹೋಗಬಹುದು. ಇದು ಫಿಸಿಕಲ್ ಚೇಂಜ್, ಹಾಗೆ ವೆನ್ ಆಲ್ ಈಸ್ ಇಂಟರ್ ಲಿಂಕ್ಡ್ ಒನ್ ಡಸ್ ಅಫೆಕ್ಟ್ ದಿ ಅದರ್."

"ಇದಕ್ಕಿಂತ ಸ್ಟ್ರಾಂಗರ್ ಆರ್ಗ್ಯುಮೆಂಟ್ ಇನ್ನೊಂದು ಇದೆ. ನೀವು ಹ್ಯೂಮನ್‌ಬಾಡಿ, ಮೈಂಡ್ ಎರಡೂ ಸ್ಟಡಿ ಮಾಡಿ ನೋಡಿದರೆ, ಹ್ಯೂಮನ್‌ಬಾಡಿ ಹೊರಗಿನಿಂದ ಬರುವ ಆಪತ್ತುಗಳನ್ನು ತಡೆಯಲು ಶಕ್ತವಾಗಿದೆ. ಹುಟ್ಟುವಾಗಲೇ ತಕ್ಕಷ್ಟು ಇನ್‌ಸ್ಯುಲೇಟ್ ಮಾಡಿಕೊಂಡು ಬಂದಿದೆ. ಆದರೆ ಮೈಂಡ್ ಇದೆಯಲ್ಲ ಅದಕ್ಕೆ ಇನ್‌ಸ್ಯುಲೇಷನ್ ಇದ್ದ ಹಾಗೇ ಇಲ್ಲ. ಹೊರಗಿನಿಂದ ಯಾವ ಇನ್‌ಫ್ಲ್ಯುಯೆನ್ಸ್ ಬಂದರೂ ಮೊದಲು ಮೈಂಡ್‌ನ್ನು ಅಫೆಕ್ಟ್ ಮಾಡಿ ಅನಂತರ ಬಾಡಿಯನ್ನು ಅಫೆಕ್ಟ್ ಮಾಡುತ್ತದೆ. ಅಲ್ಲದೆ, ಈಗೀಗ ಫಿಸಿಕ್ಸ್ ಮೆಟಫಿಸಿಕ್ಸ್ ಕಡೆಗೆ ಹೋಗಿ ಕಂಡದ್ದಕ್ಕಿಂತ ಕಾಣದ್ದರ ಬಲವೇ ಹೆಚ್ಚಾಗಿದೆ" ಎನ್ನುತ್ತದೆ. ಇದೆಲ್ಲ ನೋಡಿದರೆ, ಮೈ ಓಟ್ ಮಸ್ಟ್ ನೆಸ್ಸಸರಿಲಿ ಗೋ ಫಾರ್ ದಿ ವಾಸ್ ಅಂಡ್ ನಾಟ್ ಫಾರ್ ನೋಸ್"

ಅಲ್ಲಿ ಕೂತಿದ್ದವರಲ್ಲಿ ಕೆಲವರು ಮಾತ್ರ ಆತನ ಮಾತನ್ನು ಗಮನಿಸಿ ಕೇಳಿದರು. ಇನ್ನು ಕೆಲವರು ಇದೊಂದು ಕಂತೆಯ ಪುರಾಣ ಎನ್ನುವ ಭಾವನೆಯಲ್ಲಿದ್ದರು. ಹಾಗಿದ್ದವರಲ್ಲಿ ವಿಂಧ್ಯ ಬ್ಯಾಂಕ್‌ನ ಮೇನೇಜರೂ ಒಬ್ಬನು. ಅವನು ಈ ವಾದವೆಲ್ಲ ಆದಮೇಲೆ "ಪ್ರೊಫೆಸರ್, ಎಕ್ಸ್‌ಕ್ಯೂಜ್ ಮಿ, ಈಗೆಲ್ಲ ಡೇಸ್ ಆಫ್ ಇನ್‌ಸ್ಟಿಟ್ಯೂಷನ್ಸ್. ಇಂಡಿವಿಡ್ಯುಲ್ಸ್ ವಿಚಾರವಾಗಿ ತಾವು ಹೇಳುವುದು ಸರಿ. ಇನ್‌ಸ್ಟಿಟ್ಯೂಷನ್ನಿಗೆ ಮೈಂಡ್ ಎಲ್ಲಿಂದ ಬಂತು? ಅದನ್ನು ತಮ್ಮ ಕಾಸ್ಮಿಕ್ ಇನ್‌ಫ್ಲ್ಯುಯೆನ್ಸ್ ಏನು ಮಾಡಾವು? ಆನ್ ಇನ್‌ಸ್ಟಿಟ್ಯೂಷನ್ ಹ್ಯಾಸ್ ನಿಯದರ್ ಬಾಡಿ ನಾರ್ ಮೈಂಡ್."

ಪ್ರೊಫೆಸರ್ ನಕ್ಕರು. "ಯೂ ಹ್ಯಾವ್ ಪುಟ್ ಇಟ್ ಆ್ಯಸ್ ಹಾರ್ಟ್‌ಲೆಸ್ಲಿ ಆ್ಯಸ್ ಎ ಬ್ಯಾಂಕ್ ಮ್ಯಾನೇಜರ್ ಕೆನ್. ಆಗಲಿ. ಈಗ ನೋಡಿ. ಬ್ರಿಟಿಷ್ ಎಂಪೈರಿಗಿಂತ ಭಾರಿ ಎಂಪೈರ್ ಇರಲಿಲ್ಲ. ಅದರ ಹಿಸ್ಟ್ರಿ ತೆಕೊಳ್ಳಿ. ಈ ಎರಡು ಮೂರು ವರ್ಷಗಳಿಂದ ಅದರ ಅವ್ಯವಸ್ಥೆ ನೋಡಿ, ಇಟ್ ಇಸ್ ಇನ್ ಎ ಸಾರಿ ಪ್ಲೈಟ್ ಎನ್ನದವರು ಯಾರು? ಅದಕ್ಕೆ ಮೈಂಡ್ ಬಾಡಿ ಎಲ್ಲಿ ಇತ್ತು? ನಿಮ್ಮ ಆರ್ಗ್ಯುಮೆಂಟ್ ಪ್ರಕಾರ ಆದರೆ, ಎನಿ ಇನ್‌ಸ್ಟಿಟ್ಯೂಷನ್ ಮಸ್ಟ್ ಸಿಂಪ್ಲಿ ಗೋ ಆನ್ ವಿಥೌಟ್ ಎನಿ

ಡಿಸ್ಪರ್ಜೆನ್ಸ್ ಹಾಗಾಗುತ್ತಿದೆಯೇನು? ನಿಮ್ಮ ಬ್ಯಾಂಕಿಂಗ್ ತೆಗೆದು ಕೊಳ್ಳಿ. ಟ್ರಾವನ್‌ಕೂರ್ ಅಂಡ್ ಕ್ವಿಲಾನ್ ಬ್ಯಾಂಕ್ ಏನಾಯಿತು? ಅಲ್ಲೂ ನಮಗೆ ತಿಳಿಯದ ಇನ್‌ಸ್ಟಿಟ್ಯೂಷನಲ್ ಟ್ರೆಂಡ್ ಒಂದಿರಬೇಕು. ಕಾಸ್ಮಿಕ್ ಟ್ರೆಂಡ್ ಇದೆಯೆನ್ನುವುದಿಲ್ಲವೆ ಹಾಗೆ! ನಮಗೆ ಗೊತ್ತಿಲ್ಲ. ನಮಗೆ ಗೊತ್ತಿಲ್ಲದ್ದು ಇಲ್ಲವೇ ಇಲ್ಲ ಎನ್ನುವ ಕಾಲ ಹೋಗಿ, ನಮಗೆ ಗೊತ್ತಿಲ್ಲದಿದ್ದರೂ ಇರಬಹುದು ಎನ್ನುವ ಕಾಲ ಬಂದಿದೆ. ಅದರಿಂದ ಪರ್‌ಹ್ಯಾಪ್ಸ್, ನಮಗೆ ತಿಳಿಯದೆಯೇ ಒಂದು ಇನ್‌ಸ್ಟಿಟ್ಯೂಷನಲ್ ಟ್ರೆಂಡ್ ಇರಬೇಕು. ಅದು ಅಫೆಕ್ಟ್ ಆಗಿ ಇನ್‌ಸ್ಟಿಟ್ಯೂಷನ್‌ಗಳಿಗೂ ರೈಸ್ ಅಂಡ್ ಫಾಲ್ ಬರಲೇಬೇಕು."

* * * * *

ಊಟ ಚೆನ್ನಾಗಿತ್ತು. ಹೊತ್ತು ಮೀರಿತ್ತು. ಏನೋ ಲೋಕಾಭಿ ರಾಮವಾದ ಹರಟೆ ಬಿಟ್ಟು, ಮೊಳೆಯಿಟ್ಟು ಹೊಡೆದ ಹಾಗೆ ಆಡುವ ಮಾತು ಯಾರಿಗೆ ಬೇಕು? ಆದರೂ ಯಾರೂ ಪ್ರತಿಭಟಿಸಲಿಲ್ಲ. ಒಬ್ಬರು ಪ್ರೊಫೆಸರಿಗೆ ಥ್ಯಾಂಕ್ಸ್ ಹೇಳಿದರು. ಇನ್ನೊಬ್ಬರು "ವಿ ಅಕ್ಸೆಪ್ಟ್ ಯೂ ಪ್ರೊಫೆಸರ್. ಏನ್ರಿ ರಮೇಶ್, ಮಗುವಿನ ಜಾತಕ ಚೆನ್ನಾಗಿದೆಯೋ?" ಎಂದರು. ರಮೇಶನು ತಂದೆಯನ್ನು ತೋರಿಸಿದನು.

ಇಷ್ಟು ಹೊತ್ತೂ ಸುಮ್ಮನೆ ಕುಳಿತಿದ್ದ ರಾಯನಿಗೆ ಕೊಂಚ ಜೀವ ಬಂತು. "ಹೌದು, ಜಾತಕ ಭಲೋ ಅದೆ. ರಾಜಯೋಗವದೆ, ರಾಜ ಭೋಗವದೆ ಎಂದರು. ಆದರೂ ಕೊಂಚ ಶಾಂತಿ ಮಾಡಬೇಕು ಎಂದರು. ಅದೂ ಆಯಿತು" ಎಂದನು. ರಾಯನಿಗೆ ಈ ವಿದ್ಯಾವಂತರ ಮುಂದೆ ಮಾತನಾಡುವುದಕ್ಕೆ ಏನೋ ಸಂಕೋಚ. ಅವರಲ್ಲಿ ಬೇಕಾದರೆ ಹತ್ತು ಜನರನ್ನು ಒಟ್ಟಿಗೆ ಕೊಂಡುಕೊಳ್ಳುವಷ್ಟು ಹಣ ಸಂಪಾದಿಸಿದ್ದಾನೆ. ಅವ ರೆಲ್ಲ ತನ್ನ ಮಗನ ಸ್ನೇಹಿತರು ಎನ್ನುವುದನ್ನು ಬಲ್ಲ. ಆದರೂ ಏನೋ ಸಂಕೋಚ.

ಇನ್ನೂ ಅಷ್ಟು ಹೊತ್ತು ಅದೂ ಇದೂ ಮಾತು ನಡೆಯಿತು. ರಾತ್ರಿ ಹನ್ನೊಂದು ಘಂಟೆ ಆಯಿತು. ಎಲ್ಲರಿಗೂ ಮನೆಗೆ ಹೋಗಬೇಕು

ಎನ್ನಿಸುವಷ್ಟು ಹೊತ್ತಾಯಿತು. ಒಬ್ಬೊಬ್ಬರಾಗಿ ಹೊರಟರು. ರಮೇಶನೂ ಹೊರಟವರನ್ನೆಲ್ಲ ಬೀಳ್ಕೊಟ್ಟನು. ಎಲ್ಲರೂ ಮಗುವಿಗೂ ತಂದೆಗೂ ಆಶೀರ್ವಾದ ಹೇಳಿಹೋದರು.

ಪ್ರಾಣೇಶ ಮಾತ್ರ ಇನ್ನೂ ಒಂದು ಗಳಿಗೆ ಕುಳಿತಿದ್ದ. ಎಲ್ಲರೂ ಹೊರಟುಹೋದಮೇಲೆ "ರಮೇಶ್, ಬೇಕಾದ್ದು ಹೇಳು. ನಮ್ಮವರಿಗೆ ಇನ್ನೂ ಬುದ್ಧಿ ಬಂದಿಲ್ಲ. ಇವೊತ್ತು ಬಂದಿದ್ದವರೆಲ್ಲ ಏನು ವಿದ್ಯಾವಂತರಲ್ಲವೆ? ಇವರಿಗೆ ಇದು ಕ್ಲಬ್ ಡಿನ್ನರ್ ಅಲ್ಲ ಅನ್ನೋದು ತಿಳಿಯದೆ? ಸಮಯಕ್ಕೆ ರಿಯಾಗಿ ಹೊಂದುಕೋಬೇಡವೆ?" ಎಂದು ಮೂಗೆಳೆದ.

ರಮೇಶನು "ಪ್ರಾಣೇಶ್, ನೀನೇ ಹೇಳುತ್ತಿ: ನೀನೇ ಮರೀತಿ. ಬೆಳಗಿನಿಂದ ಸಂಜೆಯು ವರೆಗೂ ಹೊಟ್ಟೆಗಾಗಿ ದುಡಿದವನಿಗೆ ಬರಿಯ ತಲೆ ಆಗಿ ಹೋಗಿರುವುದಿಲ್ಲವೇನೋ? ಎಲ್ಲಾದರೂ ರೆಸ್ಟ್ ಸಿಕ್ಕೀತೆ? ಎಂದು ಒದ್ದಾಡುತ್ತಿರುವ ಟೈರ್ಡ್ ಔಟ್ ಫೆಲೋನ ಇನ್ನೂ ಅಷ್ಟು ಸೀರಿಯಸ್ ಆಗಿರು ಎಂದರೆ ಸಾಧ್ಯವೆ? ನಮ್ಮ ಸಮಾಜ ಮೊದಲಿನ ಹಾಗೆ ಆಗಬೇಕಾದರೆ ನಮಗೆ ಪ್ಲೆಂಟಿ ಬೇಕಪ್ಪ! ಇದ್ದವನು ಇಲ್ಲದವನು ಇಬ್ಬರೂ ಒಂದೇ ರೀತಿಯಾಗಿ ಒದ್ದಾಡಬೇಕಾಗಿರುವಾಗ, ಸಮಾಜದಲ್ಲಿ ಎಲ್ಲಿ ನೋಡಿದರೂ ನಡೆಯುವುದು ಒಂದೇ ಪ್ರೊಸೆಸ್. ಅದು ಲೆವಲ್ಲಿಂಗ್ ಡೌನ್. ಇದು ತಪ್ಪಿ ಲೆವಲ್ಲಿಂಗ್ ಅಪ್ ಆಗಬೇಕಾದರೆ, ರಾಮರಾಜ್ಯ ಬರಬೇಕು ಪ್ರಾಣೇಶ್. ಹಾಲೂ ಜೇನೂ ಹೊಳೆಯಾಗಿ ಹರಿಯಬೇಕು. ಅದು ಯಾವಾಗ ಆಗುತ್ತದೋ? ಈಗಂತೂ ಇಲ್ಲ. ಈಗ ನಾನು ತಾನೇ ನಿನ್ನನ್ನು ಯಾಕೆ ನಿಲ್ಲಿಸಿಕೊಂಡದ್ದು, ಈ ಹನ್ನೊಂದು ಘಂಟೆ ರಾತ್ರಿಯಲ್ಲಿ ಬಲ್ಲೆಯಾ? ನಾಳೆಯ ದಿನ ಬರುತ್ತೇನೆಂದ ಪ್ಲಾಂಟರ್ ಪಿಳ್ಳೇಗೌಡ ಇವೊತ್ತು ಬರಲಿಲ್ಲ, ಅದನ್ನು ಬಲ್ಲೆಯಷ್ಟೆ!"

"ಬರದಿದ್ದರೆ ಇಲ್ಲ. ಅವನಿಗೆ ಅಗತ್ಯವಾದರೆ ಬರುತ್ತಾನೆ. ಲಾಯರ್, ಡಾಕ್ಟರ್, ಸೂಳೆ, ಮೂರು ಜಾತಿ ಹುಡುಕಿಕೊಂಡು ಹೋಗಬಾರದು ಬರೆದಿಟ್ಟುಕೋ. ಈಗ ಬಂದು ಅವನು ಗಂಟು ಬಿಚ್ಚುವ ವರೆಗೂ ನಿನಗೆ ಪಥ ನಡೆಯುವುದಿಲ್ಲ ಎನ್ನುವುದು ಏನೂ ಇಲ್ಲವಲ್ಲ! ಯಾಕೆ ಒದ್ದಾಟ?"

"ಒದ್ದಾಟವೂ ಇಲ್ಲ, ಏನೂ ಇಲ್ಲ. ಅವನ ಕೇಸಿನಲ್ಲಿ ನಮ್ಮ ಕೈವಾಡ ತೋರಿಸುವುದಕ್ಕೆ ಅವಕಾಶವಿದೆ, ಅದರಿಂದ."

"ಆಗಲಿ, ನಾಳೆ ನೋಡೋಣ. ಎಲ್ಲಿ ಹೋಗಬೇಕು? ಈ ಊರಿನಲ್ಲಿ ನನ್ನ ನಿನ್ನ ಬಿಟ್ಟು ಇನ್ನು ಯಾವ ಮಹಾ ಬೃಹಸ್ಪತಿ ಇದ್ದಾನೆ? ನಿದಾನವಾಗಿ ಬರಲಿ ಬಿಡು. ಬೈ ದಿ ಬೈ! ಮಗುವಿಗೆ ಏನು ಹೆಸರಿಟ್ಟೆ?"

"ವೀಣಾ"

"ಹೊಸ ಹೆಸರು."

"ಹೌದು. ಎಲ್ಲವೂ ಹೊಸದಾಗುತ್ತಿದೆಯೆಂದು ಹೆಸರೂ ಹೊಸದೇ ಹುಡುಕಿದೆ."

"ನಿಮ್ಮ ತಂದೆ ಒಪ್ಪಿದರೋ?"

"ಈಗ ಆ ಯೋಚನೆಯೇ ಇಲ್ಲ. ನಾನು ಹೇಳುವುದು ಅಷ್ಟು ವಿನಯವಾಗಿ ಹೇಳುತ್ತೇನೆ. ಯಜಮಾನ, ಏನೋಪ್ಪ, ನೀವು ಓದಿದ ಜನ. ನಿಮ್ಮ ರೀತಿ ನಮಗೆ ಅರ್ಥವಾಗೋಲ್ಲ. ಹೋಗಲಿ, ಹಾಗೇ ಆಗಲಿ ಬಿಡು. ನಿನ್ನ ಮಾತೇ ಸೈ! ಎಂದುಬಿಡುತ್ತಾರೆ."

"ಮಗು ಬಾಣಂತಿ ಆರೋಗ್ಯವಾಗಿದ್ದಾರೆಯೋ?"

"ಕ್ವೈಟ್ ಫಿಟ್, ಮೋಹನೆಯಂತೂ ನಿಜವಾಗಿ ಮೋಹನೆಯಾಗಿದ್ದಾಳೆ."

"ಹಾಗೆಂದರೇನು? ವರ್ಷದೊಳಗೆ ಇನ್ನೊಂದು ಮಗು ಎಂತಲೊ?"

"ಹೋಗೋ! ಬದುಕಿರೋ ವರೆಗೂ ಸುಖವಾಗಿರೋದು ಬಿಟ್ಟು, ಏನೋ ಇಲ್ಲದ ಕಾಷ್ಟವ್ಯಸನ. ನೋಡು, ನಾವು ಮಾಡರ್ನ್ಸ್. ನಮಗೆ ಪ್ರೆಸೆಂಟ್ ಮೇಲಿರೋ ಮಮತೆ ಫ್ಯೂಚರ್ ಮೇಲಿಲ್ಲ. ಅಲ್ಲ?"

ಆ ಮಾತು ಕೇಳಿ ಪ್ರಾಣೇಶ ಏಕೋ ಒಂದು ಗಳಿಗೆ ಮೌನವಾಗಿದ್ದು "ಹೌದು" ಎಂದು ವಿಷಣ್ಣನಾಗಿ ನುಡಿದ.

ಹೀಗೇ ಇನ್ನೂ ಏನೇನೋ ಮಾತನಾಡುತ್ತಿದ್ದು ಪ್ರಾಣೇಶನನ್ನು ಹನ್ನೆರಡು ಗಂಟೆಯ ಹೊತ್ತಿಗೆ ಮನೆಗೆ ಕಳುಹಿಸಿ, ರಮೇಶನು ಡ್ರೈವರನ್ನು ಹುಡುಕಿಕೊಂಡು ಹೋದನು.

ಆಗತಾನೇ ಡ್ರೈವರ್ ಹೆಂಡತಿ ಮಕ್ಕಳೊಡನೆ ಊಟ ಮುಗಿಸಿದ್ದನು. ಅಡಿಗೆಯವನನ್ನು ಕರೆದು ಡ್ರೈವರಿಗೆ ಹತ್ತು ಲಾಡು ನಾಲ್ಕು ಫೇಣಿ ಕಟ್ಟಿಕೊಡುವ ಹಾಗೆ ಹೇಳಿ ಅವನಿಗೆ ಅಷ್ಟು ಭಕ್ಷೀಸ್ ಕೊಟ್ಟು ಒಳಕ್ಕೆ ಹೋದನು.

ಅಲ್ಲಿ ಹೆಂಡತಿಗೆ ಆಗತಾನೇ ನಿದ್ದೆ ಬಂದಿತ್ತು. ರಮೇಶ್‌ಗೆ "ಅಯ್ಯೋ ಪಾಪ! ಎಷ್ಟು ಆಯಾಸವಾಗಿದೆಯೋ!" ಎನ್ನಿಸುತ್ತಿದ್ದರೂ ದೀಪ ಸಣ್ಣದು ಮಾಡಿ ಹೋಗಿ ಅವಳನ್ನು ಎಬ್ಬಿಸಿ, ಅಡಕೆಲೆ ಹಾಕಿಕೊಂಡು, ತಬ್ಬಿಕೊಂಡು, ತುಟಿ ಕಡಿದು, ವಿಹ್ವಲನಾಗಿ ಹೋಗಲಾರದೆ, ಹೋಗಲಾರದೆ ಹೊರಟುಹೋದನು. ಅವನು ಹಾಗೆ ಹೋಗುವುದನ್ನು ನೋಡಿ ಹೆಂಡತಿಯು ಇನ್ನಷ್ಟು ಹೊತ್ತು ನಿಲ್ಲಿಸಿಕೊಂಡಿದ್ದರೆ ಚೆನ್ನಾಗಿತ್ತೇನೋ ಎಂದುಕೊಂಡಳು. ಆದರೆ ಅವಳಿಗೆ ಎದ್ದು ಹೋಗಿ ಗಂಡನನ್ನು ಕೂಗುವುದಕ್ಕೆ ಏನೋ ಸಂಕೋಚ! ಯಾರಾದರೂ ಕಂಡಾರು ಎಂದು ಹಿಂದೇಟು.

ಕಾಮ ಹುಟ್ಟಿದ ಮೇಲೆ ಸುಮ್ಮನಿರುವುದು ಉಂಟೆ? ಅದಕ್ಕೆ ವಿನಿಯೋಗವಾಗಲೇಬೇಕು. ಮನಸ್ಸಿನಿಂದ ಪ್ರೇರಣೆಯಾಗಿ ದೇಹಕ್ಕೆ ಬಂದ ಕಾಮ ಏನೋ ಒಂದು ರೂಪವಾಗಿ ಹೊರಕ್ಕೆ ಹೋಗದಿದ್ದರೆ ಹೇಗೆ? ದೇವತೆಗಳು ಮೂಲಸ್ಥಾನವನ್ನು ಬಿಟ್ಟು ಗರ್ಭಗುಡಿಯಿಂದ ಈಚೆಗೆ ಬಂದರೆ ಯಾರಿಗಾದರೂ ಒಬ್ಬರಿಗೆ, ಕೊನೆಗೆ ಎದುರಿಗೆ ಸಿಕ್ಕಿದವರಿಗೆ ಒಳ್ಳೆಯದೋ ಕೆಟ್ಟದೋ ಮಾಡದೆ ಮತ್ತೆ ಒಳಗೆ ಹೋಗುವ ಹಾಗಿಲ್ಲವಂತೆ! ಆ ಮಾತು ಗುಡಿಯಲ್ಲಿ ದೇವರು ಬದುಕಿದ್ದಾಗಿನ ಮಾತು. ಈಗ ಪೂಜಾರಿಯ ಕೈಗೆ ಸಿಕ್ಕಿ, ಅವನ ಕಾಟವನ್ನು ತಡೆಯಲಾರದೆ ದೇವತೆಗಳೆಲ್ಲ ಹೇಳದೆ ಕೇಳದೆ ಓಡಿಹೋಗಿರುವ ಈ ಕಾಲದಲ್ಲಿ ಆ ಮಾತು ಹೇಳುವುದೂ ಒಂದು ಹುಚ್ಚು. ಅಂತೂ ಕಾಮನೂ ದೇವತೆ ತಾನೇ! ಅವನೂ ಹಾಗೇ! ಮೂಲಸ್ಥಾನವಾದ ಮನಸ್ಸಿನಿಂದ ಹೊರಟರೆ ಒಂದು ಕ್ರಿಯೆ ನಡೆದು ತೀರಬೇಕು.

ಪಾಪ! ಬಾಣಂತಿ! ಅವಳು ಏನು ಮಾಡಬೇಕು? ತೊಟ್ಟಲಿನಲ್ಲಿ

ಮಗು ಸುಖವಾಗಿ ಮಲಗಿತ್ತು. ಅದನ್ನು ಎಬ್ಬಿಸುವುದು ಹೇಗೆ ಎನ್ನಿಸಿತು. ಆದರೂ ಎದ್ದು ಅದನ್ನು ಎತ್ತಿಕೊಂಡು ಅದಕ್ಕೆ ಎರಡು ಮುತ್ತು ಕೊಟ್ಟು, ತುಟಿಯ ತಾಂಬೂಲ ಅದರ ಕೆನ್ನೆಗೆ ಹತ್ತಿದುದನ್ನು ಒರೆಸಿ, ಅದರ ಬಾಯಿಗೆ ಮೊಲೆಯಿಟ್ಟು ಅಷ್ಟು ಹೊತ್ತು ಕುಳಿತಿದ್ದು, ಮತ್ತೆ ಮಗುವನ್ನು ತೊಟ್ಟಿಲಿಗೆ ಹಾಕಿ ತೂಗಿ ಮಲಗಿಸಿ ತಾನೂ ಮಲಗಿದಳು.

## ೨

ವೀಣಾ ತಾತನಿಗೆ ಮೋಹದ ಮೊಮ್ಮಗಳು. ಒಂದು ಗಳಿಗೆ ಮುದುಕ ಅವಳನ್ನು ಬಿಟ್ಟಿರಲಾರ. ತಂದೆತಾಯಿಗಳ ಜೊತೆಯಲ್ಲಿ ಒಂದು ದಿನ ಸಿನೀಮಕ್ಕೆ ಹೋಗಿ ಬಂದರೆ ಅಲ್ಲಿ ತಾನು ಕಂಡುದು ಕೇಳಿದ್ದು ಎಲ್ಲಾ ಅವನಿಗೆ ಎರಡು ದಿನ ಹೇಳುವಳು. ಮುದುಕನಿಗೆ ಸಿನೀಮಾ ಬೇಡ. "ಛೇ! ಬರಿ ನೆರಳಾಟ. ನೆರಳು ನೋಡಿ ಹಿಗ್ಗೋ ಜನದ ಮರುಳು ನನಗೆ ಬೇಡಪ್ಪ!" ಎನ್ನುವನು. ರಮೇಶ್ ಪ್ರಯತ್ನ ಮಾಡಿ ನೋಡಿ ವಿಫಲನಾಗಿ, ಹೋಗಲಿ ಎಂದು ಬಿಟ್ಟುಬಿಟ್ಟಿದ್ದ.

ಈಚೆಗೆ ಒಂದು ವರ್ಷದಿಂದ ಮುರಳೀಧರನು ಹೋಟೆಲ್ ಕೂಡ ನಿಲ್ಲಿಸಿಬಿಟ್ಟಿದ್ದ. ಆ ದಿನಗಳ ಸ್ನೇಹಿತರು ಕೆಲವರು ಇರುವರು. ತಾನೇ ಅವರ ಮನೆಗೆ ಹೋಗಿ ಒಂದು ಗಳಿಗೆ ಎಂದು ನಾಲ್ಕೈದು ಗಂಟೆ ಹೊತ್ತು ಇಸ್ಪೀಟು ಬಡಿದು ಸುಮಾರು ಎಂಟು ಗಂಟೆ ಹೊತ್ತಿಗೆ ಮನೆಗೆ ಬರುವನು. ಅವನಿಗೆ ಒಂದು ತೋಟ ಮಾಡಬೇಕು ಎಂದು ಇಷ್ಟ. ಆದರೆ ಹಿಂದೆ ತೋಟ ಮಾಡಿ ಸಾವಿರಾರು ರೂಪಾಯಿ ಕಳೆದುಕೊಂಡು ಕೈ ಸುಟ್ಟುಕೊಂಡಿದ್ದುದು ನೆನಪಾಗಿ "ಛೇ! ನಮ್ಮ ಮನೆಗೆ ತೋಟ

ಹತ್ತಿ ಬರಲಿಲ್ಲ! ಹೋಗಲಿ ಬಿಡು ನಮ್ಮ ಹಣ ನಮ್ಮ ಹತ್ತಿರ ಭದ್ರವಾಗಿ ರಲಿ" ಎಂದು ಸುಮ್ಮನಾಗುವನು.

ಹೋಟಲು ಮಾರಿ ಹತ್ತು ಸಾವಿರ ರೂಪಾಯಿ ಬಂತು. ಅದನ್ನು ಬ್ಯಾಂಕಿನಲ್ಲಿ ಹಾಕಿ "ಸಾಕು ಬಿಡು. ಎರಡಾಯಿತು. ನನಗೂ ಅರುವತ್ತಾಯಿತು. ಇನ್ನು ಎಷ್ಟು ದಿವಸ! ಮಗನಿಗೆ ಸಂಪಾದನೆ ಚೆನ್ನಾಗಿದೆ, ನಾನು ಯಾರಿಗೆ ಸಂಪಾದಿಸಬೇಕು? ಇದ್ದಷ್ಟು ದಿವಸ ರಾಮ, ಕೃಷ್ಣ, ಎಂದುಕೊಂಡು ಇದ್ದರೆ ಆಯಿತು" ಎನ್ನುವನು. ಮತ್ತೆ ಎಷ್ಟಾಗಲಿ ದುಡಿದ ಮೈ. ಮದರಾಸಿನಲ್ಲಿ ಹೋಗಿ ಒಂದು ಉಡುಪಿ ಕೆಫೆ ತೆಗೆದರೆ ಹೇಗೆ? ಎನ್ನಿಸುವುದು. ಹೀಗೆ ಅಷ್ಟು ದಿನ ಅನಿಸಿ ಅನಿಸಿ, ಕೊನೆಗೆ ಉಂಡುಂಡು ಕೂರುವ ಸೋಮಾರಿತನ ಅಭ್ಯಾಸವಾಗಿಹೋಯಿತು. ಜೊತೆಗೆ ಆಡುವುದಕ್ಕೆ ಒಂದು ಬೊಂಬೆಯಾಗಿ ವೀಣಾ ಸಿಕ್ಕಿದಳು. ಮುದುಕನಿಗೆ ಮನೆಯೇ ಸ್ವರ್ಗವಾಯಿತು. ಒಂದೊಂದು ಸಮಯದಲ್ಲಿ ಮಾತ್ರ "ಅವಳೂ ಇದ್ದಿದ್ದರೆ ಚೆನ್ನಾಗಿತ್ತು. ಇದೆಲ್ಲ ನೋಡಿ ಎಷ್ಟು ಸಂತೋಷಪಡುತ್ತಿದ್ದಳೋ!" ಎನ್ನಿಸುವುದು. ತಿರುಗಿ ಹಾಗೆಯೇ "ಅವಳ ಹಣೆಯಲ್ಲಿ ಬರೆದಿರಲಿಲ್ಲ! ಪಡೆದಷ್ಟಲ್ಲದೆ ಬಪ್ಪುದೇ ಹರಹರಾ ಶ್ರೀ ಚೆನ್ನಸೋಮೇಶ್ವರಾ!" ಎಂದುಕೊಂಡು ಸುಮ್ಮನಾಗುವನು.

ವೀಣಾ ನೋಡುವುದಕ್ಕೆ ಪರಮ ಸುಂದರಳು. ಹಾಲುಕೆನ್ನೆಯ ಹಾಗೆ ಬೆಳಗುವ ಕೆನ್ನೆಯ ಮೇಲೆ ಒಂದು ಕೆಂಪು ನೆರಳು ಹಾಯ್ದು ಹೋದಹಾಗಿದ್ದು ಆ ಬಣ್ಣ ದಂತದ ತಲೆಯ ಮೇಲೆ ಹೊಡೆದಹಾಗಿರುವುದು. ಬೆಳ್ಳಗೆ ಬೆಳ್ಳಿಯಲ್ಲಿ ಮಾಡಿಟ್ಟಂತೆ ಇದ್ದ ಪಳಪಳನೆ ಹೊಳೆಯುವ ಕಣ್ಣುಗಳಲ್ಲಿ ಆ ಕರಿಯ ಆಲಿಯು ಅದು ಏನೋ ಮುದ್ದಾಗಿ ಇರುವುದು. ತೆಳುವಾದ ರೆಪ್ಪೆ ಮುಚ್ಚಿದರೆ ಒಂದು ಸೊಗಸು ಬಿಚ್ಚಿದರೆ ಇನ್ನೊಂದು ಸೊಗಸು ಎನ್ನುವಂತಿರುವುದು. ತಿದ್ದಿದ ಹುಬ್ಬು. ಎಸಳಾದ ಮೂಗು. ತುಂಬಿದ ತುಟಿಗಳ ಸಣ್ಣ ಬಾಯಿ. ಇನ್ನೂ ಐದು ವರ್ಷದ ಆ ಹುಡುಗಿ ಥಟ್ಟನೆ ನೋಡಿದರೆ ಹದಿನೈದು ವರ್ಷದವಳ ಭಾವ ಕಾಣಿಸುವುದು. ಮಾತಿನಲ್ಲಿಯೂ ಅಷ್ಟೆ; ಎಳೆತನದ ಮುದ್ದು ಇದ್ದರೂ ಬೆಳೆದ ಹುಡುಗಿಯ ದನಿ ಭಾವ.

ಮುದುಕನಿಗೆ ಇಪ್ಪತ್ತು ವರ್ಷದ ಹಿಂದೆ ಹೋದ ಹೆಂಡತಿಯ
ಸ್ವಭಾವ ಆ ಹುಡುಗಿಯಲ್ಲಿದ್ದು ತನ್ನ ಮನಸ್ಸನ್ನು ಹಿಡಿದಿದೆಯೆಂಬುದು
ತಿಳಿಯದು. ಅಂತೂ ಮೊಮ್ಮಗಳನ್ನು ಒಂದು ಗಳಿಗೆಯೂ ಬಿಟ್ಟಿರಲಾರ
ಇಸ್ಪೀಟ್ ಆಟದ ನಡುವೆಯೂ ಒಮ್ಮೊಮ್ಮೆ ಮೊಮ್ಮಗಳ ನೆನಪಾದರೆ
ಕೈಯಲ್ಲಿ ಎಂತಹ ಆಟವಿರಲಿ, ಏನಾದರೂ ನೆವ ಹೇಳಿ ಎಲೆ ಎಸೆದು
ಮನೆಗೆ ಹೊರಟುಬರುತ್ತಿದ್ದ.

ಮುದುಕನಿಗೆ ಮಾಡುವುದಕ್ಕೆ ಕೆಲಸವಿಲ್ಲ. ಯಾತ್ರೆ ಹೋಗೋಣ
ಎನ್ನಿಸಿತು. ಆದರೆ ಯಾತ್ರೆ ಹೋಗಿ ಬಂದವರ ಕಥೆಗಳನ್ನೆಲ್ಲ ಕೇಳಿ
ಗಾಬರಿಗೊಂಡಿದ್ದ. ಗಯಾವಳಿಗಳು ಕಬ್ಬಿಣದ ಕೊಕ್ಕಿನ ಕಾಗೆಗಳು
ಹಾಗೆ ಕಾಸು ಕಿತ್ತುಬಿಡುತ್ತಾರೆ ಎಂಬುದು ಕೇಳಿ, ಆ ಯಾತ್ರೆಯೇ
ಬೇಡ ಎನ್ನಿಸಿತ್ತು. "ಹೋಗಲಿ ಬಿಡು. ನಮ್ಮ ಕಾವೇರಿಗೆ ತುಲಾ ಮಾಸ
ದಲ್ಲಿ ಗಂಗಾದೇವಿ ಬರುತ್ತಾಳಂತೆ! ಆಗ ಹೋಗಿ ಬಂದರೆ ಗಂಗಾಸ್ನಾನ
ವಾಯಿತು. ಗೋಕರ್ಣಕ್ಕೆ ಹೋಗಿ ಬಂದರೆ ಸಮುದ್ರ ಸ್ನಾನ ಆಯಿತು.
ಅಷ್ಟು ಸಾಕು. ಇನ್ನೂ ಬೇಕೆಂದರೆ ತಿರುಪತಿ, ಶ್ರೀಶೈಲ, ಒಂದು
ವೈಕುಂಠ, ಇನ್ನೊಂದು ಕೈಲಾಸ. ಸಾಕು ಸಾಕು. ಹರಿಯಾದರೂ
ಕಾಯಲಿ, ಹರನಾದರೂ ಕಾಯಲಿ, ಇಬ್ಬರಿಗೂ ಕೈ ಮುಗಿದ ಮೇಲೆ
ಯಮನಿಗೆ ಅಂಜಬೇಕಾದ್ದಿಲ್ಲ." ಎಂದೂ ಲೆಕ್ಕ ಹಾಕಿದ್ದ. "ಆದರೆ
ಅದಷ್ಟು ಆಗಬೇಕಾದರೂ ಒಂದು ಸಾವಿರವಾದರೂ ಆಗಬೇಕು. ಹೇಗೆ
ಮಗನನ್ನ ಕೇಳೋದು ? ಕೈ ಮುಂದಾಗಿ ಸಂಪಾದಿಸಿ ಹತ್ತು ಜನಕ್ಕೆ
ಎತ್ತಿದ್ದವ, ಇವೊತ್ತು ಇನ್ನೊಬ್ಬರನ್ನು ಕೇಳೋದು ಹ್ಯಾಗೆ?" ಎಂದು
ಅಷ್ಟು ದಿನ ಯೋಚನೆಯಾಯಿತು.

ಕೊನೆಗೆ ಒಂದು ದಿನ ಮಗನ ಮುಂದೆ ತನ್ನ ಯೋಚನೆ ಇಟ್ಟ.
"ಏನಪ್ಪಾ! ತಿರುಪತಿಗೆ ಹೋಗಿ ಬರಬೇಕು ಅಂತದೆ ಜೀವ. ಹೋದ
ಮೇಲೆ ಅಲ್ಲಿ ಸೇವೆ ಏನಾದರೂ ಮಾಡಿ ಆ ನಾರಾಯಣನಿಗೆ ಏನಾದರೂ
ಕಾಣಿಕೆಗೀಣಿಕೆ ಮಾಡಿ ಬರಬೇಕೋ ಅಲ್ಲೋ? ಏನು ಹೋಗಿ
ಬರಲಾ?" ಎಂದ.

ರಮೇಶನು ನಕ್ಕ. "ಚೆನ್ನಾಯಿತು ಭಾವ. ನಾನು ಎಷ್ಟೇ ಆಗಲಿ, ನಿನ್ನ ಕೂಸಲ್ಲವೋ? ನೀನು ಯಜಮಾನ. ಬೇಕಾದ್ದು ಮಾಡು."

"ಹಾಗಾದರೆ ಹೋಗಿಬರೋಕೆ ಎಷ್ಟು ಕೊಡಿತಿ?"

"ನೀ ಅಲ್ಲಿಗೆ ಹೋದಮೇಲೆ ಒಂದು ಬ್ರಹ್ಮೋತ್ಸವ ಮಾಡಿಸಿ ಬಿಡು. ದೇವರು ಕೊಟ್ಟಾಗ ಯಾಕೆ ಮಾಡಿಸಬಾರದು?"

"ಬ್ರಹ್ಮೋತ್ಸವಕ್ಕೆ ಎಷ್ಟಾಗುತ್ತದೆ?"

"ಸುಮಾರು ಎರಡು ಸಾವಿರವೋ ಏನೋ?"

"ಹೋಗಿ ಬರೋಕೆ?"

"ಅದಕ್ಕೇನು? ಒಂದು ಇನ್ನೂರು ರೂಪಾಯಿ ಆದರೆ ಸಾಕು. ಕಾರು ಹೇಗಿದ್ದರೂ ಇದೆ. ಸುಮಾರು ಇನ್ನೂರು ಇನ್ನೂರೈವತ್ತು ಮೈಲಿ ಆಗಬಹುದು. ಹೋದ ಬಂದ."

ಮುದುಕ ಒಂದು ಗಳಿಗೆ ಹುಬ್ಬು ಎತ್ತಿ ಕಣ್ಮುಚ್ಚಿ ಹಾಗೇ ಯೋಚನೆ ಮಾಡಿದ. "ನೋಡು ರಮು. ನಾವು ಮಂಜುನಾಥನ ಒಕ್ಕಲು. ಆ ಮಂಜನಾಥನೇ ಜೀವಂತ ದೇವರು. ಅವನಿಗೆ ನಾನು ಇನ್ನೂ ಏನೂ ಭಾರಿ ಸೇವೆ ಸಲ್ಲಿಸಿಲ್ಲ. ನನ್ನ ಬೋರ್ಡಿನಲ್ಲೂ 'ಮಂಜುನಾಥ ಪ್ರಸನ್ನ' ಎಂದೇ ಬರೆದಿದ್ದುದು. ಅವನೇ ಇಷ್ಟೆಲ್ಲಾ ಕೊಟ್ಟವ. ಅದರಿಂದ ಅವನಿಗೆ ಮೊದಲು ನಡೆದುಕೊಂಡು ಆಮೇಲೆ ತಿರುಪತಿಗೆ ಹೋಗೋವ. ಹಾಗೆ ಮಾಡೋದೇ ಸರಿ ಅನಿಸುತ್ತದೆ. ನೀನು ಏನಂತೀ?"

ರಮೇಶನು ಗಂಭೀರವಾಗಿ ಹೇಳಿದ. "ಭಾವ, ನನಗೆ ಎಷ್ಟೋ ಸಲ ಇದ್ದಬದ್ದ ಆಸ್ತಿಯೆಲ್ಲ ಧರ್ಮ ಮಾಡಿಬಿಡೋಣ ಎನ್ನಿಸಿದೆ. ಲೋಕದಲ್ಲಿ ಈ ಬಡವರ ಪಾಡು ನೋಡಿ ನೋಡಿ ಕರುಳು ಕೊರೆದಾಗ, ನಾನು ಅದನ್ನು ತಡೆಯಲಾರೆ. ಆದರೆ ಏನು ಪ್ರಯೋಜನ? ಬಟ್ಟೆ ಕೊಟ್ಟರೆ ಮಾರಿಕೊಳ್ಳುತ್ತಾರೆ. ಛತ್ರ ಹಾಕಿದರೆ ತಿಂದು ತಿಂದು ಸೋಮಾರಿಗಳಾಗಿಹೋಗುತ್ತಾರೆ. ಆಸ್ಪತ್ರೆ ಕಟ್ಟಿದರೆ ರೋಗ ವಾಸಿ

ಾಡಿಕೊಂಡು ಹೋಗಿ ಮತ್ತೆ ರೋಗ ತಂದುಕೊಂಡು ಬರುತ್ತಾರೆ. ್ಪಿಲ್ ಮಾಡೋಣ ಎಂದರೆ, ಅನಾಥಾಲಯ ಮಾಡೋಣ ಎಂದರೆ ್ಲಿ ಓದಿ ಮುಂದೆ ಬಂದವರಿಗೆ ಸಮಾಜದ ಮೇಲೆ ಅಭಿಮಾನವೇ ುವುದಿಲ್ಲ. ಇದೇ ನಾನು ಯೋಚನೆ ಮಾಡುತ್ತಿದ್ದೇನೆ. ಇದೆಲ್ಲ ೀಡಿ, ನಾವೂ ಹಿಂದಿನವರ ಹಾಗೆ, ಯಾವುದಾದರೂ ದೇವರನ್ನು ಬಿ ಅವನಿಗೆ ಕಾಣಿಕೆ ಮಾಡಿ ಸುಖವಾಗಿರೋದೆ ಸರಿ ಎನಿಸುತ್ತದೆ. ನೂ ಯೋಚನೆ ಮಾಡು. ನಿನಗೆ ತೋರಿದಹಾಗೆ ಮಂಜುನಾಥನ ವೆ ಮಾಡು. ಆಮೇಲೆಯೋ ತಿರುಪತಿಗೆ ಹೋಗುವೆಯಂತೆ!"

ಮುದುಕ ಹೇಳಿದನು, "ನೋಡೋ ರಮು, ಈಗ ಎಂಟು ಹತ್ತು ರದಿಂದ ಕನಸು ಸರಿಯಿಲ್ಲ. ಹೀಗೆ ದಿಂಬಿನ ಮೇಲೆ ತಲೆಯಿಟ್ಟರೆ, ಾರೋ ಬಂದು 'ಬಾ ಹೋಗೋಣ, ಬಾ ಹೋಗೋಣ' ಎಂದು ೆದುಕೊಂಡು ಹೋದ ಹಾಗೆ ಇರತದೆ. ಎಚ್ಚರಾಗಿರೋವಾಗ, ಾರೋ ಹಿಂದೆ ಹಿಂದೆ ಸುಳಿದಂತೆ ಕಾಣುತ್ತದೆ. ಒಬ್ಬನೇ ಕುಳಿತಿದ್ದರೆ ನೋ ಮೇಲಿಂದ ಎಲ್ಲಾ ಕುಸಿದು ಬಿದ್ದಹಾಗೆ, ನಾನು ಅದರ ಕೆಳಗೆ ್ಕಿ ಸತ್ತ ಹಾಗೆ ಆಗಿ ಗಾಬರಿಯಾಗುತ್ತದೆ. ಇದೆಲ್ಲ ನೋಡಿ ನನಗೆ ಿಲಾಗದೆ. ನಾ ಕೇಳಿದ್ದೆ, ಅನ್ನ ಮಾರೋದು ಪಾಪ ಅಂತ. ಆ ಾಪ ಮಾಡಿ ಸಂಪಾದಿಸಿದ ಹಣ ನನ್ನ ತಿಂದೀತೇನೋ ಅಂತ ಅಂಜಿಕೆ ಿದೆ. ಅದಕ್ಕೆ ಏನೋ ಎಂತೋ, ಈ ದೇವರುಗಳಿಗೂ ಅಷ್ಟು ಕೊಟ್ಟು ಂದ ಪಾಪ ಕಳೆದುಕೊಂಡು ಮುಂದೆ ಹೋಗೋಣ ಅಂತ ಮನಸ್ಸು. ದರೂ ನಿನ್ನ ಕೈಲಿ ನಿಜ ಹೇಳುತ್ತಿದ್ದೀನಿ. ನಾನು ಬಡತನದಲ್ಲಿ ಬಹು ್ಟಪಟ್ಟವ; ತಿರುಗಿ ಕಷ್ಟ ಅನುಭವಿಸಲಾರೆ. ಮೂರು ಕಾಸಿಗೆ ತನ್ನದು ಾನು ತಿಂದು ಇತರರದಕ್ಕೆ ಕೈ ಒಡ್ಡಿದ ಎನ್ನುವ ಹಾಗೆ ಬೆಳೆದವ. ನಾನು ುಜಾರ ಕೊಡಲಾರೆ. ನೀನು ತಿರುಪತಿಗೆ ಹೋಗಿ ಬಾ ಅಂತ ಎನು ಾವಿರದ ಲೆಕ್ಕ ಹೇಳಿದೆ. ನನ್ನ ಎದೆ ಜಗ್ಗಂತು. ಮನಸ್ಸು ಅಬ್ಬಾ ರಡು ಸಾವಿರವೇ ಅಂತು. ಇಂಥಾ ನಾನು ಮಂಜಪ್ಪಗೇನು ಕೊಡಲಿ? ್ತಿಮ್ಮಪ್ಪಗೇನು ಕೊಡಲಿ? ನನ್ನ ವೇದಾಂತ ಕೇಳ್ತೀಯಾ? ನಿನ್ನ ಕಾರು

ಕೂಡ ಅಷ್ಟು ಸಲೀಸಾಗಿ ಹೋಗೊಲ್ಲ. ನಾನು ಹುಟ್ಟಿದಾಗ ಏನೂ ತರಲಿಲ್ಲ, ಹೋಗೋವಾಗ ಏನೂ ತಕೊಂಡು ಹೋಗೋಲ್ಲ ಅಂತ ನಾನೂ ಬಲ್ಲೆ. ಆದರೆ ಕೈಯ್ಯಿಂದ ಕಾಸು ಕೊಡೋದು ಅಂದರೆ ಮನಸ್ಸು ಒಪ್ಪೋದಿಲ್ಲ. ನೀನು ಜಿಪುಣ ಎನ್ನು, ಲೋಭಿ ಎನ್ನು, ಏನಾದರೂ ಅನ್ನು. ನನ್ನಿಂದ ಕಾಸು ಕೊಡೋದು ಆಗೋದಿಲ್ಲ. ಅದರಿಂದ ನೀನು ಏನಾದರೂ ನನ್ನ ಹೆಸರಿನಲ್ಲಿ ನಿನಗೆ ತೋರಿದ್ದು ಮಾಡು. ನಾನೂ ಒಪ್ಪಿ ಕೊಳ್ಳುತೇನೆ. ನನ್ನಂತೂ ತಿರುಪತಿಗೆ ಕಳುಹಿಸು."

ಅಷ್ಟು ಹೊತ್ತಿಗೆ ಮೊಮ್ಮಗಳು ಬಂದು ತಾತನ ತೊಡೆಯ ಮೇಲೆ ಕುಳಿತಿದ್ದಳು. "ನೀನು ದೊಡ್ಡ ಹುಡುಗಿಯಾದೆ. ತಾತನ ತೊಡೆಯ ಮೇಲೆ ಕೂತರೆ ಅವರಿಗೆ ನೋಯ್ಯೊಲ್ಲವೇನಮ್ಮಾ?" ಎಂದು ಮಗನೋ ಸೊಸೆಯೋ ಕೇಳಿದರೆ, ಮುದುಕನು "ಇರಲಿ ಬಿಡು, ನಮ್ಮ ಮಗು ವಲ್ಲವೋ? ನಮ್ಮ ಮಕ್ಕಳು ನಮಗೆ ಭಾರವೋ? ಕುಂಬಳಕಾಯಿ ತೊಟ್ಟಿಗೆ ಭಾರವಾದೀತೋ?" ಎನ್ನುವನು.

ವೀಣೆಯು "ಅಣ್ಣಾ! ಏನು ಮಾಡಬೇಕು ನಾನು ಹೇಳಲಾ?" ಎಂದಳು.

ರಮೇಶನು ಮಾತನಾಡುವುದರೊಳಗೆ ಮುದುಕನು ಮೊಮ್ಮಗಳನ್ನು ತಬ್ಬಿಕೊಂಡು, "ಎಲೆಲಾ! ನೋಡಿದೆಯಾ. ನೀನು ಹೇಳುತೀಯೋ? ಹೇಳು. ಏನು ಹೇಳುತೀ ನೋಡೋಣ" ಎಂದನು.

ವೀಣೆಯು ಹೇಳಿದಳು, "ನೋಡು ತಾತ, ಒಂದು ಆಶ್ರಮ ಮಾಡ ಬೇಕು ತಾತ. ಅದೂ ಗಂಡು ಮಕ್ಕಳಿಗಲ್ಲ. ಈ ಗಂಡು ಮಕ್ಕಳು ಅಲ್ಲಿ ಬಿದ್ದು ಇಲ್ಲಿ ಬಿದ್ದು ಬೆಳೀತವೆ. ಕಷ್ಟವೆಲ್ಲ ಇರೋದು ಹೆಣ್ಣುಮಕ್ಕ ಳಿಗೆ. ಗತಿಯಿಲ್ಲದೆ ನಿನ್ನೆ ಆ ತಿರುಪತಮ್ಮ ಬಂದಿದ್ದಳಲ್ಲ, ಆ ಹೆಣ್ಣು ಮಕ್ಕಳನ್ನು ಕಟ್ಟಿಕೊಂಡು. ನಾನು ಕಾರಿನಲ್ಲಿ ಹೋಗುವಾಗ ಹಾಗೆ ಮೈಗೆ ಬಟ್ಟೆ ಇಲ್ಲದ ಮಕ್ಕಳನ್ನು ಕಂಡು ನನಗೆ ಅಳು ಬರುತ್ತೆ ತಾತ! ನಿನ್ನೆ ಅನಕಾ ನಾನು ಅತ್ತೇಬಿಟ್ಟೆ!"

"ಅತ್ತರೆ ಏನಾಯಿತು? ಅವರಿಗೆ ಏನಾದರೂ ಮಾಡಿದೆಯೋ?"

"ನೀವು ಬಯ್ತೀರೇನೋ?"

"ಇಲ್ಲ, ಹೇಳು."

"ಅಮ್ಮಂದು ಒಂದು ಕೋರಿ, ನನ್ನದು ಒಂದು ಲಂಗ, ನನಗೆ ಚಿಕ್ಕದು ಆಗಿದ್ದ ಎರಡು ಬನಿಯನ್ ಎಲ್ಲಾ ಗಂಟು ಕಟ್ಟಿ ತೆಗೆದುಕೊಂಡು ಹೋಗಿ ಕೊಟ್ಟುಬಿಟ್ಟೆ."

ತಂದೆ ಮಕ್ಕಳು ಮೊಕ ಮೊಕ ನೋಡಿಕೊಂಡರು. ಮಗುವಿನ ಮಾತಾದರೂ ಇಬ್ಬರಿಗೂ ಹಿಡಿಯಿತು. ಮುದುಕನು ಚೌಕ ಮೊಕಕ್ಕೆ ಹಾಕಿಕೊಂಡು ಒಂದು ಗಳಿಗೆ ಅತ್ತುಬಿಟ್ಟನು. "ತಾಯಿ, ನನಗೆ ಬುದ್ಧಿ ಕಲಿಸಿದೆ ಕಣೇ! ನನ್ನ ಜನ್ಮದಲ್ಲಿ ನಾನಿಷ್ಟು ಧಾರಾಳ ಮಾಡಿರಲಿಲ್ಲ. ಏನೋ ಅಂಗಡಿಯಲ್ಲಿದ್ದಾಗ ಕಾಳಿ ಕಂಗಾಳಿ ಬಂದರೆ ಒಂದಷ್ಟು ತಿಂಡಿಯೋ, ಅನ್ನವೋ ಕೊಟ್ಟು ಕಳುಹಿಸುತ್ತಿದ್ದೆ. ಈ ಮಗುವಿಗೆ ಬಂದಷ್ಟು ಧಾರಾಳ ಬುದ್ಧಿ ನನಗೆ ಬರಲಿಲ್ಲ. ರಮು, ಅವಳು ಹೇಳಿದ ಹಾಗೆ ಆಗಿಹೋಗಲಿ. ನಿನಗೆ ತೋರಿದಷ್ಟು ಖರ್ಚು ಮಾಡಿ ಒಂದು ಹೆಣ್ಣುಮಕ್ಕಳ ಆಶ್ರಮ ಕಟ್ಟಿಸಿಬಿಡು. ಮಂಜನಾಥನ ಹೆಸರಿನಲ್ಲಿ ಹತ್ತು ಹನ್ನೆರಡು ಹೆಣ್ಣುಮಕ್ಕಳಿಗೆ ಸುಖವಾಗಿರೋಕೆ ಅನುಕೂಲವಾಗಲಿ. ಅದು ಮಾಡಿದ ಮೇಲೆ ತಿರುಪತಿಗೆ ಹೋಗಿಬರೋದು. ಅದೇನೋ ತಿರುಪತಿ ಗೀಳು ಹಿಡಿದದೆ" ಎಂದು ಹೇಳಿ ಮೊಮ್ಮಗಳನ್ನು ಕರೆದು ಕೊಂಡು ಒಳಕ್ಕೆ ಹೊರಟುಹೋದನು.

* *

ರಮೇಶನು ಮಗಳ ಬುದ್ಧಿಗೆ ಆಶ್ಚರ್ಯಪಡುತ್ತಾ ಹೋಗಿ ಪ್ರಾಣೇಶ ನಿಗೆ ಫೋನ್ ಮಾಡಿದನು. ಅವನಿಗೂ ಏಕೋ ಇವೊತ್ತು ಏನೂ ಕೆಲಸ ಬೇಡ ಎನ್ನುವಂತಿತ್ತು. ಇಬ್ಬರಿಗೂ ಕೋರ್ಟಿನ ಕೆಲಸ ಅಷ್ಟು ಹೆಚ್ಚಾಗಿ ಇರಲಿಲ್ಲ. ಇದ್ದುದನ್ನು ಜೂನಿಯರ್‌ಗೆ ವಹಿಸಿಬಿಟ್ಟು ಸುಮಾರು ಮೂರು ಗಂಟೆಗೆ ಇಬ್ಬರೂ ಸೇರುವುದು ಎಂದು ಗೊತ್ತಾಯಿತು. ಯಾವಾ ಗಲೂ ಪ್ರಾಣೇಶನೇ ರಮೇಶ್ ಮನೆಗೆ ಬರುವುದು ವಾಡಿಕೆ. ಪ್ರಾಣೇಶ ನಿಗೆ ಕಾಫಿ ಎಂದರೆ ಪಂಚಪ್ರಾಣ. ರಮೇಶನ ಮನೆಯ ಕಾಫಿ ಯಾವಾ ಗಲೂ a 1.

ರಮೇಶನು ಗೆಳೆಯನಿಗೆ ಬೆಳಗಿನ ಸುದ್ದಿಯನ್ನು ಹೇಳಿದನು. ಪ್ರಾಣೇಶನು ಏನು ಮಾಡಬೇಕು ಎಂತಿದ್ದೀಯೆ ಅದನ್ನೂ ಹೇಳು ಎಂದನು.

"ಅದನ್ನು ಕೇಳುವುದಕ್ಕೇ ನಿನ್ನನ್ನು ಕರೆದದ್ದು"

"ನನ್ನ ಮಾತು ಕೇಳು. ನೀನು ಒಂದು ಐಡಿಯಲ್ ಆಶ್ರಮ ಕಟ್ಟಬೇಕು. ಹೆಣ್ಣುಮಕ್ಕಳಿಗೆ ಈಗ ಸರಿಯಾದ ಎಜುಕೇಷನ್ ಇಲ್ಲ. ಎಲ್ಲಾ ಗಂಡುಬೀರಿಯರಾಗೋ ಎಜುಕೇಷನ್. ಹೆಣ್ಣು ಎಷ್ಟಾದರೂ ತಾಯಿಯಾಗೋಕೆ ಹುಟ್ಟಿರೋಳು. ತಾಯಿಯೂ ತಂದೆಯ ಹಾಗೇ ಆದರೆ ಗತಿಯೇನು? ಎನ್ನೋದು ನಮ್ಮ ಎಜುಕೇಷನಿಸ್ಟ್ಸ ಮನಸ್ಸಿಗೇ ಬಂದಿಲ್ಲ. ತಾಯಿ ಎಂದರೆ ಹ್ಯಾಗಿರಬೇಕು ಗೊತ್ತೆ? ಹೊಟ್ಟೆಯ ತುಂಬ ಬಡಿಸಬೇಕು, ವಿಶ್ವಾಸವಾಗಿರಬೇಕು, ಸಾಯೋವರೆಗೂ ನೆನೆದುಕೊಳ್ಳೋ ಹಾಗೆ ನಡೆಯಬೇಕು. ಅದು ಬಿಟ್ಟು 'ಈ ಹಾಳು ಏಕೆ ಹುಟ್ಟಿತೋ?' ಎಂದು ಬಿಡಿಸಿಕೊಂಡ ಹಸು ಕರೂನ ಒದ್ದ ಹಾಗೆ ಮಕ್ಕಳ ವಿಚಾರದಲ್ಲಿ ನಡೆದುಕೊಳ್ಳೋಳು ಆಗಬಾರದು. ಹಾಗೆ ತಾಯಿತನದ ಎಜುಕೇಷನ್ ಕೊಡೋ ಆಶ್ರಮ ಕಟ್ಟಬೇಕಪ್ಪ!"

"ಮಾಡರ್ನ್ ಟೆಂಡೆನ್ಸೀಸ್ ಆರ್ ಅಗೇನಸ್ಟ್ ಇಟ್. ಹೆಣ್ಣು ಗಂಡಿನಂತೆಯೇ ಸಮಾಜದ ಒಂದು ಯೂನಿಟ್. ಈಕ್ವಲ್ ಆಪರ್‌ಚ್ಯುನಿಟಿ ಕೊಡಬೇಕು. ಅದಕ್ಕೆ ಎಲ್ಲಾ ಐಡೆಂಟಿಕಲ್ ಆಗಿರಬೇಕು."

"ನಾನ್ಸೆನ್ಸ್. ಈಕ್ವಲ್ ಆಪರ್‌ಚ್ಯುನಿಟಿ ಎಂದರೆ ಐಡೆಂಟಿಕಲ್ ಫಂಕ್ಷನ್ ಎಂದು ಹೇಳಿದವರು ಯಾರಯ್ಯಾ? ನೇಚರ್‌ನೇ ಹಾರಿಸೋ ಮಾತೇ ಆಡ್ತೀಯಲ್ಲಾ! ನೇಚರ್ ಪ್ರೊವೈಡ್ಸ ಫಾರ್ ಕೋಆಪರೇಷನ್ ಅಂಡ್ ನಾಟ್ ಫಾರ್ ಕಾಂಪಿಟಿಷನ್. ಸಾವಿರ ಹೇಳು, ಫೀಮೇಲ್ ಎಜುಕೇಷನ್ ಮಸ್ಟ್ ಡಿಫರ್ ಫ್ರಂ ಮೇಲ್ ಎಜುಕೇಷನ್."

"ಲೋ ಪ್ರಾಣೇಶ್, ಐ ಯಾಮ್ ಎ ಲೇಜೀ ಫೆಲೋ! ಆ ಡೀಟೆಲ್ಸ್ ಎಲ್ಲಾ ನೀನು ಯೋಚನೆ ಮಾಡು. ಬೇಕಾದರೆ ನಾನು ಯಾವಾಗಲೂ ಏನಾದರೂ ಹೇಳ್ತೀನಿ. ಕೊನೆಗೊಂದು ಚೆಕ್ ಬರೀ

ತೀನಿ. ಬೇಕಾದರೆ ಕಮಿಟಿಯಲ್ಲಿ ಹಾಕು, ಬೇಡದಿದ್ದರೆ ಬಿಡು. ಅಂತೂ ಒಂದು ಆಶ್ರಮ ಮಾಡು."

"ರಮೇಶ್, ನೀನು ಯಾಕೋ ಇಂಡೋಲೆಂಟ್ ಆಗಿಹೋದೆ. ಕೂತು ಒಂದು ಗಳಿಗೆ ಚೆನ್ನಾಗಿ ಯೋಚನೆ ಮಾಡಿ ಒಂದು ಐಡಿಯಲ್ ಇನ್‌ಸ್ಟಿಟ್ಯೂಟ್ ಮಾಡೋಣ. ಮುಂದೆ ಇತರರು ನಮ್ಮನ್ನು ನೋಡಿ ಕಾಪಿ ಮಾಡುವಂತಿರಲಿ ಎಂದರೆ ನೀನು ನನ್ನ ಮಾತೇ ಕೇಳುವುದಿಲ್ಲವಲ್ಲ."

"ನೋ ಪ್ರಾಣೇಶ್, ಐ ಯಾಮ್ ಹ್ಯಾಪಿ ಇನ್ ಕೋರ್ಟ್. ಅದರ್ ಟೈಮ್ಸ್ ಐ ವಾಂಟ್ಟು ಸ್ಪ್ರೇಚ್ ಆನ್ ಎ ಫೈರ್ ಬೆಡ್...."

"ವಿತ್ ಆರ್ ವಿತ್ ಔಟ್?"

"ಆಲ್‌ವೇಸ್ ಫಸ್ಟ್. ಆಫೀಸಿನಲ್ಲಿ ಜೂನಿಯರ್ಸ್ ಕೆಲಸ ನಾವು ಮಾಡುತೇವೇನೋ? ಹಾಗೆ ಈ ಡೀಟೆಯ್‌ಲ್ಸ್ ನೀನೂ ಮಾಡಿದರೆ ಮಾಡು. ಇಲ್ಲದಿದ್ದರೆ ಯಾರಿಗಾದರೂ ಹೇಳು. ಅನ್ ಐಡಿಯಾ, ಆಸ್ಕ ದಿ ಪ್ರೊಫೆಸರ್ ಟು ಡು ಇಟ್. ಹಿ ವಿಲ್ ಬಿ ಪ್ಲೀಸ್ಡ್."

ಆ ವೇಳೆಗೆ ವೀಣಾ ಕಾಫಿ ತೆಗೆಸಿಕೊಂಡು ಬಂದಳು. "ಪ್ರಾಣೇಶ್, ಹಿಯರೀಸ್ ದಿ ಗರ್ಲ್. ಷಿ ಈಸ್, ಟು ಮಿ ಇಂಟೆಲಿಜೆಂಟ್, ಟು ಯು ಪ್ರಿಕೋಷಸ್. ಆಸ್ಕ ಹರ್, ಲೆಟ್ ಅಸ್ ಸೀ."

ವೀಣಾ ಕೇಳಿದಳು, "ಸೀ ಅಂದರೆ ಸಮುದ್ರ ಅಲ್ಲ?"

"ನಿನಗೆ ಹೇಗೆ ಗೊತ್ತು?"

"ಮೊನ್ನೆ ಪೇಪರ್‌ನಲ್ಲಿ ಹಡಗು ಮುಳುಗಿಹೋದ ಚಿತ್ರ ಬಂದಿತ್ತು. ಆಗ ನಾನು ಹಡಗು, ಸಮುದ್ರ ಎರಡಕ್ಕೂ ಇಂಗ್ಲಿಷ್ ಕೇಳಿದೆ. ಅಮ್ಮ ಹೇಳಿದಳು ಷಿಪ್, ಸಿ ಅಂತ."

"ರಮೇಶ್, ಏನು ನಿನ್ನ ಮಗಳು ಷಿಪ್‌ರೆಕ್‌ನಿಂದ ಆರಂಭಿಸುತ್ತಿದ್ದಾಳಲ್ಲ!"

ದಟ್ ವಾಸ್ ಯುವರ್ ಛಾರ್ಜ್ ಅಗೇನ್‌ಸ್ಟ್ ಮಾಡರ್ನ್ ಎಜುಕೇಷನ್ ಅಫ್ ದಿ ಗರ್ಲ್ಸ್. ಷಿ ಮೈಟ್ ಹಾವ್ ರಿಫ್ಲೆಕ್ಟೆಡ್ ಯುವರ್ ಐಡಿಯ."

"ಅಂಡ್ ಸೋ, ಐ ಯಾಮ್ ದಿ ವಿರ್ಲ್ಡ್ ಆಫ್ ಪ್ಲೆ. ಲೆಟ್ ಇಟ್ ಬಿ. ಏನು? ವೀಣಾ? ನೀನು ಆಶ್ರಮ ಕಟ್ಟಬೇಕು ಅಂದೆಯಂತಲ್ಲ, ಹೇಗಿರಬೇಕು ಹೇಳು."

"ಮಾವ, ಭಾವನ ಕೈಲಿ ಆಗೋದಿಲ್ಲ. ನೀವು ನಿಂತುಕೊಂಡು ಕಟ್ಟಿ. ಅಲ್ಲಿ ನೋಡಿ ಮಾವ, ಈ ಹಾಳು ಸ್ಕೂಲುಗಳಲ್ಲಿರೋ ಹಾಗೆ ಬರೀಗೋಡೆ, ಮುರುಕಲು ಬೆಂಚು ಮಾಡಬೇಡಿ. ಒಂದು ಸಣ್ಣ ತೋಟ, ಅದರಲ್ಲಿ ಒಂದು ಸಣ್ಣ ಮನೆ. ನಾವು ಹೆಣ್ಣುಮಕ್ಕಳು ಬೊಂಬೆ, ಮಡಿಕೆ ಕುಡಿಕೆ ಇಟ್ಟುಕೊಂಡು ಆಟ ಆಡ್ತಾ ಆಡ್ತಾ ಕಲಿಯಬೇಕು ಮಾವ. ಹೊಟ್ಟೆ ಹಸಿಯೋ ವೇಳೆಗೆ ಯಾರಾದರೂ ಅನ್ನ ಹಾಕಬೇಕು, ಮಡಿ ಬಟ್ಟೆ ಕೊಡಬೇಕು, ನಾವು ದೊಡ್ಡವರಾದರೆ ನಾವೇ ಒಕ್ಕೋಬೇಕು: ನಾವೇ ತಿಂಡೀ ಮಾಡಬೇಕು; ಇನ್ನೂ ದೊಡ್ಡವರಾದರೆ ನಾವೇ ಅಡುಗೆ ಮಾಡಿ ಬಡಿಸಬೇಕು, ಹಾಗಿರಬೇಕು."

"ಪುಸ್ತಕ, ಓದು, ಲೆಕ್ಕ, ಏನು ಬೇಡವೇನಮ್ಮ?"

"ನಂಗೆ ಅದೆಲ್ಲಾ ಗೊತ್ತಾಗೋಲ್ಲ, ಮಾವ, ಚಿತ್ರ ಇರೋ ಪುಸ್ತಕ ಇರಲಿ. ಆದರೆ, ನಮಗೆ ಬೇಕಾದಾಗ ಓದುಕೊಳ್ಳೋಕೆ. ಮೇಡಂ ಓದೇ ಕತ್ತೇರಂಡೇ ಅನ್ನೋಹಾಗಿರಬಾರದು."

"ನಿನಗೆ ಅಕ್ಷರ ಕಲಿಸೋರು?"

"ಬಿಡಿ, ಮಾವ, ನಮ್ಮನ್ನು ಹೊಡೆದುಬಡಿದು ಅಕ್ಷರ ಕಲಿಸೋ ಗೋಳು ತಪ್ಪಬೇಕು. ಮಾವ! ಅಂಗಡಿಗೆ ಹೋದರೆ ಬಟ್ಟೆ ನಮಗೆ ಬೇಕಾದ್ದು ಸ್ಕೂಲಿನಲ್ಲಿ ಆದರೆ, ಪಾಠ ಮಾತ್ರ ಮೇಡಂಗೆ ಬೇಕಾದ್ದು. ಎಲ್ಲೀ ನ್ಯಾಯ ಮಾವ! ಊಟಕ್ಕೆ ಕೂತುಕೊಂಡರೆ ನೀವು ಸಾರು ಎಂದರೆ ಅತ್ತೆ ಮಜ್ಜಿಗೆ ಬಡಿಸಿದರೆ ನಿಮಗೆ ಹ್ಯಾಗಾಗುತ್ತೆ ಹೇಳಿ?"

"ಬ್ಯೂಟಿಫುಲ್ ಅನಾಲಜಿ, ರಮೇಶ್ ನಿನ್ನ ಮಗಳು ನಿನ್ನ ಮೀರಿಸುತ್ತಾಳಪ್ಪ! ಮಿಸ್. ವೀಣಾ, ಬಿ. ಎ., ಎಲ್ ಎಲ್. ಬಿ. ಅಡ್ವೋಕೇಟ್" ಎಂದು ಈಗಲೇ ಬೋರ್ಡ್ ಬರೆಸಿಡು."

"ಉಹೂಂ ಹುಂ. ನಾನು ಲಾಯರ್ ಆಗೋಲ್ಲಪ್ಪ!"

"ಹಾಗಾವರೆ ಏನಾಗುತ್ತೀಯೆ?"

"ನಾನು ಡಾಕ್ಟರ್ ಆಗುತ್ತೇನೆ. ಸೊಗಸಾದ ಕಲಾಪತ್ತಿನ ಕರಿಯ ಸೀರೆ ಉಟ್ಟುಕೊಂಡು, ಬೆಳ್ಳಗಿರೋ ಲಾಂಗ್‌ಕೋಟ್ ಹಾಕ್ಕೊಂಡು ಬಂದರೆ, ಹೇಗಿರಬೇಕು!"

"ನೀನು ಡಾಕ್ಟರನ್ನು ಯಾವೊತ್ತು ನೋಡಿದೆ?"

"ಅವೊತ್ತು ಅಮ್ಮನ ಜೊತೆಯಲ್ಲಿ ಆಸ್‌ಪತ್ರೆಗೆ ಹೋಗಿದ್ದೆ ಮಾವ! ಅವೊತ್ತು ಡಾಕ್ಟರ್-ಅಮ್ಮನಿಗೆ ಒಂದು ದೊಡ್ಡ ಹಾರ ಹಾಕಿ, ಹಣ್ಣು ಹಂಪಲು ಎಲ್ಲಾ ಕೊಟ್ಟು, ಅಮ್ಮ, ನಿಮ್ಮಿಂದ ಬದುಕಿದೋ ಅಮ್ಮ, ಅಂತ ಅವರೆಲ್ಲರೂ ಕಾಲಿಗೆ ಬೀಳುತಿದ್ದರು. ಅವೊತ್ತೇ ಅಮ್ಮನಿಗೆ ಹೇಳಿದೆ. ಅಮ್ಮಾ ನಾನು ದೊಡ್ಡವಳಾದರೆ ಡಾಕ್ಟರಾಗುತೀನಿ ಅಂತ!"

"ಡಾಕ್ಟರಾದರೆ ಗಂಡುಸರ ಜೊತೇಲಿ ಓದಬೇಕು. ಹೆಣ ಕೊಯ್ಯ ಬೇಕು."

"ಗಂಡಸರೇನು ಮನುಷ್ಯರಲ್ಲವೇ? ನೀವೆಲ್ಲ ಹುಲಿಗಳೇನೋ? ಹುಲಿಗಳೇ ಆದರೂ ಸರ್ಕಸ್‌ನಲ್ಲಿ ಯಾರಪ್ಪಾ ಹುಲಿ ಆಡಿಸೋರು ಹೆಂಗುಸು. ಹಾಗೇ! ಈಗ ಹೆಣ್ಣು ಬೊಂಬೆ ಇಟ್ಟುಕೊಂಡು ಆಡೋ ಹಾಗೆ ಆ ಗಂಡುಸರ ಜೊತೇಲಿ ಆಡೋದು. ಇನ್ನು ಹೆಣ ಕೊಯ್ಯೋದು. ನಮ್ಮ ಅಡಿಗೆ ಭಟ್ಟ ಈರುಳ್ಳಿ ಬದನೆಕಾಯಿ ಕೊಯ್ಯೋಲ್ಲವೇ ಹಾಗೇ! ಅದಕ್ಕೇನು ಮಹಾ!"

ಪ್ರಾಣೇಶನಿಗೆ ಆಶ್ಚರ್ಯವಾಯಿತು. ಐದಾರು ವರ್ಷದ ಹುಡುಗಿ, ಇಷ್ಟು ಮಾತು ಆಡಬಲ್ಲಳೆ? ಸಾಲದ್ದಕ್ಕೆ ಮಾತೂ ಅನನ್ವಯವಾಗಿಯೂ ಇಲ್ಲ. ಹಾಗೆಯೇ ಒಂದು ಗಳಿಗೆ ಯೋಚಿಸುತ್ತಿದ್ದು "ಹಾಗಾದರೆ ಬೊಂಬೆ, ಮಡಿಕೆ, ಕುಡಿಕೆ, ಪುಸ್ತಕ, ಇರೋ ಸ್ಕೂಲ್ ಬೇಕೋ?" ಎಂದ.

"ತೋಟ? ಅದನ್ನೇ ಮರೆತರಲ್ಲಾ?"

"ಆಗಲಮ್ಮಾ! ಮಾಡಿಸೋಣ?"

"ಎಷ್ಟು ಜನ ಇರಬೇಕಮ್ಮ?"

"ದೊಂಬಿ ಇರಬಾರದು ಮಾವ! ಥೂ, ಆ ದೊಂಬೀಲಿ ಅಸಯ್ಯ! ಎಂಟು ಹತ್ತು ಜನ ಅಷ್ಟೇ!"

"ಅವರಿಗೆ ಊಟ?"

"ಓ, ಊಟದ್ದೀಗ ಮಹಾ! ಯಾರಾದರೂ ಬಡವರನ್ನು ಕರೆದು ಈ ಮಕ್ಕಳಿಗೆ ಅನ್ನಮಾಡಿ ಹಾಕಿ. ನೀವೂ ಸುಖವಾಗಿರಿ ಎಂದ ರಾಯಿತು."

"ಐ, ಸೆ, ರಮೇಶ್, ದಿಸ್ ಇಸ್ ರಿಯಲಿ ಟ್ರಿಮೆಂಡೆಸ್. ಈಸ್ ಷಿ ಕೇಪಬಲ್ ಆಫ್ ಸೋಮಚ್ ಆಫ್ ಥಾಟ್."

"ನೋ. ಇಟಿಸ್ ನಾಟ್ ಥಾಟ್. ಲೈಕ್ ಮೈ ಆರ್ಗ್ಯುಮೆಂಟ್ಸ್ ಇನ್ ದಿ ಕೋರ್ಟ್, ಇಟೀಸ್ ಹರ್ ಎಕ್ಸ್‌ಪ್ರೆಷನ್, ನೆವರ್ ದಿ ರಿಸಲ್ಟ್ ಆಫ್ ಕಾಜಿಟೇಷನ್"

"ಆಗಲಮ್ಮ! ಹಾಗೇ ಮಾಡೋಣ. ಜಾಗಾ ಎಲ್ಲಾದರೂ ನೋಡಿದ್ದೀಯೋ?"

"ಹೋ! ನಮ್ಮ ಬಸವನಗುಡಿ ಬಂಗಲಿ."

"ರಿಯಲಿ, ರಿಯಲಿ, ರಮೇಶ್, ದಿಸ್ ಇಸ್ ಎಕ್ಸ್‌ಪರ್ಟ್ ಒಪಿನಿಯನ್. ಆ ಬಂಗಲಿ ಎಲ್ಲಾ ವಿದದಲ್ಲೂ ಆಶ್ರಮ ಇದ್ದ ಹಾಗೇ ಇದೆ ಕಣಯ್ಯ!"

"ಹೆಸರೇನಮ್ಮ!"

"ತಾತನ ಹೆಸರಿಡಿ, ಮಾವ, ಹಣ ಎಲ್ಲ ಅವರದಲ್ಲವೆ?"

"ನಿನ್ನ ಹೆಸರಿಟ್ಟರೆ?"

"ಕಳ್ಳ ಮಾವ, ಎಲ್ಲೋ ತಾತನ್ನ ಕೇಳಿದ್ದೀರಿ. ತಾತಾ ಹೇಳಿದಿರೇನೋ?"

ಪ್ರಾಣೇಶನು ಅವಳನ್ನು ಬರಸೆಳೆದು ತಬ್ಬಿಕೊಂಡು ಮುತ್ತಿಟ್ಟು

"ವೀಣಾ, ನೀನು ಸಾಮಾನ್ಯಳಲ್ಲ. ಚೆನ್ನಾಗಿ ಬದುಕು ತಾಯಿ'' ಎಂದು ತಲೆ ಸವರಿದನು.

ವೀಣೆಯು ನಗುತ್ತ ಬಿಡಿಸಿಕೊಂಡು ಬಂದು ತಂದೆ ಪಕ್ಕದಲ್ಲಿ ನಿಂತಳು. ರಮೇಶನು ಆನಂದದಿಂದ ಮಗಳ ಮಾತನ್ನು ಕೇಳಿ ಸಂತೋಷಪಡುತ್ತಿದ್ದನು.

"ಪ್ರಾಣೇಶ್, ಫಾದರ್ ಅರ್ ಡಾಟರ್, ವಿ ಹ್ಯಾವ್ ಸಪ್ಲೈಡ್ ದಿ ಡೀಟೆಯಿಲ್ಸ್. ಪ್ಲೀಸ್ ಕಂಪ್ಲೀಟ್ ದಿ ರೆಸ್ಟ್ ಅಂಡ್ ಬ್ರಿಂಗ್ ಅಫ್ ಫಾರ್ ಸಿಗ್ನೇಚರ್. ಯಾವೊತ್ತು?"

"ಇನ್ನೊಂದು ಎರಡು ಮೂರು ದಿನ.''

*    *    *    *

ಅವರು ಹಾಗೇ ಇನ್ನೂ ಒಂದು ಗಳಿಗೆ ಹಾಗೇ ಮಾತನಾಡುತ್ತಿದ್ದರು. ಆಳು ಬಂದು ಪಿಳ್ಳೇಗೌಡರು ಬಂದಿದ್ದಾರೆ ಎಂದನು. ಬರಹೇಳು ಎನ್ನುತ್ತಿರುವ ಹಾಗೆಯೇ ಗೌಡನು ಬಂದು ಬಾಗಿಲಲ್ಲಿ ಕಾಣಿಸಿಕೊಂಡು ''ಸರಣು, ಬುದ್ಧಿ, ಸರಣು. ಇಬ್ಬರೂ ಇಲ್ಲೇ ಇದ್ದೀರಿ, ಸರಿ ಬಿಡಿ'' ಎನ್ನುತ್ತಾ ಒಳಗೆ ಬಂದನು.

ರಮೇಶನು ಬಾಯಲ್ಲಿದ್ದ ಅಡಕೆಲೆ ದವಡೆಗೆ ಒತ್ತರಿಸಿಕೊಂಡು ಬನ್ನಿ ಎಂದು ಹಲ್ಲು ಕಿಸಿಯುವುದರೊಳಗಾಗಿ ಪ್ರಾಣೇಶನು "ಕಾಫೀ ಕಿಂಗ್ ಬರಬೇಕು, ಬರಬೇಕು" ಎಂದು ಕರೆದನು. ರಮೇಶನು ಜಾರಿದ್ದ ದಟ್ಟಿ ಸುತ್ತಿಕೊಂಡು ಕೈ ಕುಲಿಕಿ, ಸೋಫಾದ ಮೇಲೆ ಕೂರಿಸಿದನು. ಪ್ರಾಣೇಶನೂ ಕೈ ಕುಲಿಕಿ, "ಏನು ಗೌಡರು ಸುದ್ದಿ ಕೊಡದೆ ಬಂದು ಬಿಟ್ಟದ್ದು?" ಎಂದು ವಿಚಾರಿಸಿದನು.

ಗೌಡನು ಮುಹಡಿಯಲ್ಲೆಲ್ಲಾ ತುಂಬುವಂಥಾ ನಗು ನಕ್ಕು "ಅಲ್ಲಾ, ಕೋರ್ಟ್‌ಗಿಂದು ಏನಾದರೂ ಇದ್ದಿದ್ದರೆ ಮೊದಲೇ ಸುದ್ದಿ ಕೊಡ

ಬೇಕು. ಏನೋ ರಿಕಾರ್ಡ್ ಗಿಕಾರ್ಡ್ ನೋಡಿ ಇಡಲಿ ಅಂತ. ಈಗ ನಾನು ಬಂದಿರೋದು ಬೇರೆ ಕೆಲಸ. ಈ ಸಲ ತಾವಿಬ್ಬರೂ ನಮ್ಮ ಊರಿಗೆ ಬರಬೇಕು ಅಂತ ಕರೆಯೋಕೆ? ಒಂದು ನಾಕು ದಿವಸ ಅಲ್ಲಿದ್ದು ಬರೋರಂತೆ ಬನ್ನಿ. ಅಲ್ಲದೆ ಅಲ್ಲಿಗೆ ಒಬ್ಬರು ಸನ್ಯಾಸಿಗಳು ಬಂದಿದ್ದಾರೆ. ಅವರಂಥಾವರನ್ನು ನಾನು ಇದುವರೆಗೂ ಕಾಣೆ. ಆ ಗಿರಿ ನಮ್ಮ ಮಗ್ಗುಲಲ್ಲೆ ಅಲ್ಲವಾ ಇರೋದು. ಅಲ್ಲಿಗೆ ಬರದವರೇ ಇಲ್ಲ. ಎಷ್ಟೋ ಜನ ಸನ್ಯಾಸಿಗಳು ಬರುತಾರೆ. ಆದರೆ ಇವರು ಎಲ್ಲರಂತಲ್ಲ! ಈಗ ಇದೋ ಇಲ್ಲಿ ನಾವು ಮಾತಾಡುತ್ತಾ ಇದ್ದೇವೋ, ನಾವು ನಾಳೆ ಅಲ್ಲಿಗೆ ಹೋಗುತೇವಲ್ಲ, ಅಲ್ಲಿ ನೀವು ಮೂರು ಜನ, ಮಾತಾಡುತಿದ್ದಿರಿ. ಇದದೇ ಮಾತಾಡಿದಿರಿ ಎಂದು ಹೇಳದಿದ್ದರೆ ಕೇಳಿ.''

ಪ್ರಾಣೇಶನು ರಮೇಶನ ಮುಖವನ್ನು ನೋಡಿದನು. ರಮೇಶನು ಮಾತನಾಡಿದನು; "ಆಯಿತು, ಗೌಡರೇ, ಅವರನ್ನು ನೋಡಿ ನಮಗಾಗಬೇಕಾದುದೇನು? ತಾವು ಹೇಳಿದಿರಿ. ಸರಿ. ಸಾಕು. ನಾವೂ ಅವರನ್ನು ದೊಡ್ಡವರು ಎಂದುಬಿಡೋಣ, ಇಲ್ಲಿ ನಮ್ಮ ಕೆಲಸಗಳು ನಮಗೆ ಏನೇನೋ ಇವೆ. ಇವೆಲ್ಲ ಬಿಟ್ಟು ಒಬ್ಬ ಸನ್ಯಾಸಿಯನ್ನು ನೋಡೋಕೆ ಅಷ್ಟು ದೂರ ಹೋಗಿಬರುವುದು ಎಂದರೇನು? ಯಾಕೆ ಅಷ್ಟು ಆಯಾಸ"

ಆ ಸರಣಿ ಪ್ರಾಣೇಶನಿಗೆ ಒಪ್ಪಲಿಲ್ಲ: "ಈ ರಾಯರ ಮಾತೇ ಹೀಗೇ! ಅದನ್ನು ಮನಸ್ಸಿಗೆ ಹಾಕಿಕೊಳ್ಳಬೇಡಿ. ತಾವು ಹೇಳಿ. ಗೌಡರೇ! ಆಯಿತು. ಇನ್ನೇನೇನು ಮಹಿಮೆಗಳು ಕಂಡಿದ್ದೀರಿ?"

ಗೌಡನಿಗೆ ರಮೇಶನ ಮಾತಿನಿಂದ ಕೋಪ ಬಂದಿತ್ತು. ಉತ್ತಮರು ಎನ್ನಿಸಿಕೊಂಡವರು ಸಾಧುಸಂತರಲ್ಲಿ ಭಕ್ತಿಯಿಲ್ಲದೆ ನಡೆಯುವುದು ಅವನ ಮನಸ್ಸಿಗೆ ಬರಲಿಲ್ಲ. ಆದರೆ ದೊಡ್ಡ ಲಾಯರು ತನ್ನ ಕೇಸು ಗೆದ್ದುಕೊಟ್ಟು ಉಪಕಾರ ಮಾಡಿದ್ದಾನೆ; ಹಿಂತಿರುಗಿ ಮೊಕದ ಮೇಲೆ ಹೊಡೆದ ಹಾಗೆ ಮಾತನಾಡುವಂತಿಲ್ಲ. ಆದರಿಂದ

ಪ್ರಾಣೇಶನಿಗೆ ಹೇಳುವಂತಿದ್ದರೂ ರಮೇಶನಿಗಾಗಿಯೇ ಹೇಳುತ್ತಾ ಅವನ ಮುಖವನ್ನೇ ನೋಡುತ್ತ ನುಡಿದನು: "ನಾವು ಗೌಡಗಳು ಬಹಳ ಜಂಭದೋರು. ತಮ್ಮಿಂದಲೇ ಲೋಕವೆಲ್ಲ ಬದುಕಿರೋದು ಅನ್ನುವಷ್ಟು ಅಹಂಕಾರದವರು. ಅವರೊಳಗೂ ಈಗ ರಾಜ್ಯ ನಮ್ಮದೇ ಆಗದೆ ಅಂದಮೇಲೆ ಕೇಳಬೇಕಾ? ಜೊತೆಗೆ ನಾನು ಗತಿಯಿಲ್ಲದಿದ್ದವ ನಲ್ಲ. ಇಂಥಾವನು ಒಬ್ಬ ಸನ್ಯಾಸೀನ, ಅದೂ ಬ್ರಾಹ್ಮಣ ಸನ್ಯಾಸೀನ ಒಪ್ಪಿಕೊಂಡು, ಅವರನ್ನ ನೋಡೋಕೆ ಬನ್ನಿ ಅಂತ ಕರೆದರೆ, ನೀವು, ಉತ್ತಮರು ಬರೋಲ್ಲ ಅಂತೀರಲ್ಲ ನ್ಯಾಯವಾ? ತಮ್ಮ ಕಾರೂ ತರಬೇಡಿ, ನಮ್ಮ ವ್ಯಾನ್‌ನಲ್ಲಿ ಹೋಗೋವ. ತಮಗೆ ಇಷ್ಟ ಇಲ್ಲದಿದ್ದರೂ ಹೊರಡಿ. ನಮ್ಮ ಬಲವಂತ ಅಂತ ಹೊರಡಿ. ಈಗ ನಾನೇ ಶಿವಮೊಗ್ಗಕ್ಕೆ ಬನ್ನಿ ಸ್ವಾಮಿ, ಫೀಸ್ ಕೊಡುತೀನಿ ಅಂದರೆ ಬರುತಿದ್ದರೋ ಇಲ್ಲವೊ? ಹಾಗೇ ಈಗಲೂ ಬನ್ನಿ. ಎಂಟು ದಿನ ಇರಿ. ನಿಮ್ಮ ಇಬ್ಬರಿಗೂ ದಿನಕ್ಕೆ ನೂರು ರೂಪಾಯಿನಂಗೆ ಎಂಟುನೂರು ರೂಪಾಯಿ, ಹೋಗತಾ ಬರತಾ ಖರ್ಚಿಗಿನ್ನೂರು ರೂಪಾಯಿ ಒಂದು ಸಾವಿರ ರೂಪಾಯಿ ಕೊಡುತೀನಿ. ಇಕೋ ಚೆಕ್ ಬರೀಲಾ?"

ರಮೇಶನಿಗೂ ಮನಸ್ಸು ಕದಲಿತು. ಏನೋ ನಿದ್ದೆಯಿಂದ ಎದ್ದವ ನಂತೆ, "ಆಫ್ಟರ್ ಆಲ್, ಗೌಡರು ಹೇಳುತಿರೋದು ಹಾಲಿಡೇ ತಕೊಳ್ಳಿ, ಅಂತ! ಅಷ್ಟೇತಾನೇ! ಪ್ರಾಣೇಶ್, ಅವರು ಎಂಟು ದಿವಸ ಹೇಳಿದರು. ನಾವು ಅದನ್ನು ಮೂರು ದಿವಸ ಮಾಡೋಣ. ಶನಿವಾರ, ಭಾನುವಾರ, ಸೇರಿ ಐದು ದಿನವಾಯಿತು. ಹೋಗಿಬರೋಣ ನಡಿ. ಕೋರ್ಟ್ ವರ್ಕ್ ಎಲ್ಲಾ ಜೂನಿಯರ್ಸ್ ನೋಡಿಕೊಳ್ಳಲಿ" ಎಂದನು. ಪ್ರಾಣೇಶನಿಗೆ ಮೊದಲೇ ಮನಸ್ಸು ಅತ್ತ ಕಡೆ ಹೊರಟೇಹೋಗಿತ್ತು. ಅದರಿಂದ ನಸುನಗುತ್ತ "ದಟ್ಸ್ ರೈಟ್. ಹಾಗಿರಬೇಕು. ಕಾಂಪ್ರಮೈಸ್ ಇಲ್ಲದಿದ್ದರೆ ಆಗತ್ತಯೇ? ಸರಿ. ಅದು ಹಾಗೇ ಮಾಡೋಣ! ಇನ್ನೇನು ಗೌಡರೆ, ತಮ್ಮ ಪಾಯಿಂಟ್ ಗೆದ್ದಿತಲ್ಲ!"

"ಹಂಗಾದರೆ ಈಗ ಚೆಕ್ ಎಷ್ಟಕ್ಕೆ ಬರೀಬೇಕು?"

ರಮೇಶನು "ಮೊದಲು ಅಲ್ಲಿ ಹೋಗಿ ಅಲ್ಲಿ ನಮಗೆ ಏನೇನು ಖರ್ಚು ಆಗುತ್ತೆ? ಏನೇನು ಕಷ್ಟ ಆಗುತ್ತೆ? ನೋಡಿಕೊಳ್ಳೋಣ, ಅದಕ್ಕೆ ತಕ್ಕಂತೆ ಡಿಮಾಂಡ್ ಮಾಡಿ ಬಿಲ್ ಕಳುಹಿಸುತ್ತೇವೆ. ಅದು ವರೆಗೂ ಚೆಕ್‌ಬುಕ್ ಜೇಬಿನಲ್ಲಿರಲಿ. ಈಗ ನೀವು ಇಷ್ಟು ಮಾತು ಆಡಿ ನಮ್ಮನ್ನು ರೇಗಿಸಿದ್ದಕ್ಕೋಸ್ಕರ, ನಿಮಗೊಂದು ಡ್ರಿಂಕ್ ಕೊಟ್ಟು ಹೊಟ್ಟೇ ಉರಿ ತೀರಿಸಿಕೊಳ್ಳುತ್ತೇವೆ. ಏನಂತೀರಿ?"

"ವೈದ್ಯ ಹೇಳಿದ್ದೂ ಹಾಲೂ ಅನ್ನ ಅಂದಂಗಾಯಿತು. ಅಷ್ಟು ತಾನೇ?"

"ರಮೇಶ್, ಈಗ ಕಾಫಿ ತರಿಸು. ಸನ್ಯಾಸಿ ಮಾತು ಮುಗಿಸಿ, ಆಮೇಲೆ ಡ್ರಿಂಕ್ ಆಗಲಿ.''

''ಸರಿ. ಬಿಡಯ್ಯಾ, ಬಿಗ್ಗೆಸ್ಟ್ ಕಾಫಿಪ್ಲಾಂಟರ್. ಅವರು ಕೊಟ್ಟ ಕಾಫೀನೆ ಅವರಿಗೆ ಕೊಡೋದೆ? ಇನ್ನೇನಾದರೂ ಕೊಡೋಣ."

"ಅವರಿಗಿಲ್ಲದ್ದು ನೀನೇನು ಕೊಟ್ಟೀಯೆ? ಫ್ರಂದಿಡರ್ಟೀಯಸ್ಟ್ ಕಂಟ್ರಿ ಲಕ್ಕರ್ ಅಪ್‌ಟು ದಿ ಕ್ಲಾಸ್ಸಿಯೆಸ್ಟ್ ಫಾರಿನ್ ಒನ್ಸ್? ಅದರಿಂದ ಈಗ ನಾನು ಹೇಳಿದ ಹಾಗೆ ಮಾಡು. ಅಥವಾ ಅವರನ್ನೇ ಕೇಳು. ಅವರು ಹೇಳಿದ ಹಾಗೆ ಮಾಡು."

"ಅಗ್ರೀಯಿಂಗ್ ಎ ಕಾಂಪ್ರಮೈಸ್. ಆಗಲಪ್ಪ, ಏನು ಗೌಡರೆ? ತಾವು ಹೇಳಿದ್ದು, ಏನು ಬೇಕು ಅಪ್ಪಣೆಯಾಗಲಿ."

"ತಾವು ಉತ್ತಮರು, ಇನ್ನೂ ಮೂರು ಗಂಟೆ. ಈಗಲೇ ತಮ್ಮನ್ನು ಡ್ರಿಂಕ್ ಕೇಳಿ ಯಾಕೆ ಕೆಡಿಸಬೇಕು? ಕಾಫಿ ತರಿಸಿ."

"ಗೌಡರೆ, ನಮ್ಮನ್ನು ಕೆಡಿಸಿದ್ದು ಡ್ರಿಂಕ್ ಕೇಳೋ ತಾವಲ್ಲ. ತಮ್ಮಂಥಾ ಹಣವಂತರ ಮರ್ಜಿ ಹಿಡಿಯೋಕೆ ಬೇಕಾದ್ದು ಮಾಡುವುದಕ್ಕೆ ಸಿದ್ಧವಾದ ಮನಸ್ಸು. ಅಲ್ಲದೆ, ನೋಡಿರಿ. ನಿಮ್ಮ ಮಲೆನಾಡಿನಲ್ಲಿ ನಿಂತ ನೀರೂ, ಮನುಷ್ಯನ ಹತ್ತಿರ ನಿಂತ ಹೆಚ್ಚು ಹಣ, ಎರಡೂ ಕರಪ್ಟೀವ್

ನೋಡಿ. ಒಂದು ಮಾಸ್ಕ್ವಿಟೋಬ್ರೀಡ್ ಮಾಡಿ ಮಲೇರಿಯಾ ತಂದರೆ ಇನ್ನೊಂದು ಆರ್ಟಿರಿಲಿಜನ್ ಟೆಂಡೆರ್ಸೀಸ್ ಬ್ರೀಡ್ ಮಾಡಿ ಮನುಷ್ಯನ್ನ ಸೈಟ್ರಾಸ್‌ಬ್ರೀಡ್ ಮಾಡುತ್ತೆ. ಇರಲಿ, ಬಿಡಿ. ಈಗ ಹಾಗಿದ್ರೆ ಕಾಫೀನೇನೋ?"

"ನಾನು ಇಲ್ಲಿ ಇರೋವರೆಗೆ ತಾವು ಹೇಗೆ ಹೇಳಿದ್ರೆ ಹಾಗೆ. ನಮ್ಮ ಚಿಕ್ಕರಾಯರು ಹೇಳಿದಂಗೇ ಆಗಲಿ ಬಿಡಿ."

"ನಾನು ರಮೇಶನಿಗಿಂತ ವಯಸ್ಸಿನಲ್ಲಿ ದೊಡ್ಡೋನು ಕಣ್ರಿ."

"ಅಲ್ಲಾ ರಾಯರೆ, ವಯಸ್ಸಿನಲ್ಲಿ ದೊಡ್ಡೋರು ತಾವು ನಿಜ. ಬುದ್ಧೀಲಿ, ತಾವು ಇಬ್ಬರೂ ಸರಿಸರಿ. ಆದರೆ, ಅಲ್ಲಿ ಒಂದು ಗೆಪ್ಪೆ ಕೂತು, ಅದು ತಮ್ಮನ್ನ ನೀನು ಚಿಕ್ಕೋನು ನಾನು ಚಿಕ್ಕೋನು ಅಂದು ಅಂದು, ತಾವೂ ಚಿಕ್ಕೋರಂಗೆ ನಡೆದು ನಡೆದು, ಅದು ನಮ್ಮ ಕಣ್ಣಿಗೆ ಬಿದ್ದು ಬಿದ್ದು, ನಮ್ಮ ಬುದ್ಧೀಲಿ, ಇದು ಎಡ, ಇದು ಬಲ, ಅಂತ ನಿಂತೋಗವೆ. ಅದಕ್ಕೆ ಹಾಗಂದೆ. ಕೋಪಮಾಡಿಕೋ ಬೇಡಿ."

ಪ್ರಾಣೇಶನಿಗೆ ಸೋಫಾದ ಮೇಲೆ ಕೂತಿದ್ದಾಗ ಮುಳ್ಳು ಚುಚ್ಚಿ ದಂತಾಗಿತ್ತು. ಸಾವಿರಾರು ರೂಪಾಯಿ ಕೊಡುವ ಕ್ಲೈಂಟ್ ಅಲ್ಲದಿದ್ದರೆ, ಅವನ ಕೋಪದಲ್ಲಿ ಎದ್ದು ಒದ್ದುಬಿಡಬೇಕು. ಆದರೂ ಅದೆಲ್ಲ ನುಂಗಿ ಕೊಂಡು, ಅವನ್ನೆಲ್ಲ ಲಘುವಾಗಿ ಹಾರಿಸುವ ಬುದ್ಧಿವಂತಿಕೆಯ ನಗುವಿ ನಿಂದ ಹೇಳಿದನು, "ಎಷ್ಟಾಗಲಿ ರಮೇಶ್ ನೋಡಿ ಗೌಡರೆ! ರಮೇಶ ಎಂದರೆ ವಿಷ್ಣು. ಲಕ್ಷ್ಮೀಪತಿ. ಅವನ ಹತ್ತಿರ ಎಲ್ಲರೂ ತಗ್ಗಬೇಕು. ನಿಜ. ಇಲ್ಲದಿದ್ದರೆ ತಾವು ತಾನೇ ಒಲೀತಿದ್ದಿರಾ? ಅದಿರಲಿ. ಆ ಸನ್ಯಾಸಿ ಗಳ ವಿಚಾರ ಅಷ್ಟು ಹೇಳಿ."

ಗೌಡನಿಗೂ ಗೊತ್ತಾಯಿತು ತಾನು ಆಡಿದ ಮಾತು ಚುಚ್ಚಿ ನೋಯಿಸಿತು ಎಂದು. ಅವನಿಗೆ ನೋಯಿಸಬೇಕು ಎಂದು ಆಸೆಯಿರಲಿಲ್ಲ. ಲೋಕಾಭಿರಾಮವಾಗಿ, ತನ್ನ ಅನುಭವಕ್ಕೆ ಬಂದಿದ್ದ ವಿಷಯವನ್ನು ತನ್ನ ವೈಖರಿಯಲ್ಲಿ ಹೇಳಿದ್ದ ಅಷ್ಟೆ! ಆದರೆ ಅದು ಕವಣೆಕಲ್ಲು ಆಗಿ

ಹೋಯಿತು. ಅದನ್ನು ಮರೆಸುವುದಕ್ಕಾಗಿ ವಿಷಯಾಂತರವಾಗಲೆಂದು ಹೇಳಿದನು :—"ನೋಡಿ, ದೇವ್ರು, ನಾವು ಹಳ್ಳೀ ಜನ. ನಮಗೆ ಮಾತು ಅಷ್ಟು ಚೆನ್ನಾಗಿ ಬರೋಲ್ಲ. ನಮ್ಮ ಮನಸ್ಸಿಗೆ ಹಿಡಿಯೋದು ನಿಮ್ಮ ಶಾಸ್ತ್ರಗೀಸ್ತ್ರ ಅಲ್ಲ. ಮನುಷ್ಯ ನೇರವಾಗಿರಬೇಕು. ಕಟ್ಟುನಿಟ್ಟಾಗಿರ ಬೇಕು. ಹೊಳೇಲಿರೋ ಬಂಡೆಹಾಗೆ, ಭದ್ರವಾಗಿರಬೇಕು. ನುಡಿಯೋ ನುಡಿ ನಡೆಯೋ ನಡೆ, ಎರಡೂ ಕರಾರ್‌ವಾಕ್ಕಾಗಿರಬೇಕು. ಆಗ ನಾವು ಒಪ್ಪೋದು. ಅಲ್ಲದೆ, ನಮ್ಮ ಸನ್ಯಾಸಿಗಳು ಕರಾಮತ್ತಿನವರು. ನೀವು ಊರಲ್ಲಿರೋರು ನಿಮಗೆ ದೈಯ, ಪೀಡೆ, ಪಿಶಾಚಿ, ಅಂದರೆ ನಂಬಿಕೆಯಿಲ್ಲ.

ಪ್ರಾಣೇಶ್ ನಡುವೆ ಬಾಯಿ ಹಾಕಿದನು: "ಹಾಗಲ್ಲರೀ! ನಾವೇ ದೈಯ, ಪೀಡೆ, ಪಿಶಾಚಿ, ಆಗಿರೋವಾಗ ನಮಗಿಂತ ಇನ್ನು ಯಾವ ದೈಯ, ಪೀಡೆ, ಪಿಶಾಚಿ, ಬರಬೇಕು ಹೇಳಿ?"

"ನಿಜ, ಸೋಮಿ, ಇಲ್ಲಿ ತಮ್ಮಿಬ್ಬರನ್ನು ಬಿಡಿ. ತಾವೇನೋ ನನ್ನ ಭಾಗಕ್ಕೆ ದೇವರಾಗಿದ್ದೀರಿ. ಇಷ್ಟು ಕೊಡು ಅಂತ ಈ ಐದು ವರ್ಷದಿಂದ ತಮ್ಮ ಬಾಯಲ್ಲಿ ಒಂದು ದಿನವಾದರೂ ಬಂದಿಲ್ಲ. ತಮ್ಮನ್ನು ಅಂದರೆ ಬಾಯಲ್ಲಿ ಹುಳು ಸುರಿದೀತು. ಆದರೆ ಈ ಊರಲ್ಲೇ ಇನ್ನೂ ಕೆಲವರು ಮಹಾನುಭಾವರು ಇದ್ದಾರೆ ಸೋಮಿ. ಶನಿಮಹಾರಾಯ ಹೆಗಲಮೇಲೆ ಹತ್ತಿದರೆ ಅವರ ಆಫೀಸಿಗೆ ಹೋಗಬೇಕು. ಅವರೆಲ್ಲ ಈ ಜನ್ಮದಲ್ಲಲ್ಲ: ಹಿಂದಿನ ಜನ್ಮದಲ್ಲಾದರೂ ದೈಯ, ಪೀಡೆ, ಪಿಶಾಚಿ, ಆಗದಿದ್ದರೆ, ಅವರಿಗೆ ಕಬ್ಬಿಣದ ಕೊಕ್ಕು ಬರತಿತ್ತು ಅಂತ ನನ್ನ ಯೋಚನೆ. ಬಿಡಿ, ಮನೆ ಅಂದ ಮೇಲೆ ಕಕ್ಕಸು ಇರಬೇಕು. ಈಗಂತೂ ರೂಮು ಕಟ್ಟು ಅಂದರೆ ಇಂಜನಿಯರ್ ಮೊದಲು ಕಕ್ಕಸ್ ಎಲ್ಲಿರಬೇಕು ಅಂತಾರೆ. ಬಹುಶಃ ಅವರಿಗೂ ಈಗೀಗ ಎಲ್ಲೆಲ್ಲೂ ಎಲ್ಲರ ಮನಸ್ಸು ಕಕ್ಕಸ್ಸೇ ಆಗತಾ ಅದೆ ಅಂತ ಅನ್ನಿಸದೇನೋ? ಅದಿರಲಿ, ಬಿಡಿ, ನಾವು ನೋಡಿ, ನಮಗೆ ಸನ್ಯಾಸಿ ಗಳನ್ನ, ವಿರಕ್ತರನ್ನ, ಅಳೆಯೋ ಕೋಲಿಲ್ಲ. ಅದಕ್ಕಾಗಿ ನಾವು ಅವರ ಕರಾಮತ್ತು ನೋಡೋದು. ಮೊದಲು ಆ ಸನ್ಯಾಸಿ ಮೇಲೆ ನಂಗೆ ಅಷ್ಟು ಭಕ್ತಿ ಯಾಕೆ ಬಂತು ಬಲ್ಲಿರಾ! ಅಲ್ಲಿ ಚಿಕ್ಕಮಗಳೂರಿನಿಂದ ಗಿರಿಗೆ

ಹೋಗುವಾಗ ಆ ಬಲಗಡೆಗೆ ಒಂದು ಭಾರಿಯ ಬಟ್ಟಲಿನಂತೆ ಕಮರಿ ಅದೆ. ನೋಡಿ, ಅಲ್ಲಿ ರಸ್ತೆಗೆ ಸುಮಾರು ಒಂದು ಮೈಲಿ ದೂರದಲ್ಲಿ ಒಂದು ಗವಿ ಅದೆ. ಅದನ್ನು ಎಲ್ಲರೂ ದೊಡ್ಡ ಹುಲಿ ಗವಿ ಅಂತಾರೆ. ಅದರೊಳಗೆ ಹುಲಿ ಇವೆಯೋ ಇಲ್ಲವೋ ಹೋಗಿ ನೋಡಿದೋರಿಲ್ಲ. ಅಂತೂ ಒಬ್ಬೊಬ್ಬರೇ ಅಲ್ಲಿಗೆ ಹೋಗೋದಿಲ್ಲ. ಇಲ್ಲಿ ಇವಯ್ಯ ಹೋಗಿ ಇದ್ದು ಬಿಡೋದಾ? ಇದು ನನಗೆ ತಿಳೀತು. ಅಲ್ಲಿಂದ ನಮ್ಮ ಬಂಗಲೆ ಎಷ್ಟು ದೂರ? ಒಂದು ನಾಕೈದು ಮೈಲಿ ಆದೀತು. ಆ ಸುದ್ದಿ ಕೇಳತಲೆ ನನಗೆ ಮೈ ಜುಮ್ಮಂತು. ಹಾಡು ಹಗಲಿನಲ್ಲೂ ಆ ಗವಿ ಬಳಿ ಹೋಗೋಕೇ ದಿಗಿಲಾಗತದೆ. ನಾವು ಹಿಂದೆ ಪೈಲೆಪಂಚವೀಸೆ ಆಗಿದ್ದಾಗ ನಾಕೈದು ಜನ ಸೇರಿ ಭಾರಿ ಟಾರ್ಚ್ ತಕೊಂಡು ಹೋಗಿದ್ದೋ! ಒಳಕ್ಕೆ ಹೋದರೆ, ಇನ್ನೊಂದು ಲೋಕದವರು ಬಂದು ಸೇರಿಕೊಂಡು ನಮ್ಮನ್ನ ಬೇಕೂ ಅಂತ ಅಂಜಿಸಿದಂತಾಯಿತು. ಅಲ್ಲಿ ಒಂದು ಫರ್ಲಾಂಗು ಹೋದರೆ, ಅಲ್ಲಿ ಸೊಗಸಾದ ನೀಲ ಅನ್ನೋ ಅಂಥಾ ನೀರು ಮೂರು ಬೆರಳಗಾತ್ರ ಧುಮುಕತದೆ. ತಣ್ಣಗೆ ಕೊರೆಯೋ ನೀರು ಅಲ್ಲಿ ಒಂದು ಹತ್ತು ಹದಿನೈದು ಅಡಿ ಭಾವಿಯಾಗಿ ನಿಂತದೆ. ಅಲ್ಲಿಗೆ ಅಷ್ಟು ದೂರದಲ್ಲಿ ಮೇಲಕ್ಕೆ ಒಂದು ಗವಾಕ್ಷಿ ಹೊಡೆದ್ದಾಗೆ ಒಂದು ತೂತಾಗಿ ಅಷ್ಟು ಬೆಳಕು ಬರುತ್ತದೆ. ಆ ಗವೀಲಿ ಒಂದು ವಿಚಿತ್ರ. ಅಂದರೆ, ಮಿಕ್ಕ ಗವಿಗಳಂಗೆ, ದುರ್ವಾಸನೆ ಇಲ್ಲ. ಏನೋ ಒಂದು ತರದ್ದು ಗಮ್ಮನ್ನೋ ವಾಸನೆ. ಯಾಕೋ ಮುಂದಕ್ಕೆ ಹೋಗೋಕೆ ಮನಸ್ಸಾಗಲಿಲ್ಲ. ಬಂದುಬಿಟ್ವಿ, ಆ ಗವೀಲಿ ಒಬ್ಬ ಮನುಷ್ಯ ಸೇರಿಕೊಂಡು ಇದ್ದಾನೆ ಅಂದರೆ ಯಾಕೋ ಆಶ್ಚರ್ಯ ವಾಯಿತು. ಹೋಗಬೇಕು ನೋಡಬೇಕು ಅಂದುಕೊಂಡೆ, ಆಗಲಿಲ್ಲ. ನನಗೆ ಇದ್ದೇ ಇದೆಯಲ್ಲ ಇವತ್ತು ಮಂಗಳೂರು, ಅಲ್ಲಿಂದ ಮೈಸೂರು, ಅಲ್ಲಿಂದ ಶಿವಮೊಗ್ಗ, ಅಲ್ಲಿಂದ ಬೆಂಗಳೂರು, ಅಲೆಯುಲೇ ಬೇಕಲ್ಲ. ಹೀಗೇ ಒಂದು ಎರಡು ತಿಂಗಳು ಕಳೆದು ಹೋಯಿತು.

"ಕೊನೆಗೆ ಒಂದು ದಿನ ಹೋಗಿ ನೋಡಿದೆ. ಅವರಿಗೆ ವಯಸ್ಸೆಲ್ಲ ಮೂವತ್ತೈದು ನಲವತ್ತು ಇರಬಹುದು. ನೋಡುತ್ತಿದ್ದರೆ ಏನೋ

ಎಷ್ಟೋ ದಿನದಿಂದ ಗುರುತಿದ್ದಾನೆ, ಹಿಂದಿನ ಸೆಂಟರನ್ನ ಕಂಡಾಗೆ ಆಗೋದಾ? ಹಾಗಾಗಿ ಕಣ್ಣುತುಂಬಾ ನೀರು ಬಂತು: ಹೋಗಿ ಅಡ್ಡಬಿದ್ದೆ: 'ನನ್ನ ಉದ್ಧಾರಮಾಡಬೇಕು' ಎಂದು ಕೈಮುಗಿದೆ.

"ಅವರೂ ನಗುನಗುತ್ತ 'ಹೌದು, ಹೌದು ನಿನಗೋಸ್ಕರಲೇ ಬಂದಿದ್ದೀನಿ. ನಿನ್ನ ಸಾಲ ತೀರಿಸಿಯೇ ಮುಂದಕ್ಕೆ ಹೋಗಬೇಕಪ್ಪಾ!' ಎಂದರು. ಅವೊತ್ತಿನಿಂದ ಅವರಿಗೂ ನನಗೂ ಏನೋ ಗಂಟು ಬಿದ್ದು ಹೋಯಿತು.

"ಏನು ಹೇಳಲಿ ಅವರ ವಿಚಿತ್ರ? ವಾರಕ್ಕೆ ಮೂರು ಸಲ ಹಣ್ಣೂ ಹಾಲೂ ತಕೋತಾರೆ. ಗುರುವಾರ ಮಾತ್ರ ಅವರ ಪೂಜೆ. ಆ ಪೂಜೇನೂ ಬಹಳ ವಿಚಿತ್ರ. ಅವರು ಸಾನಾ ಮಾಡಿಕೊಂಡು ಬಂದು ಕೂತುಕೋತಾರೆ. ಮೂಗಿಂದ ಒಂದು ನೇರಳೆ ಹಣ್ಣಿನ ಗಾತ್ರದ ಸಾಲಿಗ್ರಾಮ ತೆಗೆಯುತ್ತಾರೆ. ಅದನ್ನು ಮಂತ್ರ ಹೇಳಿ ಒಂದು ಹಾಲು ತುಂಬಿದ ಬಟ್ಟಲಲ್ಲಿ ಇಡುತ್ತಾರೆ. ಒಂದು ಝಾವದ ಹೊತ್ತು ಮಂತ್ರ ಹೇಳುತಿದ್ದು ಆಮೇಲೆ ಅದನ್ನು ನೀರಿನಲ್ಲಿ ತೊಳೆದು ಮತ್ತೆ ಮೂಗಿನಿಂದ ಸೇದಿಕೊಂಡುಬಿಡುತ್ತಾರೆ. ಆ ಹಾಲು ಕುಡಿಕೋತಾರೆ. ಆ ದೇವರಿಗೆ ನೈವೇದ್ಯಕ್ಕೆ ಎಷ್ಟು ಹಣ್ಣು ಇಟ್ಟಿದ್ದರೆ ಅಷ್ಟು ತಿಂದುಬಿಡುತ್ತಾರೆ."

ಪ್ರಾಣೇಶನು ಕೇಳಿದನು: "ಏನೇನು ಹಣ್ಣು ಇಡುತ್ತೀರಿ?"

"ಅಲ್ಲಿ ನಮಗೆ ಸಿಕ್ಕುವುದು ಇನ್ನೇನು? ಬಾಳೇಹಣ್ಣು, ತೆಂಗಿನ ಕಾಯಿ. ಈಚೆಗೆ ಹಣ್ಣು ಕತ್ತರಿಸಿ, ಕಾಯಿಬೆಲ್ಲ ಯಾಲಕ್ಕಿ ಹಾಕಿ ಪಂಚಾಮೃತಮಾಡಿ ಇಡುತೇವೆ. ಒಂದೊಂದು ದಿನ ಹೊರಗಿನಿಂದ ಸೇಬಿನ ಹಣ್ಣು ದಾಳಿಂಬೆಹಣ್ಣು ತೆಗೆದುಕೊಂಡು ಹೋದರೆ, ಅವು."

"ಎಷ್ಟಾದರೂ ತಿಂದುಬಿಡುತ್ತಾರೆಯೆ?"

"ನಮಗೆ ಒಂದು ದಿನ ಹೇಳಿಬಿಟ್ಟರು; 'ಹೆಚ್ಚಾಗಿ ಇಟ್ಟು ಪರೀಕ್ಷೆ ಮಾಡಬೇಡಿ." ಅಂತ. ಈಗ ನಾವು ಇಟ್ಟುವನ್ನೆಲ್ಲಾ ಎಷ್ಟೋ ಅಷ್ಟು ಇಟ್ಟುಕೊಂಡು ಮಿಕ್ಕದ್ದೆಲ್ಲ ನಮಗೆ ಪ್ರಸಾದವಾಗಿ ಕೊಟ್ಟುಬಿಡುತ್ತಾರೆ."

"ನೈವೇದ್ಯಕ್ಕೆ ಇಟ್ಟ ಹಣ್ಣೆಲ್ಲ ತಿನ್ನುತ್ತಾರೆ, ಅಂದರಲ್ಲ ಮತ್ತೆ? ಅದು ನಿಮಗೆ ಹೇಗೆ ಗೊತ್ತು?"

"ನಮಗೆ ಗೊತ್ತಿಲ್ಲದೇ ಒಂದು ಪರೀಕ್ಷೆ ನಡೆದುಹೋಯಿತು. ಒಂದು ದಿನ ನಾವೆಲ್ಲರೂ ಹೊರಟಿದ್ದೀವಿ. ಯಾರು ಯಾರು? ನಾನು ನಮ್ಮ ಇಬ್ಬರು ಹೆಂಡತಿ, ಇಬ್ಬರು ಆಳುಗಳು, ಬಂಗಲೆಯಿಂದ ಅಷ್ಟು ದೂರ ಬಂದು ನೋಡಿದರೆ ತೆಂಗಿನಕಾಯಿ, ಬೆಲ್ಲ, ಇಟ್ಟಿದ್ದಾರೆ: ಹಣ್ಣಿಲ್ಲ. ಇನ್ನು ಹೋಗಿ ತರಬೇಕು. ಆಗಲೇ ಹೊತ್ತಾಗಿ ಹೋಗದೆ. ಎತ್ತಿನ ಬಂಡಿ. ಏನು ಮಾಡೋದು? ನೋಡಿದೆ. ಪಕ್ಕದಲ್ಲೇ ನಮ್ಮ ಬಾಳೇ ತೋಟ ಇತ್ತು. ಅದರಲ್ಲಿ ಒಂದು ಗೊನೆ ಗಿಡದ ಮೇಲೆ ಹಣ್ಣಾದ್ದು ಇತ್ತು. ಅದನ್ನು ತರಿಸಿಕೊಂಡು ಹೋದೆ. ಅಲ್ಲಿಗೆ ಹೋದರೆ ನನ್ನ ಹೆಂಡಿತಿ ಅದೇನು ತೋರಿತೋ ಏನೋ ಪೂರ್ತಾ ಗೊನೆ ಅವರೆದುರಿಗೇ ಇಟ್ಟುಬಿಟ್ಟಳು. ನಾನೂ ಏನೋ ಮನಸ್ಸಿನಲ್ಲಿದ್ದೆ, ನೋಡಲಿಲ್ಲ. ನಾನು, ಎಂಟು ಚಿಪ್ಪು ಹಣ್ಣು ಇತ್ತು, ಒಂದು ಎರಡು ಮೂರು ಚಿಪ್ಪು ಅವರ ಪೂಜೆಗೆ ಇಡೋದು ಅಂತ ಇದ್ದೆ.

"ಅವರೂ ಅದನ್ನು ಕಂಡು 'ಇದೇನು?' ಎಂದರು. ಆಗ ನಾನೂ ನೋಡಿದೆ. 'ಆಗಲಿ ಬಿಡಿ. ಇನ್ನೊಂದು ದಿನಕ್ಕೆ ಒಂದು ಎರಡು ಚಿಪ್ಪು ತೆಗೆದಿಟ್ಟರೆ ಆಯಿತು.' ಅಂದೆ. ಉಂಟೆ? ಸನ್ಯಾಸಿಗಳು ಯಾವಾಗಲೂ ನಾಳೆ ಚಿಂತೆ ಮಾಡಬಾರದು. ಆಗಲಿ ಇವೊತ್ತೇ ನೈವೇದ್ಯಮಾಡಿ ಬಿಡೋಣ. ಇನ್ನೊಂದು ಸಲ ಹೀಗೆ ಮಾಡಬೇಡಿ. ಐದು ಹಣ್ಣಿಗಿಂತ ಹೆಚ್ಚಾಗಿ ನಮಗೆ ಉಳಿಯದಂತೆ ನೋಡಿಕೊಳ್ಳಿ" ಎಂದರು. ಪೂಜೆ ಯಾಯಿತು. ಗೊನೆಯಲ್ಲಿ ನೂರು ಹಣ್ಣಿಗಿಂತ ಹೆಚ್ಚಾಗಿತ್ತು. ಕಾಯಿ ಹಣ್ಣು ನಾವು ಎಷ್ಟು ತಿಂದೇವು? ನಾವು ಐದು ಜನವೂ ಸೇರಿ ಸುಮಾರು ಐವತ್ತು ಹಣ್ಣಿನಷ್ಟು ತಿಂದೆವು ಅಂದುಕೊಳ್ಳಿ. ಮಿಕ್ಕದ್ದೆಲ್ಲ ಅವರೇ ತಕೊಂಡೇ ಬಿಟ್ಟರು."

"ನಮಗೆ ದಿಗಿಲು ಅಂದರೆ ದಿಗಿಲು. ಹೊಟ್ಟೆಗಿಟ್ಟೆ ಊದಿಕೊಂಡರೆ

ಏನು ಗತಿ? ಈ ಸನ್ಯಾಸೀನ ಕೊಂದ ಪಾಪ ನಮಗೆಲ್ಲಿ ಗಂಟು ಬೀಳು ತದೆಯೋ, ಅಂತ! ಹೊರಟು ಬರುವಾಗ ಒಬ್ಬ ಆಳನ ಬಿಟ್ಟು ಹೋಗಲಾ? ಅಂತ ಕೇಳಿದರೆ, ಯಾಕೆ ಏನಾಗುತ್ತೆಯೋ ಅಂತ ದಿಗಿ ಲೇನೋ? ಏನೂ ಇಲ್ಲ, ಹೋಗಿ ಅಂತ ಧೈರ್ಯ ಹೇಳಿ ಕಳುಹಿಸಿಬಿಟ್ಟರು. ತಿರುಗಿ ಸೋಮವಾರದ ದಿನ ಹೋಗಿ ಅವರನ್ನು ನೋಡುವ ವರೆಗೂ ನಮಗೆ ಪ್ರಾಣದಲ್ಲಿ ಪ್ರಾಣವಿರಲಿಲ್ಲ!"

ರಮೇಶನು ತಲೆ ಅಲ್ಲಾಡಿಸಿ ಸಣ್ಣಗೆ ನಗುತ್ತ "ಒಳ್ಳೆಯ ಭೀಮಸೇನ ಸನ್ಯಾಸಿ ಇರಬೇಕು. ಆಳು ಮಜಬೂತಾಗಿದ್ದಾರೋ?" ಎಂದು ಕೇಳಿ ದನು.

"ಇಲ್ಲ. ಈ ರಾಯರಂಗೆ ಕೂಡಾ ಇಲ್ಲ, ಇನ್ನೂ ಪೀಚು. ಸುಮಾರು ಐದೂವರೆ ಅಡಿ ಇರಬಹುದು. ಕೈಕಾಲು ಕಡ್ಡಿ ಅಲ್ಲ; ಹಾಗಂತ ಒಳ್ಳೆ ದುಂಡುಮೈಯ್ಯಿನ ವಸ್ತಾದಿಯೂ ಅಲ್ಲ. ಸಾಧಾರಣ ವಾಗಿದ್ದಾರೆ. ಸುಮಾರು ನೂರಿಪ್ಪತ್ತು ಪೌಂಡು ಇರಬಹುದು."

"ಸರಿ, ಇವೊತ್ತು ಮಂಗಳವಾರ. ನಾಳೆ ನಾವು ಹೊರಡುತ್ತೇವೆ. ಅವರ ದರ್ಶನ ಯಾವೊತ್ತು ಆಗೋದು?"

"ಗುರುವಾರ."

"ಈ ಶನಿವಾರಕ್ಕೆ ಏನು ಹಣ್ಣು ಎಷ್ಟು ತೆಗೆದುಕೊಂಡು ಹೋಗೋಣ?"

"ನಾನೆಲ್ಲ ತರಿಸುತ್ತೇನೆ, ತಮಗೇಕೆ ಕಷ್ಟ?"

"ಹಾಗಲ್ಲ. ನಾವು ದರ್ಶನಕ್ಕೆ ಬಂದಮೇಲೆ ನಾವೂ ತರೋಣ. ತಂದರೆ ತಪ್ಪಿಲ್ಲವಲ್ಲ. ಪ್ರಾಣೇಶ್ ಒಂದು ಬುಟ್ಟಿ ಸೇಬು, ಒಂದು ಬುಟ್ಟಿ ಮುಸುಂಬಿ, ಒಂದು ಬುಟ್ಟಿ ದ್ರಾಕ್ಷಿ ತೆಗೆದುಕೊಂಡು ಹೋಗೋಣ. ಎಲ್ಲಾ ನಮಗೇ ಆಗುತ್ತೆ. ಸ್ವಾಮಿಗಳಿಗೆ ಅಂತ ತೆಗೆದುಕೊಂಡು ಹೋದರೂ ನಿಜವಾಗಿಯೂ ನಮಗೇ ತಾನೇ."

"ಸಾಧ್ಯವಾದರೆ ನಿಮ್ಮ ಕುಟುಂಬ, ಮಗು, ನಿಮ್ಮ ತಂದೆಯವರು ಎಲ್ಲರೂ ಬನ್ನಿ. ನಮ್ಮ ರಾಯರು ನಮ್ಮ ಕಾರಲ್ಲಿ ಬರುತಾರೆ. ಅವರೂ ಎಲ್ಲರನ್ನೂ ಕರೆದುಕೊಂಡು ಬರುವುದಾದರೆ, ಅವರ ಕಾರೂ ಬರಲಿ."

"ಇಲ್ಲ, ನಮ್ಮ ಕಾರು ಚಿಕ್ಕದು. ನಾನೊಬ್ಬನೇ ಬರುತ್ತೇನೆ. ನಿಮ್ಮ ಕಾರ್‌ಗೆ ಇನ್ನು ಯಾರೂ ಇಲ್ಲವಲ್ಲ?"

"ಯಾರೂ ಇಲ್ಲ. ನಾನೂ ತಾವೂ."

"ನಮ್ಮ ತಂದೆ ಬರೋಲ್ಲ. ಇನ್ನು ಹೆಂಡತಿ, ಮಗು, ಆಗಲಿ. ಬರುತ್ತಾರೆ. ನಮ್ಮ ಕಾರು ಯಾಕೆ? ನಿಮ್ಮ ಕಾರಿನಲ್ಲಿ ಜಾಗ ಇಲ್ಲವೆ?"

"ಹಾಗಲ್ಲ ದೇವರು. ಫ್ಯಾಮಿಲಿ ಹೊರಟಾಗ ಕಾರು ಇರಬೇಕು. ಏನು ರಾಯರೇ!"

"ಸರ್ಟೇನಲಿ."

"ಆಗಲಿ. ನಾಳೆ ಊಟ ಮಾಡಿಕೊಂಡು ಹತ್ತು ಗಂಟೆಗೆ ಹೊರಡೋಣ."

"ಸರಿ. ನಾವೂ ಮೂರು ನಾಕು ಗಂಟೆ ವೇಳೆಗೆ ತೋಟಕ್ಕೆ ಹೋಗಬಹುದು."

"ಗೌಡರೆ, ನಮ್ಮ ಹುಡುಗ ಮಲ್ಲೇಶನನ್ನೂ ಕರೆದುಕೊಂಡು ಹೋಗೋಣ."

"ಅಗತ್ಯವಾಗಿ. ದೆವ್ವನಂತಹ ಕಾರು. ಬೇಕಾದರೆ ಇನ್ನೂ ಎಂಟು ಜನ ಕರೆದುಕೊಂಡು ಬನ್ನಿ."

# ೩

ಪಿಳ್ಳೇಗೌಡರು ಹೆಸರುವಾಸಿಯಾದ ಕಾಫಿ ಪ್ಲಾಂಟರು. ಅವರ ತೋಟ ಬಾಬಾಬುಡನ್‌ಗಿರಿಗಳಲ್ಲೆಲ್ಲಾ ಬಹಳ ದೊಡ್ಡದು. ಯೂರೋಪಿಯರ್ನ ಪ್ಲಾಂಟರ್‌ಗಳು ಕೂಡ ಅವರಿಗೆ ಗೌರವ ಕೊಡುವರು. ಅವರ ದೇಹ ದೊಡ್ಡದು, ಗಂಟಲು ದೊಡ್ಡದು, ಹೊಟ್ಟೆ ದೊಡ್ಡದು, ಮನಸ್ಸು ದೊಡ್ಡದು; ಎಲ್ಲದಕ್ಕಿಂತ ಕೋಪ ಬಲು ದೊಡ್ಡದು. ಆಳುಗಳಲ್ಲಿ ಯಾರಾದರೂ ಹಿಂತಿರುಗಿ ಮಾತನಾಡಿದನೋ ಅವನಿಗೆ ಅಲ್ಲೇ ಮಾರಣಹೋಮವಾಗಿ ಹೋಗುವುದು. ಯಾವನಾದರೂ ಚೆನ್ನಾಗಿ ಕೆಲಸ ಮಾಡಿದ್ದರೆ, ಅವನಿಗೂ ಆಗಲೇ ಪ್ರತಿಫಲ; ಒಂದು ಕಂಬಳಿ, ಒಂದು ಧೋತ್ರ, ಒಂದು ಜುಬ್ಬಾ, ಕೊನೆಗೆ ನಾಲ್ಕಾಣೆ. ಗೌಡರು ಯಾವೊತ್ತೂ ನಾಲ್ಕಾಣೆಗೆ ಕಮ್ಮಿ ಕೊಟ್ಟವರೇ ಅಲ್ಲ. ಅವರ ಸಮೀಪದಲ್ಲಿದ್ದವರು ಅವರು ತಾಮ್ರದ ನಾಣ್ಯ ಮುಟ್ಟಿದವರೇ ಅಲ್ಲ ಎನ್ನುವರು.

ತೋಟದಿಂದ ಹೊರಗೆ ಬಂದಾಗ ಗೌಡರು ಏನೋ ಸಾಮಾನ್ಯರಂತೆ ಮಾತನಾಡುವರು; ಹತ್ತು ಜನರೊಡನೆ ಸ್ನೇಹವಾಗಿರುವರು. ಅವರು ತೋಟದ ಎಲ್ಲೆ ತುಳಿದು ಒಳಗೆ ಹೋಗುತ್ತಿದ್ದ ಹಾಗೇ ಈದ ಹುಲಿಯಾಗುವರು. "ಕಾಫಿ ಗಿಡಗಳು ಅವರೊಡನೆ ಮಾತನಾಡುತ್ತವೆ: ಇಲ್ಲದಿದ್ದರೆ ಗೌಡರ ಕಣ್ಣಿಗೆ ಎಲ್ಲೋ ಇರುವ ಒಣಕಲು ಕಡ್ಡಿ ಬೀಳುವುದು? ಎಂದರೇನು?" ಎಂದು ಆಳುಗಳೆಲ್ಲ ಮಾತನಾಡಿಕೊಳ್ಳುವರು. ಅತ್ತ ಘಟ್ಟದ ಕೆಳಗಿನಿಂದ ಬಂದ ಮಲೆಯಾಳದವರು "ಗೌಡರಿಗೆ ಭೂತಗಳು ವಶವಾಗಿವೆ. ಅದರಿಂದಲೇ ಅವರದು ಒಂದು ಹುಲ್ಲು ಕಡ್ಡಿ ಕೂಡ ಹೋಗುವುದಿಲ್ಲ. ಹುಲಿ ಕೂಡ ಅವರ ಕುರಿ ಮೇಕೆ ಕೊನೆಗೆ ಕೋಳಿ ಕೂಡ ಮುಟ್ಟೋದಿಲ್ಲ." ಎನ್ನುವರು. ಯೂರೋಪಿಯರ್ನರು, "ಸೂಪರ್ಬ್ ಮ್ಯಾನೇಜ್‌ಮೆಂಟ್" ಅನ್ನುವರು. ಗೌಡರನ್ನೇ ಕೇಳಿದರೆ, "ನಾನು ಹುಡುಗನಾಗಿದ್ದಾಗ ನಮ್ಮ ಯಜಮಾನರು ಈಲಿಯಟ್

ಸಾಹೇಬರ ಹತ್ತಿರ ನನ್ನ ಮೂರು ವರ್ಷ ಬಿಟ್ಟಿದ್ದರು. ಅವರಿಂದ ಕಲಿತೆ ಈ ಶಿಸ್ತನ್ನೆಲ್ಲ" ಎನ್ನುವರು. ಈಗಲೂ ಅಷ್ಟೆ! ಈಲಿಯಟ್ ಸಾಹೇಬರು ಸ್ವರ್ಗಕ್ಕೆ ನಡೆದು ಮೂವತ್ತು ವರ್ಷ ಆದಮೇಲೂ ಯಾರಾದರೂ ಬಂದು "ನಾನು ಈಲಿಯಟ್ ಸಾಹೇಬರ ಹತ್ತಿರ ಕೆಲಸ ಮಾಡಿದ್ದೆ" ಎಂದರೆ ಸಾಕು; ಅವನಿಗೆ ತಪ್ಪದೆ ಕೆಲಸ ಸಿಕ್ಕುವುದು.

ಗೌಡರ ಮನೆ ಒಳ್ಳೆಯ ಮಜಬೂತಾದ ಭಾರಿಯ ಮನೆ. ಹೋಗುತ್ತಲೂ ನಾಲ್ಕು ಮೆಟ್ಟಲು ಹತ್ತಿ ನಡುವಿನ ಮಟ್ಟದ ಜಗತಿ ಹತ್ತಬೇಕು. ಅದರ ಮೇಲೆ ಭಾರಿಯ ಏಳು ಅಂಕಣದ ಮನೆ. ಬಾಗಿಲಲ್ಲಿ ಎರಡು ದಪ್ಪ ಮರದ ಕಂಭಗಳು. ಅತ್ತ ಕಡೆ ಇತ್ತ ಕಡೆ ಎರಡೆರಡು ಅಂಕಣದ ಎರಡು ಚಿಕ್ಕ ಮನೆಗಳು. ಬೆಂಗಳೂರಿನಲ್ಲಿ ಇದ್ದಿದ್ದರೆ ಆ ಚಿಕ್ಕ ಮನೆಗಳಲ್ಲಿ ಒಂದೊಂದು ಸಂಸಾರ ಇದ್ದುಬಿಡುತ್ತಿದ್ದರು.

ಒಳಗೆ ಹೋದರೆ ನಡುವೆ ಅಲ್ಲೊಂದು ಚಿಕ್ಕಮನೆ. ಅಲ್ಲಿಯೇ ಗೌಡರ ಕಚೇರಿ. ಅಲ್ಲಿಂದ ಮೇಲಕ್ಕೆ ಹೋಗುವುದಕ್ಕೆ ಮೆಟ್ಟಲು. ಆ ನಡುವೆ ಕಳೆದು ಒಳಕ್ಕೆ ಹೋದರೆ ಅಲ್ಲಿ ಒಂದು ಹದಿನಾರು ಕಂಭದ ತೊಟ್ಟಿ. ತೊಟ್ಟಿ ಆಚೆ ಅಡುಗೆ ಮನೆ ಊಟದ ಮನೆ, ಬಚ್ಚಲು ಮನೆ. ಅಲ್ಲಿಂದ ಆಚೆ ಇನ್ನೊಂದು ತೊಟ್ಟಿ. ಅಲ್ಲೆ ಮಲಗುವ ಮನೆಗಳು. ಮೊದಲನೆಯ ನಡುವೆ ಕಳೆದುಹೋಗಬೇಕಾದರೆ ಅವರು ನೆಂಟರಾಗಬೇಕು. ಗೌಡರು ಕರೆತಂದ ಅತಿಥಿಗಳಾದರೆ, ಅವರು ಮೆಟ್ಟಲು ಹತ್ತಿ ಮಹಡಿಯ ಮೇಲಕ್ಕೆ ಹೋಗುವರು. ಆ ಮಹಡಿಯ ಮೇಲೆ ಎರಡು ಚಿಕ್ಕ ಮನೆಗಳು: ಒಂದು ನಡುಮನೆ. ಅಡುಗೆ ಮನೆ. ಬಚ್ಚಲು ಮನೆ—ಎಲ್ಲಾ ಇದ್ದು ಏಳೆಂಟು ಜನದ ಒಂದು ಸಂಸಾರವಿರುವಮಟ್ಟಿಗೆ ವಿಶಾಲವಾಗಿರುವುದು.

ಗೌಡರಿಗೆ ಇಬ್ಬರು ಹೆಂಡತಿಯರು. ಒಬ್ಬಳು ತಂದೆ ಮಾಡಿದವಳು. ಇನ್ನೊಬ್ಬಳು ತಾನು ಮಾಡಿಕೊಂಡವಳು. ಆದರೂ ಮನೆಯಲ್ಲಿ

ಗದ್ದಲವಿಲ್ಲ. ಇಬ್ಬರೂ ಎಡಗೈ ಬಲಗೈಗಳಂತೆ ಜೋಡಿಯಾಗಿ ಜೊತೆಯಲ್ಲಿ ಬಾಳುವರು. ಅವರಿಗೆ ಇದ್ದುದು ಒಂದೇ ಒಂದು ವ್ಯಥೆ. ಮಕ್ಕಳಿಲ್ಲ. ಆ ವ್ಯಥೆ ಬಹಳ ಆತ್ಮೀಯರಾದವರಿಗೆ ಮಾತ್ರ ಗೊತ್ತು. ಯಾರಾದರೂ ದುಡುಕಿ ಕೇಳಿದರೆ, "ನಮ್ಮ ಹಾಸ್ಟಲಿನಲ್ಲಿ ಇರೋರೆಲ್ಲ ಇನ್ನು ಯಾರ ಮಕ್ಕಳು ?" ಎನ್ನುವರು.

ಗೌಡರು ತೋಟಕ್ಕೆ ಬಂದರು. ಗೌಡರ ಕಾರಲ್ಲಿ ಪ್ರಾಣೇಶ್, ಅವನ ಹನ್ನೆರಡು ವರ್ಷದ ಮಗ. ಇನ್ನೊಂದು ಕಾರಿನಲ್ಲಿ ರಮೇಶ್, ಅವನ ಹೆಂಡತಿ, ಮಗಳು.

ಅತಿಥಿಗಳಿಗೆ ಯಾವ ಉಪಚಾರವೂ ಕಡಿಮೆಯಾಗಲಿಲ್ಲ. ಸುಮಾರು ಎಂಟು ಗಂಟೆ ಹೊತ್ತಿಗೆ ಬಿಸಿಬಿಸಿ ಊಟವಾಗಿದೆ. ನಿಂಬೆಹುಳಿಯನ್ನ, ಬೋಂಡ, ಶ್ಯಾಮಿಗೆ ಪಾಯಸ. ಊಟವಾದ ಮೇಲೆ ಕಿರುತಿಂಡಿ ಎಂದು ಒಂದಷ್ಟು ಓಂಪುಡಿ, ಹುರಿಗಾಳು, ಭರ್ಜರಿ ಅಡಕೆಲೆ.

ಹೊರಗೆ ಇದಿಷ್ಟೂ ಆದಮೇಲೆ ಮಲಗುವ ಮನೆಗೆ ಹೋದರೆ ಅಲ್ಲಿ ಮಂಚದ ಮಗ್ಗುಲಲ್ಲಿ ಒಂದು ಶೀಷೆ, ಮಗ್ಗುಲಲ್ಲಿ ಒಂದು ಬಟ್ಟಲು. ಏಳು ಸಾವಿರ ಮೈಲಿಗಳ ಆಚೆಯಿಂದ ಬಂದಿರುವ ಮದಿರಾದೇವಿಯು ರಾಯರನ್ನು ಸೇವಿಸುವುದಕ್ಕೆ ಕಾದಿದ್ದಾಳೆ.

ಪ್ರಾಣೇಶನು ತನ್ನ ಕಿರುಮನೆಗೆ ಬಂದನು. ಅಲ್ಲಿ ಅವನಿಗೊಂದು ಮಂಚ. ಆ ಗೋಡೆಯ ಮಗ್ಗುಲಲ್ಲಿ ಅದು, ಈ ಗೋಡೆಯ ಮಗ್ಗುಲಲ್ಲಿ ಇದು. ನಡುವೆ ಒಂದು ದಪ್ಪ ತೆರೆ. ಮಗನನ್ನು ಆ ಮಂಚಕ್ಕೆ ಕಳುಹಿಸಿ, ತಾನು ಮಲಗುವುದರಲ್ಲಿದ್ದಾನೆ. ಆತನಿಗೆ ಆಶ್ಚರ್ಯ. 'ಮಗನಿಗೆ ಸಿಂಗಲ್ ಕಾಟ್ ಹಾಕಿ, ತನಗೆ ಡಬ್ಬಲ್ ಕಾಟ್ ಹಾಕಿರುವುದೇತಕ್ಕೆ' ಎಂದು ಯೋಚನೆ ಬಂತು. 'ತಾನಿರುವುದು ಅತಿಥಿ ಗೃಹದಲ್ಲಿ. ಅತಿಥಿಗಳು ತಮಗೆ ಲಭಿಸಿದ ಉಪಚಾರದಿಂದ ತೃಪ್ತರಾಗಬೇಕು. ಧರ್ಮಕ್ಕೆ ಎಮ್ಮೆ ಕೊಟ್ಟರೆ ಹಿಡಿದು ಹಲ್ಲು ನೋಡುವುದು ಯಾವ ನ್ಯಾಯ?' ಎಂದುಕೊಂಡು ಮಲಗಿಕೊಳ್ಳುವುದಕ್ಕೆ ಸಿದ್ಧವಾಗುತ್ತಿದ್ದಾನೆ. ಮಗನು ಮಲಗಿದ್ದಾನೆ. ಅವನಿಗೆ ನಿದ್ದೆ ಬಂದಿದೆ.

ಆಳು ಬಂದು ಬಾಗಿಲು ಸದ್ದು ಮಾಡಿದನು. ಹೋಗಿ ಬಾಗಿಲು ತೆಗೆದನು. ಅವನು ಬಾಗಿಲಿಗೆ ಬಂದು 'ರವಿಕೆ ಕಣ ತೆಗೆದುಕೊಳ್ಳುವಿರಾ?' ಎಂದು ಕೇಳುವ ವ್ಯಾಪಾರಿಯಂತೆ, 'ತಮ್ಮ ಸೇವೆಗೆ ಇವರು ಬಂದಿದ್ದಾರೆ. ದೂರದಿಂದ ಬಂದು ಆಯಾಸವಾಗಿದೆ. ಮಾಸೇಜ್ ಮಾಡುತ್ತಾರೆ. ದಯವಿಟ್ಟು ಸೇವೆ ತಕ್ಕೋಬೇಕು' ಎಂದು ಹೇಳಿ, ಕೈ ಮುಗಿದು ಹೊರಟೇಹೋದನು. ಪ್ರಾಣೇಶನಿಗೂ ಖುಷಿಯಾಯಿತು. ಬಾಗಿಲಲ್ಲಿ ನಿಂತಿದ್ದವನು ಅತ್ತ ಸರಿದು ಬಂದವರನ್ನು ಒಳಕ್ಕೆ ಬರುವ ಹಾಗೆ ಸನ್ನೆ ಮಾಡಿ ತಾನೂ ಬಾಗಿಲು ಹಾಕಿಕೊಂಡು ಒಳಕ್ಕೆ ಬಂದನು.

* * * * *

ಈ ದಿನ ಗುರುವಾರ. ಸನ್ಯಾಸಿಗಳ ದರ್ಶನಕ್ಕೆ ಹೋಗಬೇಕು ಎಂದು ಮೊದಲೇ ಗೊತ್ತಾಗಿತ್ತು. ಅದಕ್ಕೆ ತಕ್ಕಂತೆ ಸಡಗರ. ಗೌಡರ ಮನೆಯವರೆಲ್ಲ ಬೆಳಗಿನ ಝಾಮದಲ್ಲೇ ಎದ್ದು ಮಡಿಯಾಗಿ ಸೂರ್ಯೋದಯದ ವೇಳೆಗೆ ಸಿದ್ಧರಾಗಿದ್ದಾರೆ. ಲಾಯರಿಗಳು ಎದ್ದಿದ್ದಾರೆಯೋ ಇಲ್ಲವೋ ಎಂದು ಸಂದೇಹ. ಅವರ ಅತಿಥಿ ಗೃಹದ ಆಳನ್ನು ಕರೆದು ಕೇಳಿದರು. 'ಒಬ್ಬರು—ಮಗಳು ಹೆಂಡತಿಯರೊಡನೆ ಬಂದಿರುವವರು ಎದ್ದು ಸ್ನಾನ ಮಾಡಿ ಕಾಫಿ ತೆಗೆದುಕೊಂಡರು. ಮಗನ ಜೊತೆಯಲ್ಲಿ ಬಂದಿರುವವರು ಇನ್ನೂ ಎದ್ದಿಲ್ಲ' ಎಂದು ಉತ್ತರ ಬಂತು. 'ಹೋಗಿ ರಮೇಶರಾಯರಿಗೆ ಹೇಳಿ ಇನ್ನೊಬ್ಬರನ್ನು ಏಳಿಸುವ ಹಾಗೆ ಹೇಳು, ಹೊತ್ತಾಗುತ್ತ ಬಂತು' ಎಂದು ಹುಕುಂ ಆಯಿತು.

ಪ್ರಾಣೇಶನು ಎದ್ದನು. ಏನೋ ಮೈಯಲ್ಲಿದ್ದ ಶಕ್ತಿಯನ್ನೆಲ್ಲ ಯಾರೋ ಕಿತ್ತುಕೊಂಡು ಹೋದ ಹಾಗಾಗಿದೆ. ಎದ್ದರೆ ತೂರಿಕೊಂಡು ಹೋಗುವ ಹಾಗಿದೆ. ಮೈಯೆಲ್ಲ ನೋವು ನೋವು. ಎದ್ದು ರಾತ್ರಿಯ ವಿಷಯವನ್ನೆಲ್ಲ ನೆನೆಸಿಕೊಳ್ಳುತ್ತ ಹಾಸುಗೆಯ ಮೇಲೆ ಒಂದು ಗಳಿಗೆ ಬಿದ್ದಿದ್ದು, ಕೊನೆಗೆ ಎದ್ದು ಬಂದು ಕುರ್ಚಿಯ ಮೇಲೆ ಕುಳಿತಿದ್ದಾನೆ.

ನೋಡಿದರೆ ಆಶ್ಚರ್ಯವಾಯಿತು. ಸಣ್ಣ ಮೇಜಿನ ಮೇಲಿದ್ದ ಪದಾರ್ಥ ಗಳೆಲ್ಲ ಹಾಗೆ ಹಾಗೇ ಇವೆ. "ಹಾಗಾದರೆ ನಾವು ರಾತ್ರಿ ಕುಡಿದದ್ದು ಏನು? ಕುಡಿದದ್ದು ಉಂಟು, ಇಲ್ಲವೆನ್ನುವ ಹಾಗಿಲ್ಲ. ಅಥವಾ ಬೆಳ ಗಾಗುವುದರೊಳಗಾಗಿ ಆಳು ಬಂದು ಬೇರೆ ಇಟ್ಟು ಹೋಗಿರಬಹುದೊ?" ಏಕೋ ಏನೋ ಅನುಮಾನ ಬಂತು.

ಲಾಯರ್ ಬುದ್ಧಿ. ಹೋಗಿ ದಿಂಬನ್ನು ಮೂಸಿ ನೋಡಿದನು. ಯಾವ ಹೂವಿನ ವಾಸನೆಯೂ ಇಲ್ಲ. ಈಗ ಈ ಅಸಹಜ ಸ್ಥಿತಿಯನ್ನು ಕಂಡು ಆಶ್ಚರ್ಯಭಾವವು ಬಲಿಯಿತು. ರಾತ್ರಿ ಆ ಜಾಜಿಯ ಹೂವು, ತಾಳೆಯ ಹೂವುಗಳ ವಾಸನೆ ಮೂಗಿನ ಸೆಲೆ ಒಡೆಯುವಷ್ಟು ಇದ್ದುದು ಈಗ ದಿಂಬಿನ ಬಟ್ಟೆಗೆ ಅಷ್ಟಾದರೂ ವಾಸನೆ ಕೊಡದೆ ಮಾಯವಾಗುವು ದೆಂತು? ರಾತ್ರಿಯ ವಿಷಯಾನುಭವದ ಗುರುತು ಹಾಸುಗೆಯಲ್ಲಿ ಕಾಣ ಬೇಡವೆ? ಹಾಸುಗೆಯು ಹಾಸಿದ್ದಂತೇ ಇದೆ. ಕೆದರಿಲ್ಲ, ರಗ್ಗಿಗೆ ಜೋಡಿ ಸಿರುವ ದುಪ್ಪಟಿ ಕೂಡ ಇಸ್ತ್ರಿ ಗುರುತು ಅಳಿದಿಲ್ಲ. ರಾಯರಿಗೆ ಕಕ್ಕು ಬಿಕ್ಕಾಯಿತು. ನಡೆದ ಭೋಗಕ್ಕೆ ಕಾಣಿಕೆ ಕೊಟ್ಟು ಸುಸ್ತು ಬಿದ್ದಿರುವ ದೇಹದ ಸಾಕ್ಷ್ಯವನ್ನು ನಿರಾಕರಿಸುವುದೆಂತು? ಹಾಸುಗೆಯಲ್ಲಿ ಏನೇನೂ ಗುರುತಿಲ್ಲದಂತೆ ಮಾಡಿ ಮಾಯವಾಗಿರುವ ಮೋಹಿನಿಯು ಬಂದಿದ್ದ ಳೆಂದು ನಂಬುವುದೆಂತು? ಏನೋ ಆಶ್ಚರ್ಯ! ಏನೋ ರಹಸ್ಯ! ಏನೋ ಅದ್ಭುತ! ಇದೆ ಎಂದು ಯೋಚಿಸುವುದರಲ್ಲಿ ಕೈಯಲ್ಲಿ ಹಚ್ಚಿಟ್ಟುಕೊಂಡಿದ್ದ ಸಿಗರೇಟು ಕಳಲಿಹೋಗಿ ಕೈಗೆ ಬಿಸಿ ಹತ್ತಿತು. ಅದನ್ನು ಆ ಪೀಕದಾನಿ ಯಲ್ಲಿ ಹಾಕುವುದಕ್ಕೆ ತಿರುಗಿದನು. ಕನ್ನಡಿಯಲ್ಲಿ ಮುಖ ಕಾಣಿಸಿತು. ಅವನಿಗೇ ಗಾಬರಿಯಾಯಿತು. ಮುಖವೆಲ್ಲ ಮಗ್ಗುಲ ಹಾಸುಗೆಯ ದುಪ್ಪಟಿಗಿಂತ ಬೆಳ್ಳಗಾಗಿ ಹೋಗಿದೆ. ಕಣ್ಣುಗಳು ಗುಳಿಬಿದ್ದು ಕಾಡಿ ಗೆಯ ಕಪ್ಪು ಬಳಿದಂತೆ ಇವೆ. ಮುಖ ನೀರಸವಾಗಿ, ರಸ ಹೀರಿ ಎಸೆದ ಅನಾನಸ್ ತೊಳೆಯಂತಾಗಿದೆ.

ಆ ವೇಳೆಗೆ ಸರಿಯಾಗಿ ಸ್ನಾನ ಮಾಡಿ ವಿಭೂತಿ ಧರಿಸಿಕೊಂಡು ಗರಿಗರಿಯಾಗಿ ಮಡಿ ಬಟ್ಟೆಗಳನ್ನು ಉಟ್ಟುತೊಟ್ಟಿರುವ ಗೌಡರೇ ಬಂದರು.

ಅವರಿಗೆ ಪ್ರಾಣೇಶನ ಸ್ಥಿತಿಯನ್ನು ಕಂಡು ಗಾಬರಿಯಾಯಿತು. ಅನುಮಾನವಾಯಿತು. "ಏನು ರಾಯರೇ! ರಾತ್ರಿ ನಿದ್ದೆ ಚೆನ್ನಾಗಿ ಬಂತೆ? ಪ್ರಯಾಣದ ಆಯಾಸ ಕಳೆಯಿತೇ?" ಎಂದು ಕೇಳಿದರು.

ಪ್ರಾಣೇಶನು ಆ ಪ್ರಶ್ನವನ್ನು ಕೇಳಿ ಒಂದೂವರೆ ಕಣ್ಣಲ್ಲಿ ಕಿಟಕಿ ಕಡೆ ನೋಡುತ್ತ "ಮಾಸೇಜ್ ಕೊಂಚ ಬಲವಾಯಿತು ಎನ್ನುವ ಹಾಗಿದೆ. ಆದರೆ ಆಗೇನೋ ಹಿತವಾಗಿತ್ತು" ಎಂದನು.



ಗೌಡರಿಗೆ ಅರ್ಥವಾಗಲಿಲ್ಲ. "ಹಾಗೆಂದರೆ?"

"ಹಾಗೆಂದರೆ ರಾತ್ರಿ ಬಂದಿದ್ದವರು ನಿಮಗೆ ತಿಳಿಯದೆ ಬಂದಿದ್ದರೆ?"

"ಯಾರು ಬಂದಿದ್ದರು?"

"ನಿಮ್ಮ ಆಳೇ ಕರೆದುಕೊಂಡು ಬಂದದ್ದು."

ಗೌಡರಿಗೆ ಮನಸ್ಸಿನಲ್ಲಿ ಕಚಕ್ ಎಂದಿತು. ಎದೆಯಲ್ಲಿ ಗಡಗಡ ನಡುಗಿತು. "ಹಾಗಾದರೆ ಇವನಿಗೂ ಏಟು ಬಿತ್ತೋ?" ಎನಿಸಿ ಗಾಬರಿಯಾಯಿತು. ಆದರೂ ಮೌನದಿಂದ ಕಿರುಮನೆಯೊಳಕ್ಕೆ ಬರದೆಯೇ ಹಾಸುಗೆಯ ಕಡೆ ನೋಡಿದರು. ವಿಕಾರವಿಲ್ಲದ ಹಾಸುಗೆಯು ಅವರಿಗೇನು ಹೇಳಿತೊ? ಅವರ ಮುಖವೂ ಕೊಂಚ ಕಾಂತಿಹೀನವಾಯಿತು. "ಏಳಿ ಇರಲಿ, ಒಂದಷ್ಟು ತಕೊಂಡು ಮಡಿಗಿಡಿ ಉಟ್ಟುಕೊಳ್ಳಿ. ಆ ವಿಚಾರವೆಲ್ಲ ಆಮೇಲೆ ಮಾತನಾಡೋಣ. ನೀರು ಕಾದದೆ" ಎಂದು ಆಳನ್ನು ಕೂಗಿದರು. "ನಿಂಗ, ರಾಯರಿಗೆ ಎಣ್ಣೆ ಮಜ್ಜನ ಮಾಡಿಸು. ಬೇಗ ಏಳು, ಏಳು ಗಂಟೆಯಾಗುತ್ತಾ ಬಂತು. ನಾವು ಎಂಟು ಗಂಟೆಯೊಳಗಾಗಿ ಗವಿ ತಾವಿರಬೇಕು" ಎಂದು ಅಪ್ಪಣೆಯಾಯಿತು.

ಪ್ರಾಣೇಶನು ಹೊರಟುಹೋಗುತ್ತಿದ್ದ ಗೌಡರನ್ನು ಕೂಗಿ "ಇವೊತ್ತು ನನಗೆ ಮೈಕೈ ನೋವು ಬಹಳ. ನಾನು ಮಲಗಿಕೊಳ್ಳುತ್ತೇನೆ. ನೀವು ಸ್ವಾಮಿಗಳನ್ನು ನೋಡಿಕೊಂಡು ಬನ್ನಿ. ನನಗೆ ಕುಳಿತುಕೊಳ್ಳುವುದಕ್ಕೂ ಕೈಯಲಾಗದು." ಎಂದನು.

ಗೌಡರ ಅನುಮಾನ ಬಲಿತು ಖಾತರಿಯಾಯಿತು. "ಸರಿ. ಏಟು

ತಿಂದ ಅಯ್ಯಾ!" ಎಂದು ಗುಂಡಿಗೆ ಕವಲಿತು. ಆದರೂ ಬಿಂಕ ಬಿಡದೆ, "ಏನಿಲ್ಲ ಮೀಣಮಾಡಿ, ನಿಂಗನ ಕೈಯ ನೀರು ಬಿದ್ದರೆ ಎಲ್ಲಾ ಸರಿ ಹೋಗುತದೆ. ಅವ ಅದನ್ನು ಬಲ್ಲ. ಅಷ್ಟು ದೂರದಿಂದ ಬಂದಿರೋದೇ ಅಲ್ಲಿಗೆ ಹೋಗೋಕೆ!" ಎಂದು ಪ್ರತ್ಯುತ್ತರ ನಿರೀಕ್ಷೆ ಮಾಡದೆ ಮುಂದೆ ಹೋದರು. ನಿಂಗನನ್ನು ಬರಹೇಳಿ "ಅವರಿಗೆ ಎರೆಯೋ ನೀರಲ್ಲಿ ಒಂದು ಹಿಡಿ ತಪಸಿ ಸೊಪ್ಪು ಹಾಕು." ಎಂದರು. ನಿಂಗನ ಕಣ್ಣು ಏನೋ ಕೇಳಿತು. ಗೌಡರು ತಲೆ ಅಲ್ಲಾಡಿಸಿ ಹೌದು ಎಂದು ಮುಂದೆ ಹೋದರು.

ಗೌಡರು ಯೋಚಿಸಿದರು. "ಪ್ರಾಣೇಶನ ಕೇಸು ರಂಪವಾಗದ ಹಾಗೆ ನೋಡಿಕೋಬೇಕು. ಬಿಟ್ಟರೆ ಮನುಷ್ಯ ಕೆಟ್ಟುಹೋಗುತಾನೆ. ಇವೊತ್ತೇ ತೋಡು ಮಾಡಿಸದಿದ್ದರೆ ಉಳಿಯುವುದೂ ಕಷ್ಟವಾದೀತು." ಎಂದು ದೀರ್ಘವಾಗಿ ಯೋಚಿಸಿ, "ಸ್ವಾಮಿಗಳ ಬಳಿ ಹೇಳಲೇಬೇಕು. ಒಂದು ವೇಳೆ ನಾವು ಹೇಳದಿದ್ದರೆತಾನೇ ಏನು? ಅವರಿಗೇ ತಿಳಿಯು ತ್ತಲ್ಲಾ! ಅಂತೂ ಗಂಡಾಂತರ ಬಂದೇಬಂತು." ಎಂದು ಏನೇನೋ ಲೆಕ್ಕ ಹಾಕಿ ಹೆಂಗಸರನ್ನೆಲ್ಲ ಹೊತ್ತಿಗೆ ಸರಿಯಾಗಿ ಹೊರಡಿಸಿಬಿಟ್ಟರು. "ನೀವು ಮೊದಲು ಹೋಗಿ. ನಾವೂ ಬಂದೋ ಅನ್ನಿ" ಎಂದರು. ಕಾರು ಹೊರಟಿತು. ಗೌಡರು ತಡೆದು ದೊಡ್ಡ ಹೆಂಡಿತಿಯನ್ನು ಕರೆದು ಗುಟ್ಟಾಗಿ ಏನೋ ಹೇಳಿ ಕಳುಹಿಸಿದರು.

ಗೌಡರು ತಮ್ಮ ಅಂತರಂಗವನ್ನು ರಮೇಶನಿಗೆ ಹೇಳಲಿಲ್ಲ. ರಮೇಶನಿಗೆ ಗೆಳೆಯನು ಇನ್ನೂ ಸಿದ್ಧನಾಗಿಲ್ಲ ಎನ್ನುವುದು ಕೇಳಿ ಆಶ್ಚರ್ಯ ವಾಯಿತು. "ನ್ಯಾಯವಾಗಿ ಎಂದಿನಂತೆ ಆದರೆ ಅವನು ಬಂದು ತನ್ನನ್ನು ಎಬ್ಬಿಸಬೇಕು. ಎಲ್ಲೋ ರಾತ್ರಿ ಟಿಪ್ಸಿ ಆಗಿರಬೇಕು. ಗೌಡರು ಇಟ್ಟಿದ್ದುದು ಸ್ಪೆಷಲ್ ಲಿಕ್ಕರ್, ಎಲ್ಲೋ ಹೆಚ್ಚಾಗಿರಬೇಕು. ಆದರೂ ಅವನು ಖದೀಮ. ಜಗ್ಗುವವನಲ್ಲ. ಏನಿದು ಆಶ್ಚರ್ಯ?" ಎಂದು ತಾನೇ ಅವನನ್ನು ನೋಡ ಬೇಕೆಂದು ಹೊರಟನು. ಪ್ರಾಣೇಶನು ರೂಮಿನಲ್ಲಿರಲಿಲ್ಲ. ಸ್ನಾನಕ್ಕೆ ಹೋಗಿದ್ದ.

ನಿಂಗನ ಮಜ್ಜನ ಎಂದರೆ ಮರೆಯುವಹಾಗಿಲ್ಲ. ಬಲವಾಗಿಲ್ಲದೆ ಇದ್ದರೆ ಅವನು ನೀರು ಹೊಡೆಯುವ ರಭಸಕ್ಕೆ ಮೂರ್ಛೆ ಬಂದುಬಿಡಬೇಕು. ಹಾಗಿದ್ದರೂ ಆಗ ತಾನೇ ಹುಟ್ಟಿದ ಮಗುವಿಗೂ ಹಿತವಾಗುವ ಹಾಗೆ ನೀರು ಎರೆಯ ಬಲ್ಲಂಥಾ ನಿಪುಣ ನಿಂಗ. ಅವನು ಎಣ್ಣೆ ಒತ್ತುತ್ತಿದ್ದರೆ ನಿದ್ದೆ ಬರುವುದು. ಮೈಯಲ್ಲಿ ಮಾಂಸದೊಳಗೆ ಇರಲಿ, ಮೂಳೆಯ ಹಿಂದೆ ಅವಿತಿದ್ದ ನೋವು ಕೂಡ ಆ ಎಣ್ಣೆ ಒತ್ತುವುದರಲ್ಲಿ ಹಾರಿಹೋಗುವುದು. ಅವನು ನೀರೆರೆಯುತ್ತಿದ್ದರೆ ಮಗುವಿಗೆ ಸ್ತನ್ಯಪಾನದಿಂದ ಆಗವಷ್ಟು ಆನಂದವಾಗಿ ಸುಖದಲ್ಲಿ ಸೊಕ್ಕುವಂತಾಗುವುದು. ಎಣ್ಣೆ ಒತ್ತಿಸಿಕೊಳ್ಳುವ ಜನ ಕೂತುಕೊಳ್ಳುವಾಗಲೇ ಅವರಿಗೆ ಯಾವ ತರಹ ಒತ್ತಬೇಕು ಎನ್ನುವುದು ಅವನ ಮನಸ್ಸಿಗೆ ಅರಿವಾಗುವುದು. ಮೊದಲನೆಯ ಸಲ ನೀರು ಹಾಕುವಾಗಲೇ ಆ ರಭಸ ಹೇಗಿರಬೇಕು ಎನ್ನುವುದು ಅವನಿಗೆ ತಿಳಿದು ಹೋಗುವುದು. ಅಷ್ಟೇನು? ಅವನು ಅಭ್ಯಂಜನ ಸ್ನಾನಸಿದ್ಧ. ಚರಿತ್ರೆ ಹೇಳುವುದು ನಿಜವಾದರೆ ನಿಂಗ ಆ ಮಡಿವಂತೆ ಮೂಗೂರು ಸೂಳೆಯ ಮನೆಯಲ್ಲಿ ಇದ್ದ. ಅವನನ್ನು ಗೌಡರು ಮೊದಲು ನೋಡಿದ್ದು ಅಲ್ಲಿ. ಅವರಿಗೂ ಅವನು ಒಂದು ದಿನ ಉಪಚಾರಮಾಡಿದ. ಕೂಡಲೇ ಆ ಸಿದ್ಧಪುರುಷನಿಗೆ ಕಾಫಿಯ ತೋಟಕ್ಕೆ ವರ್ಗವಾಗಿತ್ತು. ಅವನಿಗೆ ಇರುವುದಕ್ಕೆ ಮನೆ, ತಿಂಗಳಿಗೆ ಆಗುವಷ್ಟು ಕಾಳುಕಡ್ಡಿ ಸೌದೆ ತರಕಾರಿ, ಜೊತೆಗೆ ೨೦ ರೂಪಾಯಿ ಸಂಬಳ. ಅದರ ಮೇಲೆ ಗೌಡರಿಗೆ ಮೀಣ ಮಾಡಿಸಿದ ದಿನ ಎರಡು ರೂಪಾಯಿ, ಗೌಡರ ಮನೆಯಲ್ಲಿ ಊಟ; ನಿಂಗ ಹೆಂಡತಿಗೂ ಈ ವಿದ್ಯೆ ಕಲಿಸಿದ್ದ. ಅವಳಿಗೂ ಅವನಂತೆಯೇ ಸಂಬಳ. ಗೌಡರ ಹೆಂಡತಿಯರಿಗೆ ಮೀಣಮಾಡಿಸಿದ ದಿನದ ರಿವಾಜೂ ಬರುತಿತ್ತು. ನಿಂಗನ ಮೇಲೆ ತೋಟದ ಆಳುಮಗನಿಂದ ಹಿಡಿದು ಮ್ಯಾನೇಜರ್‌ವರೆಗೆ ಎಲ್ಲರಿಗೂ ಗೌರವ. ಗೌಡರ ಕಿವಿ ನಿಂಗನ ಕೈಯಲ್ಲಿತ್ತು ಎಂದು ಸುದ್ದಿಯೊಂದು: ಅವನಿಗೆ ಎಲ್ಲಾ ಸೇರಿ ಗಂಡಹೆಂಡತಿಯರಿಗೆ ಒಂದು ನೂರು ರೂಪಾಯಿ ತಪ್ಪದೆ ಬರುತ್ತಿತ್ತು, ಎನ್ನುವುದು ಇನ್ನೊಂದು, ಅಂತೂ ಎರಡು ಕಾರಣ ಆ ಗೌರವಕ್ಕೆ.

ಪ್ರಾಣೇಶನಿಗೆ ಸಿಂಗನ ಅಭ್ಯಂಗನ ಪೂರ್ತಿ ಜೀವ ತರಲಿಲ್ಲ. ಮೇಲಕ್ಕೆ ಏಳುವುದೇ ಸಾಧ್ಯವಿಲ್ಲ ಎನ್ನುವಂತಾಗಿದ್ದುದು ತಪ್ಪಿ [illegible] ಕೊಳ್ಳುವಂತಾಯಿತು. ಸೊಗಸಾದ ಹುಯ್ಯುಗಡುಬು, [illegible]. ಕಾಯಿಚಟ್ನಿ, ತಿನ್ನುವಷ್ಟು ಸಾಮರ್ಥ್ಯ ಬಂತು. ಪ್ರಾಣೇಶನಿಗೆ ಕಾಫಿ ಎಂದರೆ ಪ್ರಾಣ. ಸುಮಾರು ಒಂದು ರೈಲುಚಂಬಿನಷ್ಟು ಕುಡಿದ. ಕುಡಿದ ಎನ್ನುವುದಕ್ಕಿಂತ ಹೀರಿದ ಎಂದರೆ ಸರಿಯೇನೋ? ಗೌಡರು ಮನೆಯಲ್ಲೇನು ಬೇಕೆಂದರೆ ಡೆಲ್ಲಿ ಎಮ್ಮೆ ಕೂಡ ಸಾಕು ಸಾಕು ಎನ್ನುವಷ್ಟು ಕಾಫಿ ಕೊಡುವರು.

ಇಷ್ಟಾದರೂ ಪ್ರಾಣೇಶ ಇನ್ನೂ ಪ್ರಕೃತಿಸ್ಥನಾಗಲಿಲ್ಲ. ಅವನಿಗೆ ಸನ್ಯಾಸಿಗಳ ದರ್ಶನಬೇಡ. ಒಳಗೆ ಏನೋ "ಡಾಚಕ್." ಕಳ್ಳನಿಗೆ ಕಾನ್ಸ್ಟೇಬಲ್ ಅಲ್ಲ, ಇನ್ಸ್ಪೆಕ್ಟರನ್ನು ಕಾಣುವುದಕ್ಕೆ ಇರುವ ಆತಂಕ. ಸ್ಪಷ್ಟವಾಗಿ ಹೇಳಿಕೊಳ್ಳಲಾರ. "ತಾನೇ ಹೊರಡು ಹೊರಡು ಎಂದು ಹೊರಡಿಸಿದ ರಮೇಶ್ ಏನೆಂದುಕೊಂಡಾನು?" ಎಂದು ಒಂದು ಸಂಕಟ. "ಅಲ್ಲಿಂದ ಬಂದು ಇಲ್ಲಿಂದು ಬರುವುದಿಲ್ಲ ಎಂದರೆ, ಗೌಡನು ರೇಗಿದರೋ? ಆಗಲೇ ಬಂದು ಇಷಾರೆ ಕೊಟ್ಟು ಹೋಗಿದ್ದಾನೆ." ಎಂದು ಇನ್ನೊಂದು ಸಂಕಟ. ಅಂತೂ ಮೊದಮೊದಲು ಸ್ಕೂಲಿಗೆ ಹೋಗುವ ಮಗುವಿನ ಹಾಗೆ ಪಂಚಪ್ರಾಣ ಕೈಯಲ್ಲಿ ಹಿಡಿದುಕೊಂಡು ಸನ್ಯಾಸಿಗಳ ದರ್ಶನಕ್ಕೆ ಹೋಗಲು ಧೈರ್ಯಮಾಡಿದ.

ರಮೇಶನು ಆದೂವರೆಗೂ ತನ್ನ ಕಿರುಮನೆಯಲ್ಲಿಯೇ ಇದ್ದಾನೆ. ಅವನಿಗೂ ಏಕೋ ದಿಗಿಲು. ಅವನಿಗೂ ತಾನು ಏಕಾದರೂ ಒಪ್ಪಿ ಕೊಂಡೆನೋ? ಬರದಿದ್ದರೆ ಚೆನ್ನಾಗಿತ್ತೇನೋ? ಎಂದು ಒದ್ದಾಟ. ಒಳಗಿನ ಯಾವುದೋ ಒಂದು ಕೇಳಿಯೂ ಕೇಳದಂತಿರುವ, ಕೇಳದಿದ್ದರೂ ಕೇಳಿದಂತಿರುವ ಸಣ್ಣದನಿ, "ಒಳ್ಳೆಯದಾಯಿತು. ಮಹನೀಯರ ದರ್ಶನ ವಿಫಲವಾಗುವುದಿಲ್ಲ." ಎನ್ನುತ್ತಿತ್ತು, ಆದರೆ ಅವನಿಗೇ ನಿರ್ಧರವಿಲ್ಲ. "ತನಗೆ ಬೇಕಾದುದೆಲ್ಲ ಆಗಿಯೇ ಇದೆ. ಹೆಂಡತಿ, ಮಗಳು, ಮನೆ, ಬಾಗಿಲು, ಐಶ್ವರ್ಯ, ಬುದ್ಧಿ, ಕೀರ್ತಿ, ಬಲ, ಆರೋಗ್ಯ, ಎಲ್ಲಾ ಇದೆ.

ಇನ್ನೇನು ಬೇಕು? ಎಂದುಕೊಳ್ಳುತ್ತಾನೆ. ಆದರೂ "ಒಳ್ಳೆಯದಾಯಿತು. ದರ್ಶನಮಾಡಿರೋಣ" ಎಂಬ ಕಡೆಗೇ ಓಟು.

ಕಾರು ಬಂದು ಬಾಗಿಲಲ್ಲಿ ನಿಂತಿತು. ಗೌಡರೂ ಪ್ರಾಣೇಶನೂ ಕರೆಯುವುದಕ್ಕೆ ಬಂದರು. ರಮೇಶನಿಗೆ ಸ್ನೇಹಿತನನ್ನು ನೋಡಿ ಗಾಬರಿಯಾಯಿತು. "ವ್ಹಾಟ್ ಈಸ್ ದಿಸ್? ಆರ್ ಯು ಅಲೈವ್ ಆರ್ ಡೆಡ್?" ಎಂದು ಕೇಳಿದನು.

"ಪರ್‌ಹ್ಯಾಪ್ಸ್ ಬೋತ್."

"ಕೆ್ಯಾನ್ ಯೂ ಸ್ಟ್ಯಾಂಡ್ ದಿ ಕಾರ್ ಜರ್ನಿ?"

"ಐ ಮಸ್ಟ್." ಪ್ರಾಣೇಶನು ಗೌಡರು ಬಿಡುವುದಿಲ್ಲ ಎಂದು ಅವರ ಕಡೆ ತೋರಿಸಿದನು.

"ಇಫ್ ಯೂ ಮಸ್ಟ್, ಯೂ ಮಸ್ಟ್ ಹ್ಯಾವ್ ಎ ಡೋಸ್, ವ್ಯಾನ್."

"ಐ ಹ್ಯಾವ್ ಟೂ."

ರಮೇಶನು ಇದೇನು ಇವನ ಅವಸ್ಥೆ ಎಂದು ಕೇಳುವವನಂತೆ ಗೌಡರ ಕಡೆ ತಿರುಗಿದನು. ಗೌಡರು ಆ ಅರ್ಥವನ್ನು ಗ್ರಹಿಸಿ "ಗೊತ್ತಾಗುತದೆ ನಡೀರಿ." ಎಂದು ಕಾರಿನ ಕಡೆಗೆ ಹೊರಟರು.

ಪ್ರಾಣೇಶನ ನಡುವಿಗೆ ಗೌಡನ ತೋಳು ಇಂಬಾಗಿತ್ತು. ಆ ಇಂಬು ಬೇಡ ಎಂದು ಅವನು ಅನ್ನಲಿಲ್ಲ. ಅವನಿಗೆ ಅನ್ನಿಸಲೂ ಇಲ್ಲ. ರಮೇಶನು ಅವರಿಬ್ಬರ ಹಿಂದೆ ಪಡವನಂತೆ ಬಂದನು. ಹಚ್ಚಬೇಕೆಂದು ಕೈಯಲ್ಲಿ ಹಿಡಿದಿದ್ದ ಸಿಗರೇಟು ಹಾಗೆಯೇ ಕೈಯಲ್ಲಿತ್ತು. ಗೌಡನು ಮೂಟೆ ತಂದು ಗಾಡಿಗೆ ಭರ್ತಿಮಾಡುವ ವೈಖರಿಯಿಂದ ತನ್ನ ಸ್ನೇಹಿತನನ್ನು ಗಾಡಿಯಲ್ಲಿ ಇಟ್ಟುದನ್ನು ನೋಡುತ್ತ, ರಮೇಶನೂ ಗಾಡಿಯನ್ನು ಹತ್ತಿ ಕುಳಿತನು. ಗೌಡರು ಮಾತ್ರ ಕಳೆದುಹೋಗಿರುವ ಕಾಲವನ್ನು ಹಿಂದಕ್ಕೆ ಎಳೆಯುವ ಅವಸರದಲ್ಲಿರುವಂತೆ, ಥಟ್ಟನೆ ಮುಂದಿನ ಬಾಗಿಲು ತೆಗೆದು

ಹತ್ತಿದರು. ಡ್ರೈವರು ಅವರ ಚಿತ್ತವೃತ್ತಿಯನ್ನು ಕಂಡು ಅಷ್ಟೇ ಜಾಗ್ರತೆಯಿಂದ ಹೊರಟನು.

ಗೌಡರ ಪಾರ್ಟಿಯು ಗವಿಯ ಬಳಿಗೆ ಬರುವ ವೇಳೆಗೆ ಸುಮಾರು ಹತ್ತು ಗಂಟೆಯಾಗಿತ್ತು. ಪೂಜೆಗೆ ಬೇಕಾದ ಹಾಲು ಹಣ್ಣು ಹೂವು ಮೊದಲಾದ ಪದಾರ್ಥಗಳೆಲ್ಲ ಮೊದಲೇ ಹೋಗಿದ್ದುವಾದ್ದರಿಂದ, ಇವರು ಹೋಗುವ ವೇಳೆಗೆ ಪೂಜೆಯೇ ಆರಂಭವಾಗಿತ್ತು. ಸಾಲಗ್ರಾಮವನ್ನು ಕಮಂಡಲುವಿನಲ್ಲಿಟ್ಟು ಹಾಲು ಅಭಿಷೇಕ ಮಾಡಿ ರುದ್ರಪಾರಾಯಣ ಮಾಡುತ್ತ ಕುಳಿತಿದ್ದಾರೆ. ಮೂವರು ಹೆಂಗಸರೂ ವೀಣಾ, ಮಲ್ಲೀಶ, ಗವಿಯ ಬಾಗಿಲ ಮುಗ್ಗುಲಲ್ಲಿ ಕುಳಿತುಕೊಂಡಿದ್ದಾರೆ. ಬಾಗಿಲ ಎದುರಿಗೆ ಗೌಡರ ಪಾರ್ಟಿಗೆಂದು ಒಂದು ಸಣ್ಣ ರತ್ನಕಂಬಳಿ ಹಾಕಿದ್ದಾರೆ.

ಎಲ್ಲರೂ ಹೋಗಿ ನಮಸ್ಕಾರ ಮಾಡಿದರು. ರುದ್ರ ಹೇಳುತ್ತಿದ್ದ ಸ್ವಾಮಿಗಳು ಎಲ್ಲರಿಗೂ ಕೈಯ್ಯಿಂದ ಆಶೀರ್ವಾದ ಮಾಡಿ ಕುಳಿತುಕೊಳ್ಳಿರೆಂದು ಹೇಳಿ ರತ್ನಕಂಬಳಿ ತೋರಿಸಿದರು. ಪ್ರಾಣೇಶನು ಕೊನೆಯಲ್ಲಿ ನಮಸ್ಕಾರ ಮಾಡಿ ಎದ್ದನು. ಸ್ವಾಮಿಗಳು ಅವನ ಮುಖವನ್ನು ನೋಡಿದರು. ಅವರ ಮುಖವು ಗಾಂಭೀರವಾಯಿತು. ಮೂಗಿನಳ್ಳೆಗಳು ದಪ್ಪವಾದುವು. ದನಿ ದಪ್ಪವಾಯಿತು. ಗೌಡರೂ ಅದನ್ನು ಕಂಡರು. ಅವರವರ ಕಣ್ಣೇ ಮಾತನಾಡಿಕೊಂಡಿತು.

ಪೂಜೆಯು ಮುಗಿಯಿತು. ಎಲ್ಲರಿಗೂ ಫಲಪುಷ್ಪ ವಿನಿಯೋಗವಾಯಿತು. ಸ್ವಾಮಿಗಳು ಇಂದು ತಮ್ಮ ಪಾಲು ಇಟ್ಟುಕೊಳ್ಳದೆ ಎಲ್ಲವನ್ನೂ ಹಂಚಿಬಿಟ್ಟರು. ಒಂದು ವಿಚಿತ್ರವೆಂದರೆ ರಮೇಶ್ ತಂದಿದ್ದ ದ್ರಾಕ್ಷಿಯ ಹಣ್ಣಿನ ತಟ್ಟೆಯನ್ನು ಹಾಗೆಯೇ ಎತ್ತಿ ಡ್ರೈವರ್ ಕರೆದು ಕೊಟ್ಟು, "ಇದಿಷ್ಟು ಹಣ್ಣೂ ಎದುರು ಬಂಡೆಯ ಮೇಲೆ ಇಟ್ಟು ಹಿಂತಿರುಗಿ ನೋಡದೆ ಬಾ" ಎಂದು ಹೇಳಿದರು. ಯಾಕೆನ್ನುವುದು ಯಾರಿಗೂ ಅರ್ಥವಾಗಲಿಲ್ಲ.

ಅದಾದಮೇಲೆ ಸ್ವಾಮಿಗಳು ಎಳ್ಳು ಹಾಕಿದರೆ ಸದ್ದು ಕೇಳಿಸು

ವಂತಹ ನಿಶ್ಶಬ್ದದಲ್ಲಿ ಗೌಡರನ್ನು ಕೇಳಿದರು; "ಅಂತೂ ರಾಯರಿಬ್ಬರನ್ನು ಭೀಮಸೇನ ಸನ್ಯಾಸಿಗಳನ್ನು ನೋಡುವುದಕ್ಕೆ ಕರೆದುಕೊಂಡು ಬಂದಿರಿ ?"

ಆ ಮಾತು ಕೇಳಿ ಎಲ್ಲರೂ ತಲೆ ತಗ್ಗಿಸಿದರು.

ಸ್ವಾಮಿಗಳು ಹೇಳಿದರು : "ಇವೊತ್ತು ನಿಮಗೆ ಭೀಮಸೇನಸ್ವರೂಪ ಕಾಣಿಸುವಂತಿಲ್ಲ. ಭೈರವನಾಗಬೇಕಾಗಿದೆ." ಹಾಗೆಂದು ಪ್ರಾಣೇಶನ ಕಡೆ ಸನ್ನೆ ಮಾಡಿದುದು ಗೌಡನಿಗೆ ಅರ್ಥವಾಯಿತು. ಗೌಡನ ಜೊತೆಯವರು ಮೊಕಮೊಕ ನೋಡಿಕೊಂಡರು. ಮಿಕ್ಕವರಿಗೆ ಆ ಮಾತು ಅರ್ಥವಾಗಲಿಲ್ಲ.

ಪ್ರಾಣೇಶನಿಗೆ ಯಾಕೋ ಅಲ್ಲಿ ಕುಳಿತುಕೊಳ್ಳಲಾಗಲಿಲ್ಲ. ಏನೋ ಭಯ, ಏನೋ ದಿಗಿಲು. ಸನ್ಯಾಸಿಯ ಮುಖನೋಡುವುದಕ್ಕೆ ಆಗದು. ಹೇಗೆ ಹೇಗೋ ಆಗುತ್ತಿದೆ. ಎದ್ದು ಹೋಗೋಣ ಎನ್ನಿಸುತ್ತದೆ. ಏಳುವುದಕ್ಕೆ ಕಾಲು ಬಾರದು. ತೊಡೆಗಳೆರಡನ್ನೂ ಸಿಮೆಂಟ್ ಹಾಕಿ ನೆಲಕ್ಕೆ ಅಂಟಿಸಿದ ಹಾಗಾಗಿದೆ. ಮೈ ನಡುಗುತ್ತಿದೆ. ಗಳಿಗೆಗೊಂದು ಸಲ ಬೆವರುತ್ತಿದೆ. ಹಾಗೂ ಕಷ್ಟಪಟ್ಟು ಏಳುವುದಕ್ಕೆ ಹೋದರು.

ಸನ್ಯಾಸಿಯು "ಎಲ್ಲಿಗೆ ಹೋಗೋದು? ಕುಕ್ಕರಿಸು." ಎಂದರು. ಪ್ರಾಣೇಶನು ಹೆದರಿ ಕುಳಿತುಬಿಟ್ಟನು. ಅಳು ಬಂತು. ಅತ್ತುಬಿಟ್ಟನು. ಗಳಗಳನೆ ಹೆಂಗಳು ಅಳುವಹಾಗೆ ಅಳುವ ಅವನನ್ನು ಕಂಡು ಗೌಡನಿಗೂ ರಮೇಶನಿಗೂ ಗಾಬರಿಯಾಯಿತು. ಮಿಕ್ಕವರಿಗಂತೂ ಜೀವವೇ ಇಲ್ಲದಂತಾಗಿದೆ. ಗೌಡನಿಗಂತೂ ದೊಡ್ಡಜೀವ ಹಾರಿಹೋಗುವುದಲ್ಲಿದೆ. "ಹೈಕೋರ್ಟಿನಲ್ಲಿ ಫುಲ್ ಬೆಂಚಿನ ಎದುರಿಗೆ ಸಿಡಿಲಿನಮರಿಯ ಹಾಗೆ ಗುಡುಗುವ ಭಾರಿಯ ಲಾಯರು ಒಬ್ಬ ಸನ್ಯಾಸಿಯ ಎದುರಿಗೆ ಕುರಿಯ ಮರಿಯಾಗಿದ್ದಾನೆಯೆಂದರೆ ನಂಬಬಹುದೆ? ಅವರು ಇವನನ್ನು ಗದರಿಸಿದರು ಎಂದರೆ ಮುಂದೆ ನಾನೇ ಹೇಳಿಕೊಟ್ಟು ಎಲ್ಲವನ್ನೂ ಮಾಡಿಸಿದೆ ಎಂದಾದರೆ ಎಷ್ಟು ಅವಮಾನ!" ಎಂದು ನಡುಗಿಹೋಗಿದ್ದಾನೆ. ರಮೇಶನಿಗೆ "ದಿಸ್ ಈಸ್ ಪ್ರಿಪಾಸ್ಟರಸ್. ಎ ವಾಂಡರಿಂಗ್ ಬೆಗ್ಗರ್

ಇಕ್ಸಲ್ಟಿಂಗ್ ಎ ಲೀಡರ್ ಆಫ್ ದಿ ಬಾರ್" ಎನ್ನಿಸಿ ರೇಗುತ್ತಿದೆ. ಆದರೂ ಈ ಮಾತು ಆಡಲಾರ. ಏನೋ ಗಂಟಲು ಹಿಡಿದಂತಿದೆ. ಮಾತು ಈಚೆಗೆ ಬರಲೊಲ್ಲದು.

ಸನ್ಯಾಸಿಯು "ರಾಯರು ಸಮಾಧಾನವಾಗಬೇಕು. ತಮ್ಮ ಗೆಳೆಯರ ಮೇಲಲ್ಲ ನಮ್ಮ ಕೋಪ. ತಮ್ಮ ಗೆಳೆಯರಿಗೆ ಕೈಕೊಟ್ಟು ಅವರನ್ನು ಹಿಡಿದಿರುವ ಮತ್ತೊಬ್ಬರ ಮೇಲೆ. ಎ ವಾಂಡರಿಂಗ್ ಬೆಗ್ಗರ್ ಈಸ್ ನಾಟ್ ಇಕ್ಸಲ್ಟಿಂಗ್ ಎ ಲೀಡರ್ ಆಫ್ ದಿ ಬಾರ್, ಎ ಬೆನೆವಲೆಂಟ್‌ಮಾಂತ್ರಿಕ್ ಈಸ್ ಪಿನ್ನಿಂಗ್ ಡೌನ್ ಎ ವಾಂಡರಿಂಗ್ ವಿಕೆಡ್ ಸ್ಪಿರಿಟ್" ಎಂದರು. ಗೌಡನಿಗೆ ಗೌಡನ ಹೆಂಡತಿಯರಿಗೆ ಸಂಪೂರ್ಣವಾಗಿ ಅರ್ಥವಾಯಿತು. ಮೋಹನನಿಗೆ ಅರ್ಧಾರ್ಧ ಅರ್ಥವಾಯಿತು. ಹುಡುಗರಿಗೆ ಅರ್ಥವಾಗಲೇ ಇಲ್ಲ.

ರಮೇಶನಿಗೆ ನಗು ಬಂತು. ಗಂಭೀರವಾಗಿ ಇರಲು ಮಾಡಿದ ಪ್ರಯತ್ನ ಫಲವಾಗಲಿಲ್ಲ. ಆದರೆ ದೊಡ್ಡದಾಗಿ ನಗಬೇಕೆಂಬ ಮನಸ್ಸಿನ ಪ್ರಯತ್ನವೂ ಸಫಲವಾಗಲಿಲ್ಲ. ಮುಖವನ್ನು ಹಿಂಡಿಕೊಳ್ಳುತ್ತ, "ಎಕ್ಸ್‌ಕ್ಯೂಜ್ ಮಿ, ಸ್ವಾಮಿಜಿ, ವಾಟ್ ಅಬೌಟ್ ನಾರ್ಕಫಾರ್-ಮಿಸ್ಟ್ಸ್?" ಎಂದನು. ಅವನು ಆ ಮಾತಿನಲ್ಲಿ ಒಂದು ಪೌಂಡು ಧೈರ್ಯವಿರಬೇಕು ಎಂದುಕೊಂಡಿದ್ದರೂ ನಾಕು ಔನ್ಸಿನ ಮೇಲೆ ಇರಲಿಲ್ಲ.

ಸನ್ಯಾಸಿಯು ಗುಡುಗಿದನು, "ಕಫಾರ್ಮಿಸ್ಟ್ಸ್ ಆರ್ ನೋ ಕಫಾರ್ಮಿಸ್ಟ್ಸ್, ಫೈರ್ ಬರ್ನ್ಸ್. ಇಟೀಸ್ ಅ ಆಬ್ಜೆಕ್ಟಿವ್ ಫ್ಯಾಕ್ಟ್."

ಗೌಡನು ನೋಡಿದನು. ಮಳೆ ನಿಂತಿದೆ, ವಾಗ್ಯುದ್ಧ ಆರಂಭವಾಗಿದೆ. ಬಿಟ್ಟರೆ ಯಾವ ಕಡೆಗೆ ಹೋಗುತ್ತೋ? ಧಟ್ಟನೆ ಎದ್ದನು. ನಮಸ್ಕಾರ ಹಾಕಿದನು. ಗೌಡನ ಹೆಂಡತಿಯರೂ ಗಂಡನ ಹಿಂಬಾಲಿಕೆಯಲ್ಲಿಯೇ ಎದ್ದು ನಮಸ್ಕಾರ ಹಾಕಿದರು. ಸ್ತ್ರೀಯರುಗಳೂ ಇದ್ದಲ್ಲಿಯೇ ಬಾಗಿ ಅಡ್ಡ ಬಿದ್ದರು. ರಮೇಶನೂ ಎದ್ದು ಅಡ್ಡಬಿದ್ದನು. ಆದರೆ ತಾನೇಕೆ ಹಾಗೆ

ಮಾಡಿದೆನೆಂದು ಅವನಿಗೆ ತಿಳಿಯದು. ಪ್ರಾಣೇಶನು ಭಂಗಿಯ ಅಮಲಿನಲ್ಲಿರುವವನಂತೆ ತಲೆಯಲ್ಲಾಡಿಸುತ್ತಾ ಕುಳಿತಿದ್ದನು.

ಗೌಡನು ಭಯದಿಂದ, ಭಕ್ತಿಯಿಂದ, ವಿನಯದಿಂದ "ನಾವು ಊರುಗಳಿಂಗೆ ಬಂದಿದ್ದೇವೆ. ಸಕ್ಕರೆ ಕಲ್ಲಾಗಿ ನಮ್ಮ ಮೇಲೆ ಬಿದ್ದರೆ ತಡೆಯೋಕೆ ಆದೀತಾ? ಕಣ್ಣು ಬಿಟ್ಟು ನೋಡಬೇಕು ಮಹಾಸ್ವಾಮಿ!" ಎಂದು ಕೈಮುಗಿದನು. ಸನ್ಯಾಸಿಯು ಕಣ್ಣು ಮುಚ್ಚಿ ನಗುತ್ತಾ ಪ್ರಾಣೇಶನ ಕಡೆ ತೋರಿಸಿದನು. ಎಲ್ಲರೂ ಅತ್ತ ನೋಡಿದರು.

ಪ್ರಾಣೇಶನು ಹಲ್ಲುಹಲ್ಲು ಕಡಿಯುತ್ತಿದ್ದಾನೆ. ಕಣ್ಣುಗಳು ಬಿರಿಗಣ್ಣಾಗಿ ತೆರೆದಿವೆ, ಭುಸುಗುಟ್ಟುವುದಕ್ಕೆ ಆರಂಭವಾಗಿದೆ. ತಿರಸ್ಕಾರಕ್ಕೆ ಮನಸ್ಸು ಸಿದ್ಧವಾಗಿದ್ದರೂ, ದೊಡ್ಡ ನಾಯಿಯ ಎದುರಿಗೆ ಹದುಗಿಕೊಂಡು ಬಾಲ ಮುಚ್ಚಿಕೊಂಡು ಹಲ್ಲು ಕಿರಿದುಕೊಂಡು, 'ನಿನಗೆ ಮೇಲೆ ಬೀಳುವುದಕ್ಕೆ ಇನ್ನು ಯಾರೂ ಇರಲಿಲ್ಲವೆ?" ಎಂದು ಕೇಳುತ್ತಿರುವ ಕುನ್ನಿಯಂತೆ, ಹೆದರಿ ಹುದುಗಿಕೊಳ್ಳುತ್ತಿರುವ ದೈನ್ಯಭಾವದಿಂದ "ನಾನೊಂದು ಹುಳಿ ಮುರಿದರೆ ನಿಮ್ಮ ಗಂಟೇನು ಹೋಯಿತು?" ಎಂದು ಕೇಳುತ್ತಿದ್ದಾನೆ.

ಸನ್ಯಾಸಿಯು ಪದ್ಮಾಸನದಲ್ಲಿ ಗೂಟ ಹೊಡೆದಂತೆ ಕುಳಿತಿದ್ದಾನೆ. ಆತನು ಯಾವ ಮಾತೂ ಆಡಲಿಲ್ಲ. ತಿರುಗಿ ಪ್ರಾಣೇಶನೇ ಮಾತನಾಡಿದನು. "ಇವನು ಪಾಪಿ, ಗೌಡನ ಹಣಕ್ಕೆ ಆಸೆಬಿದ್ದು ಅವನ ನರಹತ್ಯ ಇಲ್ಲ ಎನ್ನಿಸಿದ್ದಾನೆ. ನೀವು ಅಡ್ಡ ಬರಬೇಡಿ."

ಸನ್ಯಾಸಿಯು ಕಣ್ಣು ಬಿಟ್ಟು ನೋಡಿದನು. ಪ್ರಾಣೇಶನ ಕಣ್ಣಲ್ಲಿ ನೀರು ಸೋರುತ್ತಿದೆ, ಆದರೆ ಅಳುವಿನ ಭಾವವಿಲ್ಲ. ನಗಬೇಕೆಂಬ ಪ್ರಯತ್ನ ಹಿರಿದಾಗಿರುವುದು ಮುಖದಲ್ಲಿ ತೋರುತ್ತಿದೆ. ಆದರೆ ನಗುವುದಕ್ಕೆ ಧೈರ್ಯವಿದ್ದಂತಿಲ್ಲ. ಆ ಭಾವಸಂಧಿಯಲ್ಲಿದ್ದುಕೊಂಡು ಹೇಳಿದನು, "ನಾನು ಯಾರು ಎನ್ನುವುದು ನನ್ನ ಬಾಯಲ್ಲಿ ಹೇಳುವುದಿಲ್ಲ. ಹೌದು, ನೀವು ಹೇಳಿಸಬಲ್ಲಿರಿ. ಹೇಡಿ, ದುಡುಕಬೇಡಿ. ಇವನ ಮೇಲೆ ಮಾಡಬೇಕೆಂದಿರುವ ಕೃಪೆ ನನ್ನ ಮೇಲೆ ಮಾಡಿ. ಇದು ನನಗೆ ಬೇಕಾದ

ಕೊನೆಯ ಬಲಿ. ಇದನ್ನು ತೆಗೆದುಕೊಂಡು ಹೊರಟುಹೋಗುತ್ತೇನೆ
ತಡೆದರೆ ಇನ್ನೊಂದು ಪಾಪಚಕ್ರ ನೀವಾಗಿ ಆರಂಭಿಸಿದಂತಾಗುತ್ತದೆ
ನಿಮಗೆ ಇರುವ ಶಕ್ತಿಯನ್ನು ಉಪಯೋಗಿಸಿ, ಇವನ ಕರಾಳ ಹೃದಯ
ದಲ್ಲಿ ಅಡಗಿರುವ ಪಾಪಸಂಕಲ್ಪಗಳನ್ನೆಲ್ಲ ನೋಡಿ ಸುಮ್ಮನಾಗಿ. ಆಗು
ವುದಿಲ್ಲವೆ? ಮನುಷ್ಯನೆಂಬ ಜಾತಿ ವಾತ್ಸಲ್ಯಕ್ಕೆ, ಗೌಡನು ಭಕ್ತನೆಂಬ
ಅಭಿಮಾನಕ್ಕೆ ವಶನಾಗಿ ಏ ಸನ್ಯಾಸಿ, ಈ ಚಂಡಾಲನನ್ನು ಉಳಿಸಿಕೊ
ಳ್ಳುವೆನೆನ್ನುವೆಯಾ? ನಿನ್ನ ಕೈಲಾದರೆ ಉಳಿಸಿಕೊ. ಎಚ್ಚರಿಕೆ. ನೀನು
ನನ್ನನ್ನು ಬಿಟ್ಟೆಯಾ ಸರಿ. ಇಲ್ಲದಿದ್ದರೆ, ನೀನು ಕಟ್ಟೆಬಲ್ಲೆ, ಕೊಲ್ಲಲಾರೆ
ಎನ್ನುವುದನ್ನು ನೋಡಿಕೊ. ಕೊಂಬೆಯಿಂದ ಕೊಂಬೆಗೆ ಹಾರಿ ಮರ
ವನ್ನು ಮುರಿದೇನು?..........."

ಇನ್ನೂ ಏನೇನು ಹೊರಡುವುದರಲ್ಲಿತ್ತೊ? ಸಂನ್ಯಾಸಿಯ
ಹುಂಕಾರವು ಅದೆಲ್ಲವನ್ನೂ ತಡೆಯಿತು. "ಕೊಲ್ಲುವೆಯಾ? ಮಾರಣ
ಹೋಮ ಮಾಡುವೆಯಾ? ಕೊಲ್ಲು. ಕೊಲ್ಲು. ನಿನ್ನ ಕೈಲಾದರೆ
ಕೊಲ್ಲು...." ಎಂದು ಗಳಹುವುದಕ್ಕೆ ಹೊರಟಿತು. ಇನ್ನೊಂದು
ಹುಂಕಾರ. ಅಯ್ಯೋ ಎಂದು ಪ್ರಾಣೇಶನ ದೇಹವು ಬಿದ್ದುಹೋಯಿತು.
ಸನ್ಯಾಸಿಯು ಥಟ್ಟನೆ ಎದ್ದು ಕಮಂಡಲುವಿನಲ್ಲಿದ್ದ ಹಾಲನ್ನು
ಆ ದೇಹಕ್ಕೆ ಅಭಿಷೇಕ ಮಾಡಿದರು. ಪ್ರಾಣೇಶನಿಗೆ ಹೋಗಿದ್ದ ಉಸಿರು
ಬಂದಂತಾಯಿತು. ಮೆತ್ತಗೆ ಉಸಿರು ಕೂಡಿಕೊಂಡಿತು. ಹೆಂಗಸಿನ
ಹಾಗೆ ಮುದುರಿಕೊಂಡು ಬಿದ್ದಿದ್ದ ಪ್ರಾಣೇಶನು ಕೊಂಚ ಕೊಂಚವಾಗಿ
ಚೇತರಿಸಿಕೊಂಡು ಏಳುತ್ತಿರುವ ಲಕ್ಷಣಗಳು ಕಾಣಿಸಿತು. ಮೆಲ್ಲಗೆ
ಎದ್ದು ಕುಳಿತುಕೊಂಡನು.

ಗೌಡನೂ ರಮೇಶನೂ ಮಾತನಾಡಿಸುವುದಕ್ಕೆ ಹೋದರು.
ಸನ್ಯಾಸಿಯು ಬೇಡವೆಂದರು. ಅವರ ಮಾತು ಮೀರುವ ಧೈರ್ಯ
ಯಾರಿಗೂ ಇರಲಿಲ್ಲ. ಕಣ್ಣು ಮುಚ್ಚಿಕೊಂಡು, ಬಲಗೈ ಎತ್ತರವಾಗಿ
ಎತ್ತಿಕೊಂಡು, "ಇಲ್ಲಿರುವವರೆಲ್ಲ ಹೆಣ್ಣಾಗಲಿ, ಗಂಡಾಗಲಿ, ನಿತ್ಯ
ಶಿವಲಿಂಗದ ಪೂಜೆ ಮಾಡಬೇಕು. ಶಿವತೀರ್ಥ ಪ್ರಸಾದ ದಿನಾದಿನವೂ

ತೆಗೆದುಕೊಳ್ಳಬೇಕು ಇಲ್ಲದಿದ್ದರೆ ಅನರ್ಥವು ತಪ್ಪುವುದಿಲ್ಲ ಎಚ್ಚರಿಕೆ. ಎಚ್ಚರಿಕೆ. ಗೌಡ ನೀನು ಶೂದ್ರನೆಂದುಕೊಳ್ಳಬೇಡ. ಶಿವನು ಶೂದ್ರನಿಗೊಬ್ಬ ಬ್ರಾಹ್ಮಣನಿಗೊಬ್ಬ ಇಲ್ಲ. ಎಲ್ಲರಿಗೂ ಇರುವವನು ಒಬ್ಬನೇ ಶಿವ. ಧೈರ್ಯವಾಗಿ ಶಿವ ಪೂಜೆ ಮಾಡು. ಪೂಜೆ ಕಲಿತುಕೋ. ರುದ್ರಾಭಿಷೇಕ ಮಾಡು. ಅದುವರೆಗೆ ಬೇರೆ ಕಡೆ ಮಾಡಿಸುತ್ತಿರು. ತಪ್ಪುತ್ತದೆ ಎಂದು ಹೆದರಬೇಡ. ಸಾವಿರ ಹೆಜ್ಜೆ ತಪ್ಪಿದ ಮೇಲೆ ಒಂದು ಸರಿಯಾದ ಹೆಜ್ಜೆ. ಮರೆತೀರಿ! ಮರೆತೀರಿ!'' ಎಂದು ಗರ್ಜಿಸಿ ಸುಮ್ಮನಾದರು.

ಎಲ್ಲರೂ ಅವಾಕ್ಕಾಗಿ ಶ್ರದ್ಧಾಭಕ್ತಿಗಳಿಂದ ಕೈಕಟ್ಟಿಕೊಂಡು ನಿಂತಿದ್ದರು. ಅಷ್ಟು ಹೊತ್ತಾದ ಮೇಲೆ ಸನ್ಯಾಸಿಗಳು ಕಣ್ಣು ಬಿಟ್ಟರು. ಭಯಂಕರವಾಗಿ ಭೈರವನಂತೆ, ರುದ್ರನಂತೆ, ಉರಿಯುತ್ತಿದೆಯೋ ಎಂಬಂತೆ ತೋರುತ್ತಿದ್ದ ಮುಖ ಶಾಂತ ಸುಂದರವಾಯಿತು. ಸಣ್ಣಗೆ ನಕ್ಕರು. ಎಲ್ಲರಿಗೂ ಪ್ರಾಣಗಳು ತಮ್ಮ ತಮ್ಮ ಸ್ಥಾನದಲ್ಲಿ ಕುಳಿತು ಕೊಂಡಂತಾಯಿತು.

ಪ್ರಾಣೇಶನಿಗೆ ಏನೋ ಕನಸಾದಂತಿದೆ. ತನ್ನ ಮೈಯೆಲ್ಲ ಹಾಲಾಗಿರುವುದು ನೋಡಿಕೊಂಡು, ಇದೇನು ಎಂದು ಕೇಳುವನಂತೆ ಆಶ್ಚರ್ಯದಿಂದ ಸುತ್ತಲೂ ನೋಡಿ, ಎಲ್ಲರೂ ತನ್ನ ಕಡೆಗೇ ನೋಡುತ್ತಿರು ವುದನ್ನು ಕಂಡು ಆಶ್ಚರ್ಯಪಟ್ಟು, ಸ್ವಾಮಿಗಳ ಕಡೆ ನೋಡಿದನು. ಅದೇನಾಯಿತೋ ಏನೋ? ತಾನು ಅವರ ಕೃಪೆಯಿಂದ ಉಳಿದುಕೊಂಡೆ ನೆಂಬ ಕೃತಜ್ಞತಾಭಾವವನ್ನು ವ್ಯಕ್ತಪಡಿಸುವವನಂತೆ ಎದ್ದು ನಮಸ್ಕಾರ ಮಾಡಿದನು.

ಸ್ವಾಮಿಗಳು ನಗುತ್ತಾ "ನಿನ್ನೆಯ ರಾತ್ರಿಯ ಕನಸು ನೆನೆಪಿದೆಯೋ ?" ಎಂದರು.

"ಹಾಗಾದರೆ ಅದು ಕನಸೇ ?"

"ಹೌದು ಕನಸು. ಆ ಕನಸು ಇನ್ನೊಂದು ದಿನ ಕಂಡಿದ್ದರೆ

ವಿ[illegible]ವೂ ಪ್ರಾರ್ಥಿಸಿಹೋಗುತ್ತಿತ್ತು. ಅಷ್ಟರಲ್ಲಿ ಗೌಡರು ಅಡ್ಡವಾಗಿ ನಿಮ್ಮನ್ನು ಅವರು ಉಳಿಸಿಕೊಂಡರು."

"ಉಂಟಾ ಬುದ್ಧಿ! ಅವರೂ ಇವರೂ ನಮ್ಮನ್ನು ಉಳಿಸಿದವರು ನೀವು ದೊಡ್ಡ ಮನಸ್ಸು ಮಾಡಿ ಅವರನ್ನು ಉಳಿಸಿದಿರಿ. ತಮ್ಮ ಪಾದದಲ್ಲಿ ನಾನು ಎಷ್ಟರವನು?"

"ಇವೊತ್ತು ಈ ಮಾತು ಆಡುತ್ತಿದ್ದೀರಿ. ಅವೊತ್ತು ಆ ಕೋಪದಲ್ಲಿ ಆ ಬಡಪಾಯಿಯನ್ನು ಕೊಂದಾಗ ಈ ದೈನ್ಯ ಎಲ್ಲಿ ಹೋಗಿತ್ತು? ನಾವು ಸನ್ಯಾಸಿಗಳು. ಸ್ವಕರ್ಮಸೂತ್ರಗ್ರಥಿತೋಹಿಲೋಕಃ ಎಂದು ನಮ್ಮನಿರಬೇಕು. ಆದರೂ ಎದುರಿಗೆ ಬಂದಮೇಲೆ, ಕಣ್ಣಿಗೆ ಬಿದ್ದ ಮೇಲೆ, ಈಶ್ವರಭಾವವಿದ್ದವರು ಕೃಪೆ ಮಾಡಲೇಬೇಕು. ಆದರಿಂದ ಈಶ್ವರ ಅವರನ್ನು ಕಾಪಾಡುವ ನೆವದ ಮೇಲೆ ನಿಮ್ಮ ಮೇಲೆ ಕೃಪೆ ತೋರಿಸಿದ. ರಾಯರೇ, ಅವಳು ಒಳಕ್ಕೆ ಬಂದಳು. ಆಳು ಹೊರಟು ಹೋದ. ಹೌದೋ?"

"ಹೌದು."

"ಇಲ್ಲಿಗೆ ಬಂದಿದ್ದವಳು ಅವಳು. ಹೋದ ಆಳು ತಪ್ಪಿಸಿಕೊಂಡಿದ್ದಾನೆ. ನಿಮ್ಮ ಮೂವರಲ್ಲಿ ಯಾರಿಗೋ ಒಂದು ಸಲ ಅವನು ವಕ್ರಿಸುತ್ತಾನೆ. ಶಿವ ಪೂಜೆ ಮಾಡಿ ಬದುಕಿಕೊಳ್ಳಿ. ಗೌಡರೆ, ಇವೊತ್ತಿಗೆ ಇಲ್ಲಿನ ಋಣ ತೀರಿತು. ನಾವು ಇಂದಿನ ಸಂಜೆ ಹೊರಡುತ್ತೇವೆ. ಎಲ್ಲರೂ ಸುಖವಾಗಿರಿ."

ಗೌಡನಿಗೆ ತನ್ನ ಪ್ರಾಣವೇ ಹೊರಹೊರಟಂತಾಯಿತು: "ಉಂಟಾ ಬುದ್ಧಿ! ಇನ್ನೂ ಎರಡು ಕಾಲವಾದರೂ ಇಲ್ಲದಿದ್ದರೆ ಆದೀತೆ? ತಾವು ಜಾಗನ್ನ ಬಾರದು ಮಹಾ ಪಾದ. ಇನ್ನೂ ಅಷ್ಟು ದಿನ ಇದ್ದು ನಮ್ಮ ಒಳ್ಳೇದು ಕೆಟ್ಟದು ನೋಡಿಕೊಂಡು ಆಮೇಲೆ ಬಿಜಮಾಡಬೇಕು." ಎಂದು ಅಂಗಲಾಚಿಕೊಂಡನು. ಗೌಡನ ದೊಡ್ಡ ಹೆಂಡತಿಯಂತೂ ಮೊಕಕ್ಕೆ ಬಟ್ಟೆ ಕವಿಚಿಕೊಂಡು ನೀರವವಾಗಿ ಅಳುತ್ತ ನಿಂತಿದ್ದಳು.

ಸನ್ಯಾಸಿಯು ಅದನ್ನು ಕಂಡು ಅಳುಕಿದವನಂತೆ ಹೇಳಿದರು: "ಮಲ್ಲಮ್ಮಾ ಅಳಬೇಡ ತಾಯಿ. ನಿನಗಷ್ಟು ಸಂಕಟವಾದರೆ, ನಿಮ್ಮ ಮನೆ ಬಾಗಿಲಲ್ಲಿ ಇನ್ನೂ ಒಂದು ತಿಂಗಳು ಇದ್ದು ಹೋಗುತ್ತಾನೆ ಗುರುದೇವ. ಆದರೆ, ಆಗಲೂ ಈಗಿನ ಹಾಗೆ ಅಳಬಾರದು ಒಪ್ಪಿಕೆಯೋ?"

ಆ ದನಿಯಲ್ಲಿ ಏನೋ ಮಾರ್ಮಿಕವಾದ ಭಾವನೆ ತಾನೇತಾನಾಗಿ ತುಂಬಿಹೋಗಿತ್ತು. ತಾಯಿಯನ್ನು ಮಗನು ನಂಬಿಸುವ, ಪ್ರಾರ್ಥಿಸುವ, ಒಪ್ಪಿಕೊಳ್ಳೆಂದು ಬಲವಂತ ಮಾಡುವ ಆ ಭಾವದ ಶಬಲತೆಗೆ ವಶವಾದವಳಂತೆ ಆ ಮಲ್ಲಮ್ಮನು "ಹೂಂ" ಎಂದಳು. ಅಯ್ಯೋ ನಾನು ಒಪ್ಪಿಕೊಳ್ಳಬಾರದಾಗಿತ್ತು, ಎಂಬ ಭಾವ ತಿರುಗಿ ಬಂದು ಅವಳಿಗೆ ಇನ್ನೂ ಸಂಕಟವಾಯಿತು.

"ಗೌಡರೇ ಇಂದಿನ ಸಂಜೆ ವೇಳೆಗೆ ನಿಮ್ಮ ಮನೆಗೆ ಪಶ್ಚಿಮವಾಗಿ ಆ ದೊಡ್ಡ ಮಾವಿನ ಮರವಿದೆಯಲ್ಲ ಅದರ ಕೆಳಗೆ ಒಂದು ಜೋಪಡಿ ಹಾಕಿಸಿರಿ. ಆ ಜೋಪಡಿಯಲ್ಲಿ ನಿತ್ಯವೂ ದೇವರ ಪೂಜೆ ಮಾಡಿಕೊಂಡು ಒಂದು ತಿಂಗಳು ಇರುತ್ತೇನೆ. ನಿತ್ಯವೂ ನಮ್ಮ ಮಲ್ಲಮ್ಮ ಪೂಜೆಗೆ ಅಣಿ ಮಾಡಲಿ. ಕೆಂಪಮ್ಮ ಗುಡಿಸಿ ಸಾರಿಸಿ ಮಾಡಲಿ. ನೀವೂ ಪೂಜೆಯ ಕಾಲದಲ್ಲಿ ಎದುರಿಗೆ ಇದ್ದು ಪೂಜೆಯನ್ನು ಕಲಿತುಕೊಳ್ಳಿ. ನಿಮ್ಮ ಮನೆಯಲ್ಲಿ ಆ ಕರಿಯ ಹಸು ಇದೆಯಲ್ಲ ಅದರ ಹಾಲೆಲ್ಲ ಎರಡು ಹೊತ್ತೂ ನಮಗೇ ಕೊಡಬೇಕು. ಸಾಧ್ಯವೋ? ಒಪ್ಪಿಗೆಯೋ?"

"ಅಪ್ಪಣೆ"

"ಮತ್ತೊಂದು ಮಾತು. ಈ ರಾಯರ ಚಿಕಿತ್ಸೆ ಇನ್ನೂ ಪೂರ್ಣವಾಗಿಲ್ಲ. ಇನ್ನೊಂದು ಗುಡಿಸಲು ಮಾವಿನ ಮರದ ತೆಂಕಲಿನಲ್ಲಿ ಹಾಕಿಸಿರಿ. ಅಲ್ಲಿ ಹಗಲೊತ್ತು ಇನ್ನೊಂದು ಗಳಿಗೆ ಇವರನ್ನಷ್ಟು ಚಂಡಿಸಬೇಕು. ಏನು ರಾಯರೇ! ತಮಗೆ ಸಮ್ಮತವೋ? ಇನ್ನೂ ಒಂದು ಸಲ ಬಟ್ಟಿ ಒಗೆಯಬೇಕು. ಆಗಬಹುದೋ?"

ರಾಯರಿಗೆ ಬೇಕು ಬೇಡ ಎನ್ನುವುದಕ್ಕೆ ಉಸಿರು ಇತ್ತೇನು? ಕೀಲು ಬೊಂಬೆಯಂತೆ ತಲೆಯಲ್ಲಾಡಿಸಿದರು.

*   *   *   *

ಸಂಜೆ ಐದು ಗಂಟೆಯಿರಬಹುದು. ಸನ್ಯಾಸಿಗಳು ತೋಟಕ್ಕೆ ಬಂದುಬಿಟ್ಟರು. ಗೌಡನೂ ರಾಯರುಗಳೂ ಸಪರಿವಾರರಾಗಿ ಹೋಗಿ ಎದುರುಗೊಂಡು ಕರೆದುಕೊಂಡುಬಂದರು. ಅವರಿಗಾಗಿ ಗೊತ್ತಾಗಿದ್ದ ಗುಡಿಸಿಲಿನ ಬಾಗಿಲಿಗೆ ಬಂದಾಗ, ಮಲ್ಲಮ್ಮನು ಮುಂದೆ ಬಂದು "ಗುರುವೇ, ಪಾದ ತೊಳೀಲೆ?'' ಎಂದಳು. ಸನ್ಯಾಸಿಯು "ಅಗತ್ಯ ವಾಗಿ" ಎಂದು ನಿಂತುಕೊಂಡರು. ಮಲ್ಲಮ್ಮನು ಪಾದಗಳನ್ನು ತೊಳೆದು ಆ ನೀರನ್ನು ಬಿಂದಿಗೆಯಲ್ಲಿ ತುಂಬಿಟ್ಟುಕೊಂಡಳು. ಸ್ವಾಮಿ ಗಳು "ಅದೇಕೆ ಆ ನೀರು?" ಎಂದರು.

"ಮನೆಯಲ್ಲೆಲ್ಲಾ ಪ್ರೋಕ್ಷಣೆ ಮಾಡುತೇನೆ ಗುರುವೇ''

''ಹಾ[illegible] ಮಾಡೆಂದು ನಿನಗೆ ಯಾರು ಹೇಳಿದರು?''

"ತಾವೇ ಬಂದು ಹೇಳಿದಿರಲ್ಲಾ?"

"ಹೌದು. ಅರ್ಥವಾಯಿತೋ ಇಲ್ಲವೋ ಅಂತ ತಿಳಿದುಕೊ ಳ್ಳೋಣ ಎಂದೇ ಕೇಳಿದೆ. ಎಲ್ಲಿ ಮತ್ತೆ? ಹಾಲು ಹಣ್ಣು ಇಟ್ಟಿ ದ್ದೀಯಾ?"

'ಇಕೋ' ಎಂದು ಬಿದಿರುಗೂಡೆ ಮೂಟೆ ಬಡುವಿನ ಮೇಲೆ ಇಟ್ಟಿದ್ದ ಪಂಚಾಮೃತ, ಹಾಲು ತೆಗೆದು ಒಪ್ಪಿಸಿದಳು.

"ಯಾರಿಗೆ ಕೊಡುತ್ತಿದ್ದೀಯೆ? ಮಲ್ಲವ್ವಾ! ನೋಡಿ ಕೊಡು."

ಮಲ್ಲವ್ವನು "ಅಪ್ಪಯ್ಯಾ!" ಎಂದಳು. ಆನಂದದಿಂದ ಉಬ್ಬಿ ಹೋದಳು. ಸುಖದಲ್ಲಿ ಸೊಕ್ಕಿ ಮಾತನಾಡಲಾರಂಭಿಸಿ, "ಅಯ್ಯೋ, ನನ್ನ ಫಕೀರಪ್ಪ, ನನ್ನ ಸೋಮಿ, ನಮ್ಮಪ್ಪನ ಮನೇ ದೇವರಲ್ಲವೇನೋ

ನೀನು? ಅಲ್ಲಿಂದ ಇದುವರೆಗೂ ದರ್ಶನ ಕೊಡದೆ ಮರೆಯಾಗಿದ್ದೆ ಯೇನೋ?" ಎಂದು ಆತನ ಚರಣತಲದಲ್ಲಿ, ತಾನು ಹೆಣ್ಣು, ಎಲ್ಲರ ಎದುರಿಗೂ ಇರುವೆನು ಎಂಬುದನ್ನೂ ಮರೆತು ಬಿದ್ದು ಒದ್ದಾಡಿ, ಆ ಪಾದಗಳಿಗೆ ಮುತ್ತು ಕೊಟ್ಟು, ಪಂಚಾಮೃತವನ್ನು ಸರ್ವಲೋಕ ಮಹೇಶ್ವರನಿಗೇ ಒಪ್ಪಿಸುವಳಂತೆ ಒಪ್ಪಿಸಿದಳು. ಒಂದು ತಟ್ಟೆಯ ಪಂಚಾಮೃತವನ್ನು ಅವಳ ಕೈಯಿಂದ ತುತ್ತು ಹಾಕಿಸಿಕೊಂಡು ತಿಂದು, ಒಂದು ಚೊಂಬಿನ ಹಾಲೂ ಕುಡಿದು, "ಈ ತಿಂಗಳೆಲ್ಲಾ ಹೀಗೇ ಕಣವ್ವಾ!" ಎಂದು ಹೇಳಿದರು. ಆ ಮಾತು ಅವಳೊಬ್ಬಳಿಗೇ ಅರ್ಥವಾದುದು.

ಸ್ವಾಮಿಗಳು ಇನ್ನೂ ಅಷ್ಟು ಹೊತ್ತು ಕಣ್ಮುಚ್ಚಿ ಕುಳಿತಿದ್ದರು. "ಅಂತೂ ರಮೇಶರಾಯರು ಗಟ್ಟಿಗರು. ಭೀಮಸೇನ ಸನ್ಯಾಸಿಯ ದರ್ಶನವನ್ನೂ ಮಾಡಿದರು. ಆದರೆ ಇವೊತ್ತು ಅವರ ಕಡೆಗೆ ತಿರುಗು ವುದಕ್ಕೆ ಅವಕಾಶವಿಲ್ಲ. ಬೆಳಗಿನ ಕೆಲಸ ಅಷ್ಟು ಬಾಕೀ ಇದೆ. ನಾವೂ ನಮ್ಮ ರಾಯರೂ ಆ ಗುಡಿಸಲಿಗೆ ಹೋಗಿ ಬರಬಹುದೋ?" ಎಂದು ಎಲ್ಲರಿಗೂ ಹೇಳಿ, ಪ್ರಾಣೇಶನನ್ನು ಕರೆದುಕೊಂಡು ಆ ಗುಡಿಸಲಿಗೆ ಹೋದರು.

ಅಲ್ಲಿ ಪ್ರಾಣೇಶನಿಗೆ ಒಬ್ಬನೇ ಸ್ವಾಮಿಗಳ ಜೊತೆಯಲ್ಲಿರುವುದಕ್ಕೆ ದಿಗಿಲು. "ರಮೇಶನನ್ನೂ ಕೂಗಲೇನು" ಎಂದನು.

"ಇದು ಕೇವಲ ನಿನ್ನ ಮಾತು. ನಿಮ್ಮ ತಂದೆಯ ವಿಚಾರ ಹೆಚ್ಚಾಗಿ ಬರುತ್ತದೆ. ಅದನ್ನು ಎಲ್ಲರೂ ಕೇಳಬಹುದು ಎಂದರೆ ನನ್ನ ಮಾತಿಲ್ಲ. ನಿನಗೆ ದಿಗಿಲಾಗುತ್ತಿರುವುದೂ ನನಗೆ ಗೊತ್ತು. ದಿಗಿಲಿಗೆ ಕಾರಣವಿಲ್ಲ. ನೀನು ಬೇಕೆಂದರೆ ಯಾರನ್ನು ಬೇಕಾದರೂ ಕರಿ. ಆದರೂ ಒಬ್ಬನೇ ಇದ್ದರೆ ಒಳ್ಳೆಯದು."

ಪ್ರಾಣೇಶನು ಯಾರನ್ನೂ ಕರೆಯಲಿಲ್ಲ.

ಸ್ವಾಮಿಗಳು ಹೇಳಿದರು: "ನಿನಗೆ ನನ್ನ ಗುರುತಿಲ್ಲ. ನನಗಿದೆ.

ನಾನೂ ನಿಮ್ಮ ತಂದೆಯೂ ಒಟ್ಟಿಗೆ ಆಡುತ್ತಿದ್ದವರು. ಮೈಸೂರಲ್ಲಿ ನಿಮ್ಮ ಮನೆಯಿದ್ದುದು ನಿನಗೆ ನೆನಪಿದೆಯಲ್ಲವೆ? ಹಳೆಯ ಅಗ್ರಹಾರ ದಲ್ಲಿ? ಒಂದು ಬೀದಿ ಆಚೆ ನಮ್ಮ ಮನೆ. ನಿಮ್ಮ ತಂದೆಯವರಿಗೂ ನನಗೂ ಬಾಲ್ಯದಲ್ಲಿ ಬಹಳ ಸ್ನೇಹ. ನಿಮ್ಮ ಅಜ್ಜಿ ನನ್ನ ಮೇಲೆ ಬಹಳ ವಿಶ್ವಾಸವಿಟ್ಟುಕೊಂಡಿದ್ದರು. ಆಗಾಗ ತಾಯಿಗೆ ತಾಯಾಗಿ ಉಪಚಾರ ಮಾಡುತ್ತಿದ್ದರು. ಆ ವಿಶ್ವಾಸ ಇವೊತ್ತು ನಿನ್ನನ್ನು ಕಾಪಾಡಿತು."

"ನಡೆದುದೆಲ್ಲ ನನಗೆ ಕನಸಿನ ಹಾಗಾಗಿದೆ. ಏನೂ ಅರ್ಥವಾ ಗಿಲ್ಲ."

"ಅದಕ್ಕೇ ನಿನ್ನನ್ನು ಪ್ರತ್ಯೇಕವಾಗಿ ಕರೆದುಕೊಂಡುಬಂದೆ. ನಿನಗೆ ಹೇಳಬೇಕು ಎಂದೇ ಇಲ್ಲಿಗೆ ಕರೆತಂದುದು. ನಾನು ಹೇಳಿ ನೀನು ಕೇಳಿ ದರೆ ನಿನಗೆ ನಂಬಿಕೆ ಬರದೇಹೋಗಬಹುದು. ನಿನಗೆ ನೋಡಬೇಕು ಎನ್ನುವ ಇಷ್ಟವಿದ್ದರೆ, ಧೈರ್ಯ ಮಾಡಿ ನೋಡು ಒಂದು ಸಿನೀಮಾ. ನೋಡುವುದಕ್ಕೆ ಸಿದ್ಧವಾಗಿದ್ದೀಯಾ?"

"ರಮೇಶನೂ ಇದ್ದುಬಿಡಲಿ."

"ಆಗಬಹುದು. ಎದ್ದು ಹೋಗಬೇಡ. ಇಲ್ಲಿಂದಲೇ ಕರೆ."

ರಮೇಶನು ಬಂದನು. ಬೆಳಕು ಮಂಕಾಗುತ್ತ ಬಂದಿತು. ಹಕ್ಕಿಗಳು ಗೂಡು ಸೇರುವ ಕಾಲ ಹತ್ತಿರ ಬರುತ್ತಿತ್ತು. ಪ್ರಾಣೇಶನು ಕಣ್ಮುಚ್ಚಿ ಕುಳಿತನು. ಅವನ ಮುಚ್ಚಿದ ಕಣ್ಣಮುಂದೆ ಒಂದು ಸಿನೀಮಾ ಷೋ ಆರಂಭವಾಯಿತು.

ತರುಣ ದಂಪತಿಗಳು ಸಂಸಾರ ಮಾಡುತ್ತಿದ್ದಾರೆ. ಅವರಿ ಗೊಬ್ಬ ಮಗನಾಗಿದ್ದಾನೆ. ಅವನು ಬೆಳೆದು ದೊಡ್ಡವನಾದ. ಅವ ನಿಗೂ ಮದುವೆಯಾಗಿದೆ. ಆ ತರುಣನು ತನ್ನ ತಂದೆಯೆಂಬುದನ್ನು ಪ್ರಾಣೇಶನು ಗುರುತಿಸಿದ್ದಾನೆ. ಅವನೂ ಲಾಯರು. ಅವನ ಬಳಿಗೆ ಒಬ್ಬಳು ಹೆಂಗುಸು ಬಂದಿದ್ದಾಳೆ. ಆಕೆಯ ಕೇಸನ್ನು ಗೆದ್ದು ಕೊಡುವು

ದಾಗಿ ಮಾತು ಕೊಡುತ್ತಾನೆ. ಬಂದವಳು ಜಾತಿಯಿಂದ ಸೂಳೆ. ಇಬ್ಬರಿಗೂ ಹೇಗೆಹೇಗೋ ಸಂಬಂಧವಾಗುತ್ತದೆ. ಅವಳದು ಭಾರಿಯ ಆಸ್ತಿ. ಸ್ಥಿರಕ್ಕಿಂತ ಚರವೇ ಹೆಚ್ಚು. ಸ್ಥಿರ ಆಸ್ತಿ ಬರಬೇಕು ಎಂಬ ಜಗಳ. ಕೋರ್ಟಿನಲ್ಲಿ ಗೆದ್ದಿದೆ.

"ಗಂಡು ಆಸ್ತಿಗೆ ಸೋತು ಹೆಣ್ಣಿಗೆ ವಿಷ ಕೊಟ್ಟಿದೆ. ಔಷಧ ಉಪಚಾರ ಮಾಡಿದರೂ ಅವಳು ಬದುಕದೆ ಸತ್ತುಹೋಗುತ್ತಾಳೆ. ಅವಳ ದೇಹದಿಂದ ಇನ್ನೊಂದು ಹಂಜಿನಂತಹ ದ್ರವಮಯ ರೂಪ ಮೇಲಕ್ಕೆ ಎದ್ದಿದೆ. ಅದು ಬಂದು, ತನ್ನನ್ನು ಕೊಂದ ಗಂಡನ್ನು ಎದುರಿಸುತ್ತದೆ. "ನಂಬಿ ಮಗ್ಗುಲಲ್ಲಿ ಮಲಗಿದ್ದವಳನ್ನು ಕೊಂದಿದ್ದೀಯೆ. ಒಂದಕ್ಕೆ ಎರಡಾದರೂ ತಕೊಳದಿದ್ದರೆ ಕೇಳು ಎನ್ನುತ್ತದೆ. ಅವನು ನಗುತ್ತಾನೆ."

"ಕೊನೆಗೊಂದು ದಿನ ಗಂಡು ಒಬ್ಬನೇ ಮಲಗಿದ್ದಾಗ, ಸರಿರಾತ್ರಿಯಲ್ಲಿ ಯಾವಳೋ ಬಗುಕಿ ಹಾಕಿಕೊಂಡಿದ್ದವಳು ಅವನ ಮಂಚದತ್ತ ಹೋಗಿದ್ದಾಳೆ. ಅಲ್ಲಿಯೇ ಎಲ್ಲಿಯೋ ಇದ್ದ ಇನ್ನೊಂದು ಸ್ವರೂಪವು ಅದನ್ನು ತಡೆಯಲು ಹೋಗುತ್ತದೆ. ಎರಡಕ್ಕೂ ಮಾರಾಮಾರಿಯಾಗುತ್ತದೆ. ಮೊದಲನೆಯದಕ್ಕೆ ಎರಡನೆಯದು ಸೋಲುತ್ತದೆ. ಎರಡನೆಯದು "ಹೋಯಿತು, ಹೋಯಿತು, ಯಾರಾದರೂ ಬಿಡಿಸಿಕೊಳ್ಳಿ ಬನ್ನಿ" ಎಂದು ಕೂಗಿಕೊಂಡರೂ ಯಾರೂ ಬರುವುದಿಲ್ಲ. ಹೆಣ್ಣು ಗಂಡನ್ನು ಬೆರೆಯುತ್ತದೆ. ಅವನ ಜೀವವನ್ನು ಹೀರುತ್ತದೆ. ಪೂರ್ಣವಾಗಿ ಅಲ್ಲ, ಮೂರು ಪಾಲು. ಇನ್ನೊಂದು ಪಾಲು ಇದೆ. ಅದು ಬೆಳಗಾದ ಮೇಲೆ ಅಷ್ಟು ಹೊತ್ತು ಅರಿವಿಲ್ಲದ ಮೈಯಲ್ಲಿ ಇದ್ದು ಹೋಗಿಬಿಡುತ್ತದೆ."

"ಅಲ್ಲಿ ಪ್ರಾಣೇಶನು ತಾನೂ ಇದ್ದಾನೆ. ಅವನು ಕರೆದುಕೊಂಡು ಬಂದ ಡಾಕ್ಟರೂ ಅಲ್ಲಿಯೇ ಇದ್ದಾನೆ. ಡಾಕ್ಟರು "ಏನಿ ಫೌಲ್ ಪ್ಲೇ?" ಎಂದು ಗುಟ್ಟಾಗಿ ಕೇಳುತ್ತಾನೆ. ಪ್ರಾಣೇಶನಿಗೆ ಏನು ಹೇಳಬೇಕೋ

ತಿಳಿಯದೆ, ತಬ್ಬಿಬ್ಬಾಗುತ್ತಾನೆ. ಡಾಕ್ಟರನು "ದಿಸ್ ಡೆಡ್ ಈಸ್ ಡ್ಯೂ ನೋಟ್ ಟು ಸೈಕಲಾಜಿಕಲ್ ರೀಸನ್ಸ್ ದ್ಯಾ ಪ್ಯಾಥೋಲಾಜಿಕಲ್, ಐ ಹ್ಯಾವ್ ಎ ವೈಂಡ್ ಟು ಸೆಂಡ್ ದಿ ಬಾಡಿ ಫಾರ್ ಪೋಸ್ಟ್ ಮಾರ್ಟಂ, ಇಫ್ ಯೂ ಹ್ಯಾವ್ ನೋ ಅಬ್‌ಜಕ್ಷ." ಎನ್ನುತ್ತಾನೆ. ಪ್ರಾಣೇಶನು ಯಾಕೋ ಹೆದರಿ, ಬೇಡ ಎನ್ನುತ್ತಾನೆ. ಡಾಕ್ಟರು "ದೆ, ಐ ಷಲ್ ಡಿಕ್ಲೇರ್ ದಟ್ ಡೆತ್ ಈಸ್ ಡ್ಯೂ ಟು ಹಾರ್ಟ್ ಫೇಯಲ್ಯೂರ್." ಎಂದು ಹೇಳಿ ಹೊರಟುಹೋಗುತ್ತಾನೆ.

ಮುಂದೆ ಎರಡನೆಯ ರೂಪವು ಅಳುತ್ತಾ ಈ ಸನ್ಯಾಸಿಯ ಬಳಿಗೆ ಹೋಗಿದೆ. ಅಲ್ಲಿ ಅತ್ತುಕೊಂಡಿದೆ. "ಮಗನನ್ನು ಮುರಿದುಕೊಂಡಳು. ಮೊಮ್ಮಗನನ್ನೂ ಮುರಿದುಕೊಳ್ಳುವಳಂತೆ, ಅವನನ್ನಾದರೂ ಕಾಪಾಡು" ಎಂದು ಬೇಡಿಕೊಳ್ಳುತ್ತದೆ. ಸನ್ಯಾಸಿಯು ಒಪ್ಪಿ ಬಂದು ಬಾಬಾಬುಡನ್ ಬೆಟ್ಟಗಳಲ್ಲಿ ನಿಲ್ಲುತ್ತಾನೆ.

ಆ ಪ್ರಾರಬ್ಧವು ಸಮಯ ಕಾದಿದೆ. ಪ್ರಾಣೇಶನು ಹೋದಹೋದ ಕಡೆಯಲ್ಲೆಲ್ಲಾ ಹೋಗುತ್ತದೆ. ದಿನವೂ ಬೆನ್ನು ಹಿಂದೆಯೇ ಇದೆ. ಆದರೂ ಆ ಎರಡನೆಯದು ಕಾದಿರುವುದರಿಂದ ಮೊದಲನೆಯದಕ್ಕೆ ಅವಕಾಶವು ಸಿಕ್ಕಿಲ್ಲ. ಇವನು ಗೌಡರ ಜೊತೆಯಲ್ಲಿ ತೋಟಕ್ಕೆ ಹೊರಡುತ್ತಾನೆ. ಆಗ ಆ ಮೊದಲನೆಯದು ಎಲ್ಲಿಯೋ ಅದೃಶ್ಯವಾಗುತ್ತದೆ. ಆ ದಿನ ಮಧ್ಯಾಹ್ನವೇ ಅದು ಬಂದು ಇವನನ್ನು ಹಿಡಿಯುತ್ತದೆ. ರಾತ್ರಿ ಬಂದು ಇವನನ್ನು ಸೇರಿ ಅರಾಣೆ ಪಾಲು ತಿಂದಿದೆ.

ಮರುದಿನ ಇವನು ಗವಿಯೊಳಕ್ಕೆ ಬರುವುದಕ್ಕೆ ಅದು ಬಿಡುವುದಿಲ್ಲ. ಆದರೂ ಎರಡನೆಯದು ಬಲವಂತವಾಗಿ ಎಳೆದುಕೊಂಡುಹೋಗಿ ಕೂರಿಸಿದೆ. ಸನ್ಯಾಸಿಯನ್ನು ಕೇಳಿಕೊಳ್ಳುತ್ತದೆ. ಸನ್ಯಾಸಿಯು ಆ ಪ್ರಾರ್ಥನೆಯನ್ನು ತನ್ನ ದೈವಕ್ಕೆ ಒಪ್ಪಿಸಿದ್ದಾನೆ. ಆ ದೈವವು ಶೂಲಹಾಕಿ ಇರಿದು ಅದನ್ನು ಪ್ರಾಣೇಶನ ದೇಹದಿಂದ ಕಿತ್ತು ಎಸೆದಿದೆ. ಅದು ಮತ್ತೆ ಬರಲು ಪ್ರಯತ್ನಿಸುತ್ತಿದೆ. ಆದರೂ ಅದಕ್ಕೆ ಮೊದಲ

ಶಕ್ತಿ ಇಲ್ಲ. ಪ್ರಾಣ ತೆಗೆಯುವುದಿಲ್ಲವೆಂದು ಮಾತು ಕೊಟ್ಟ ಮೇಲೆ ಅವನ್ನು ಬಿಟ್ಟರೆ ಅದು ಬಂದು ಮತ್ತೆ ಪ್ರಾಣೇಶನ ದೇಹದ ಮಗ್ಗುಲಲ್ಲಿಯೇ ನಿಲ್ಲುತ್ತದೆ. ಎರಡನೆಯ ನೆರಳೂ ಇದೆ. ಅದು ಈಗ ಮೊದಲನೆಯ ನೆರಳನ್ನು ತಡೆಯಬಲ್ಲುದು. "ಆದರೇನು? ಇದು ಮನೋಬುದ್ಧಿಗಳ ಮೇಲೆ ಪ್ರಭಾವ ಬೀರುವುದು. ಇವನ್ನು ತಡೆಯಲಾರೆ." ಎಂದು ಮೊದಲನೆಯ ನೆರಳು ಒದ್ದಾಡುತ್ತದೆ.

ಅಲ್ಲಿಗೆ ಸಿನೀಮಾ ಷೋ ನಿಂತಿತು. ಕಣ್ಣಿಗೆ ಕಂಡುದನ್ನು ಪ್ರಾಣೇಶನು ಸಣ್ಣ ಮಾತಿನಲ್ಲಿ ಹೇಳುತ್ತಿದ್ದಾನೆ. ಸ್ವಾಮಿಗಳು ಸರಿ ಸರಿ ಎನ್ನುತ್ತಿದ್ದಾರೆ. ಎಲ್ಲಾ ಮುಗಿಯಿತು. ಸ್ವಾಮಿಗಳು ಸಣ್ಣ ದನಿಯಲ್ಲಿ ಹೇಳಿದರು: "ನೀವಿಬ್ಬರೂ ದೊಡ್ಡ ಲಾಯರಿಗಳು. ನಿಮಗೆ ನಾವು ಒಂದು ಬುದ್ಧಿವಾದ ಹೇಳಬಹುದೋ?"

ಸ್ವಸ್ಥಾನದಲ್ಲಿದ್ದರೆ ಅವರು ಏನು ಹೇಳುತ್ತಿದ್ದರೋ? ಇಲ್ಲಿ ಅವರ ಪ್ರಭಾವಕ್ಕೆ ಸಿಕ್ಕಿ ಆಗಬಹುದು ಎಂದರು. ಸ್ವಾಮಿಗಳೂ ವಿಶ್ವಾಸದಿಂದಲೇ ಹೇಳಿದರು: "ನಿಮ್ಮಿಬ್ಬರಿಗೂ ದೇವರು ಬೇಕಾದ ಹಾಗೆ ಕೊಟ್ಟಿದ್ದಾನೆ. ಇನ್ನು ಮುಂದೆ ಪ್ರಾಕ್ಟೀಸ್ ಬಿಟ್ಟುಬಿಡಿ."

"ಪ್ರಾಕ್ಟೀಸ್ ಬಿಟ್ಟು ಏನು ಮಾಡುವುದು?"

"ನೀವು ಲೌಕಿಕರು. ಲೋಕಸೇವೆ ಮಾಡಿಕೊಂಡಿರಿ."

"ಸ್ವಾಮಿಗಳೇ, ಈಗ ಒಬ್ಬರನ್ನು ಕಂಡರೆ ಒಬ್ಬರಿಗೆ ಆಗುವುದಿಲ್ಲ. ಒಬ್ಬರಲ್ಲಿ ಒಬ್ಬರಿಗೆ ನಂಬಿಕೆಯಿಲ್ಲ. ಈಗ ಒಬ್ಬರನ್ನು ಒಬ್ಬರು ಆಶ್ರಯಿಸುವುದು, ಜತೆ ಸೇರುವುದು ಲೋಭದಿಂದ. ಬಾಯಲ್ಲಿ ಲೋಕೋದ್ಧಾರ ಎಂದು ಹೇಳುತ್ತ ಕಾರ್ಯದಲ್ಲಿ ಆತ್ಮೋಪಕಾರ ಮಾಡಿಕೊಳ್ಳುವ ಸಮಾಜ ಸೇವಕರಾಗುವುದಕ್ಕಿಂತ ತೆಪ್ಪಗಿರುವುದು ಲೇಸು."

"ಹೋಗಲಿ, ಸುಖಜೀವನ ಮಾಡಿಕೊಂಡಿರಿ."

"ಮಾಡುವುದಕ್ಕೆ ಕೆಲಸವಿಲ್ಲದೆ ಕೂತಿರುವುದು ಹೇಗೆ ಸ್ವಾಮಿಗಳೇ?"

"ನಾನು ಇನ್ನು ಮುಂದೆ ಏನೂ ಹೇಳುವುದಿಲ್ಲ. ನೀವು ಸುಖವಾಗಿರಬೇಕು ಎಂದರೆ ಲಾಯರ್‌ಗಿರಿಯನ್ನು ಬಿಟ್ಟುಬಿಡಿ. ಹೇಗೆ ಹೇಗೆ ನೋಡಿದರೂ ನೀವು ಇನ್ನು ಲಾಯರಾಗಿರುವ ಕಾಲವೂ ಬಹಳ ಕಾಲವಿಲ್ಲ. ನಿಮ್ಮ ಇಷ್ಟ."

ಸ್ವಾಮಿಗಳು ಎದ್ದರು. ಅವರೂ ಜೊತೆಯಲ್ಲಿ ಎದ್ದು ಈಚೆಗೆ ಬಂದರು.

*   *

ಮರುದಿನ ರಮೇಶನು ಎದ್ದು ಪ್ರಾಣೇಶನನ್ನು ನೋಡುವುದಕ್ಕೆ ಹೋದನು. ಪ್ರಾಣೇಶನು ಬಹುಮಟ್ಟಿಗೆ ಸ್ವಸ್ಥನಾಗಿದ್ದನು. ರಾತ್ರಿ ಚೆನ್ನಾಗಿ ನಿದ್ದೆ ಬಂದು ಹಿಂದಿನ ದಿನದ ನಿಶ್ಶಕ್ತಿಯು ಎಷ್ಟೋ ಕಳೆದಿತ್ತು. ಆ ವೇಳೆಗೇ ಗೌಡರೂ ಸ್ನಾನಾದಿಗಳನ್ನು ಮುಗಿಸಿಕೊಂಡು ಬಂದರು. ಅವನೂ ಪ್ರಾಣೇಶನ ಯೋಗಕ್ಷೇಮ ವಿಚಾರಿಸಿ "ಈ ದಿನವೂ ಸ್ವಾಮಿಗಳು ಪೂಜೆ ಮಾಡುತ್ತಾರೆ. ಬರುತ್ತೀರಷ್ಟೆ?" ಎಂದು ಕೇಳಿದನು.

ಇಬ್ಬರು ಲಾಯರುಗಳಿಗೂ ಸ್ವಾಮಿಗಳನ್ನು ಕಂಡರೆ ಭಕ್ತಿಯಿಲ್ಲದಿದ್ದರೂ ಭಯ ಬಂದಿತ್ತು. "ಸ್ನಾನ ಮಾಡಿಕೊಂಡು ಬರುತ್ತೇವೆ." ಎಂದು ಇಬ್ಬರೂ ಒಪ್ಪಿಕೊಂಡರು. ಇಬ್ಬರಿಗೂ ಸ್ವಾಮಿಗಳ ಬಳಿ ಹೋಗುವುದಕ್ಕೆ ಮುಂಚೆ ತಿಂಡಿ ತಿನ್ನುವುದಕ್ಕೆ ಏನೋ ದಿಗಿಲು. ಬರಿಯ ಕಾಫಿ ತೆಗೆದುಕೊಂಡು ಹೋದರು.

ಸ್ವಾಮಿಗಳ ದೇವರ ಪೂಜೆ ಇಂದು ಬೆಳೆಯಿತು. ಎಲ್ಲಾ ಮುಗಿಯುವ ವೇಳೆಗೆ ಸುಮಾರು ಹತ್ತು ಗಂಟೆಯಾಯಿತು. ಎಲ್ಲರಿಗೂ ತೀರ್ಥ ಪ್ರಸಾದಗಳನ್ನು ಕೊಟ್ಟರು. ಎಲ್ಲರೂ ನೋಡುತ್ತಿದ್ದ ಹಾಗೆಯೇ ಸಾಲಿಗ್ರಾಮವನ್ನು ಒರೆಸಿ, ಬಲಮೂಗಿನಲ್ಲಿಟ್ಟು ಸೇದಿದರು. ಅದು ಒಳಕ್ಕೆ ಹೊರಟುಹೋಯಿತು.

ರಮೇಶನಿಗೆ ಅದನ್ನು ಕಂಡು, ಅದು ಹೇಗೆ ಸಾಧ್ಯ ಕೇಳಬೇಕು, ಎನ್ನಿಸಿತು. ಆದರೆ ಅದೇಕೋ ಸಂಕೋಚ. ಸ್ವಾಮಿಗಳೇ ಅದನ್ನು ನೋಡಿ, "ರಾಯರಿಗೆ ಪವಾಡಗಳಲ್ಲಿ ನಂಬಿಕೆಯಿಲ್ಲ. ಈ ಸಾಲಿಗ್ರಾಮ ಬ್ರೆಯಿನ್‌ನಲ್ಲಿ ಎಲ್ಲಿ ಇರುತ್ತದೆ? ಬೇಕಾದಾಗ ಬರುವುದು ಹೇಗೆ? ಎಂದು ಏನೇನೋ ಯೋಚನೆಗಳು ಬರುತ್ತಿವೆ. ಅಲ್ಲವೆ? ಆಗಲಿ. ಈವೊತ್ತು ಮಧ್ಯಾಹ್ನ ಮೂರು ಗಂಟೆಯ ವೇಳೆಗೆ ಬನ್ನಿ. ಗುರುದೇವ ನೀವು ಕೇಳಿದ್ದೆಲ್ಲ ಹೇಳುತ್ತಾನೆ." ಎಂದು ನಗುನಗುತ್ತಾ ಹೇಳಿದರು. ನಿನ್ನೆಯ ದಿನದ ಕಾಲರುದ್ರನಿಗೂ ಈ ದಿನದ ಪರಮಶಂಕರನಿಗೂ ಎಷ್ಟು ವ್ಯತ್ಯಾಸ!

ಮಧ್ಯಾಹ್ನ ಮೂರು ಗಂಟೆಯ ವೇಳೆಗೆ ಮತ್ತೆ ಸನ್ಯಾಸಿಗಳ ದರ್ಶನಕ್ಕೆ ಎಲ್ಲರೂ ಬಂದರು. ಪ್ರಾಣೇಶನಿಗೂ ರಮೇಶನಿಗೂ ಮೊದಲೇ ಒಪ್ಪಂದವಾಗಿದೆ. ಏನು ಕೇಳುವುದಿದ್ದರೂ ರಮೇಶನೇ ಕೇಳಬೇಕು ಎಂದು ಸ್ವಾಮಿಗಳಿಗೆ ಪ್ರಣಾಮ ಮಾಡಿ ಎಲ್ಲರೂ ಕುಳಿತರು. ಸ್ವಾಮಿಗಳೇ ಆರಂಭ ಮಾಡಿದರು. ಯಾರಿಗೂ ಪ್ರಶ್ನೆ ಮಾಡುವ ಕಷ್ಟವಿರಲಿಲ್ಲ.

"ನೋಡಿ, ಆಧುನಿಕರ ಚಿತ್ತವೃತ್ತಿ ಬಹಳ ವಿಚಿತ್ರವಾಗಿದೆ. ಹಿಂದಿನ ವೈಭವದ ಮೇಲೆ ಉಪನ್ಯಾಸ ಕೊಡಿ ಎನ್ನಿ; ಸೊಗಸಾಗಿ ಒಂದು ಗಂಟೆಯಲ್ಲ ಒಂದು ದಿನವೆಲ್ಲ ಬೇಕಾದರೂ ಮಾತನಾಡುತ್ತಾರೆ. ಭರತಖಂಡದ ಐಶ್ವರ್ಯ, ಭರತಖಂಡದ ವೇದಾಂತ, ಅದೂ ಇದೂ ಬೇಕಾದ ಹಾಗೆ ಹೇಳುತ್ತಾರೆ. ಆದರೆ ದಿನ ದಿನದ ನಡೆನುಡಿಗಳಲ್ಲಿ ಪಾಶ್ಚಾತ್ಯರ ಶಿಷ್ಯರ ಹಾಗೆ ಅಲ್ಲ. ಪಾಶ್ಚಾತ್ಯರಿಗಿಂತ ಪಾಶ್ಚಾತ್ಯರಾಗಿ ನಡೆದುಕೊಳ್ಳುತ್ತಾರೆ. ನೀವಿಬ್ಬರೂ ಯೂನಿವರ್ಸಿಟಿಗೆ ಹೋಗಿ ಬಂದವರು. ಡಬ್ಬಲ್ ಗ್ರಾಜುಯೇಟ್ಸ್. ನಿಮಗೆ ದೇವರು ವಿದ್ಯಾ ಬುದ್ಧಿ ಎಲ್ಲಾ ಕೊಟ್ಟಿದ್ದಾನೆ. ಆದರೂ ನಮ್ಮ ದೇಶದ ಆತ್ಮ ಯಾವುದು? ಅದನ್ನು ನಾವು ತಿಳಿದುಕೊಂಡು ಅದನ್ನು ಆಚಾರದಲ್ಲಿ ತರೋಣ ಎಂದು ಯಾವಾಗಲಾದರೂ ಅನಿಸಿದೆಯೇ? ಆ ಪ್ರಯತ್ನ ಒಂದಿಷ್ಟಾದರೂ

ಮಾಡಿದ್ದೀರಾ? ಈ ದೇಹವೇ ಆತ್ಮವಲ್ಲ; ದೇಹದಲ್ಲಿರುವ ಆತ್ಮ ಬೇರೆ ಎಂಬ ವಿಚಾರ ನೀವು ಕಾಣಿರಾ? ಆದರೆ ಆ ಮಾತು ನಿಜವೇ ಸುಳ್ಳೇ ಎಂದು ಯಾವಾಗಲಾದರೂ ವಿಚಾರ ಮಾಡಿರುವಿರಾ? ಮಾತೆತ್ತಿದರೆ ದಿಸ್ ಈಸ್ ದಿ ಏಜ್ ಆಫ್ ಸೈನ್ಸ್ ಎನ್ನುತ್ತೀರಿ. ಆ ಸೈನ್ಸ್‌ನಲ್ಲಿ ತಾನೇ ನಿಮಗೆ ಗೊತ್ತಿರುವುದೆಷ್ಟು? ನಿಮಗೆ ಗೊತ್ತಿರುವ ಸೈನ್ಸ್ ಎಲ್ಲಾ ಸುಮಾರು ೨೦–೩೦ ವರ್ಷಗಳ ಹಿಂದಿನ ಹಳಸಲು. ಅದು ಎಲ್ಲಿ ಹುಟ್ಟಿತೋ ಅಲ್ಲಿಯೇ ಕರ್ಡೆಮ್ನ್ ಆಗಿ ಸಮಾಧಿಯಾಗಿರುವ ತತ್ವಗಳು. ನೀವು ಯೂನಿವರ್ಸಿಟಿಯ ವಿದ್ವಾಂಸರು ಯಾವೊತ್ತಾದರೂ "ನಮ್ಮ ದೇಶ ಋಷಿಗಳ ದೇಶ. ಆ ಋಷಿಗಳು ತ್ರಿಕಾಲ ಜ್ಞಾನ ಸಂಪನ್ನರಂತೆ. ಅವರು ಹೇಳಿರುವುದು ಏನೋ ನೋಡೋಣ. ಸಿದ್ಧಾಂತವಾಗಿ ಅಲ್ಲದಿದ್ದರೆ ಹೋಗಲಿ. ಪೂರ್ವಪಕ್ಷವಾಗಿಯಾದರೂ ಅಂಗೀಕರಿ ಸೋಣ" ಎನ್ನುವಷ್ಟು ಮಟ್ಟಿಗಾದರೂ ಔದಾರ್ಯ ತೋರಿಸಿದ್ದೀರಾ? ನಿಮಗೆಲ್ಲಾ ನಾವು ಆಕ್ಸ್‌ಫರ್ಡ್ ಕೇಂಬ್ರಿಜ್ ಮಕ್ಕಳು ಎಂದುಕೊಳ್ಳು ವುದರಲ್ಲಿ ಇರುವ ಹೆಮ್ಮೆ ಋಷಿ ಸಂತಾನ ಎಂದುಕೊಳ್ಳುವುದರಲ್ಲಿ ಇದೆಯೇ? ವಿದ್ಯಾವಂತರಾದ ನಿಮಗೇ ಹೀಗೆ ಇದ್ದರೆ ನಿಮ್ಮನ್ನು ನೋಡಿ ಕಲಿಯುವ ಅವಿದ್ಯಾವಂತರ ಸ್ಥಿತಿಯೇನು? ಭೂಮಿಯನ್ನು ಉತ್ತು ಬಿತ್ತಿ ಬೆಳೆ ಮಾಡಿದವರಿಗಿಂತ ಹೆಚ್ಚಾಗಿ ಕುಡುಗೋಲು ತೆಗೆದುಕೊಂಡು ಹೊರಡುತ್ತೀರಿ. ನೆಲದಲ್ಲಿ ಕಾಡು ಬೆಳೆದಿರುವುದು ನೋಡಿ "ಇದು ನಮ್ಮ ಭಾಗ್ಯ!" ಎಂದು ಮೂಗೆಳೆಯುತ್ತೀರಿ. ಬಡವ ರನ್ನು ಬಿಡಿ. ಹೊಟ್ಟೆಗೆ ಬಟ್ಟೆಗೆ ಸಂಪಾದಿಸಿಕೊಳ್ಳುವುದರಲ್ಲಿ ಅವರಿಗೆ ಸಾಕಾಗಿಹೋಗುತ್ತದೆ. ಶ್ರೀಮಂತರು ಎನ್ನುವರನ್ನು ನೋಡಿ. ಯಾರಿಗಾದರೂ ಜ್ಞಾನವನ್ನು ಆರ್ಜಿಸೋಣ ಎಂಬ ಬುದ್ಧಿಯಿದೆ ಯೇನು? ಈ ಮಾತೆತ್ತಿದರೆ "ಈಗ ಪುಸ್ತಕಗಳ ಕಾಲ. ಗುರುವಿನ ಪಾದ ಮೂಲದಲ್ಲಿ ಕುಳಿತು ಕಲಿಯುವ ದಾಸ್ಯದ ಕಾಲ ಕಳೆಯಿತು." ಎನ್ನುತ್ತೀರಿ. ಪುಸ್ತಕಗಳನ್ನಾದರೂ ಓದುತ್ತಿದ್ದೀರಾ? ನಿಮ್ಮ ರೇಡಿಯೋ ಹಾಡಬೇಕು. ಅದು ಹಾಡಬೇಕಾದರೆ, ಎ. ಐ. ಆರ್. ನಲ್ಲಿ

ಯಾರೋ ಹಾಡಬೇಕು. ಅವರನ್ನು ಹುಡುಕಿ ತಂದು ಹಾಡಿಸಿ ಅದನ್ನು ಬ್ರಾಡ್‌ಕ್ಯಾಸ್ಟ್ ಮಾಡಿದರಲ್ಲವೆ ನಿಮ್ಮ ಮನೆಯಲ್ಲಿ ನೀವು ಕೇಳುವುದು? ಹಾಗೆ ಪೂರ್ವಿಕರ, ಆಧುನಿಕರ ಜ್ಞಾನ ಭಂಡಾರವನ್ನು ಆರ್ಜಿಸಿ, ಊರ್ಜಿಸಿ, ಜನಸಾಮಾನ್ಯಕ್ಕೆ ಹರಡುವ ಕೇಂದ್ರಗಳು ಎಷ್ಟಿವೆ? ಆ ಕೇಂದ್ರಗಳಿಂದ ಪ್ರಯೋಜನವನ್ನು ಪಡೆಯುವುದಕ್ಕೆ ಎಷ್ಟು ಮಂದಿ ಸಿದ್ಧರಾಗಿದ್ದೀರಿ? ಅಷ್ಟೇನು? ವಿಚಾರಿಗಳು ಈಗ ಹಗಲಿನ ನಕ್ಷತ್ರಗಳಾಗಿದ್ದಾರೆ. ಅವರು ಹೆಚ್ಚುವ ವರೆಗೂ ನಮ್ಮ ದೇಶಕ್ಕೆ ಮುಕ್ತಿಯಿಲ್ಲ."

ರಮೇಶನಿಗೆ ಅದಷ್ಟು ತನ್ನನ್ನೇ ಕುರಿತು ಹೇಳುತ್ತಿದ್ದಾರೆ ಎನ್ನಿಸಿತು. ಅವರ ಮಾತಿನಲ್ಲಿ ತಾನು ಅಲ್ಲಲ್ಲಿ ಉಪನ್ಯಾಸಕನಾಗಿ, ಅಧ್ಯಕ್ಷನಾಗಿ ಆಡಿದ ಮಾತುಗಳೇ ಇರುವುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಅದರಲ್ಲೂ "ಪುಸ್ತಕಗಳ ಕಾಲ, ಗುರುದಾಸ್ಯದ ಕಾಲಕಳೆಯಿತು" ಎಂದು ತಾನು ವೈಖರಿಯಿಂದ ಹೇಳಿ ಯಾರೂ ಆಡದಿದ್ದ ಮಾತು ಏನು ಆಡಿದೆನೆಂದು ಜಂಭ ಕೊಚ್ಚಿದ್ದುದು ಅವನಿಗೆ ಮರೆತಿರಲಿಲ್ಲ. ಹೀಗೆ ತನ್ನ ಮಾತೇ ತನಗೇ ಹೇಳುತ್ತಿರುವವನ ಹತ್ತಿರ ತಾನಿನ್ನೇನು ಹೇಳಬೇಕು? ಇದುವರೆಗೆ ರಮೇಶನು ಎಲ್ಲಿಯೂ ಸೋಲು ಒಪ್ಪಿಕೊಂಡಿರಲಿಲ್ಲ. ಇಲ್ಲಿ ಒಂಟಿ ಬಟ್ಟೆಯ ಸನ್ಯಾಸಿಯ ಮುಂದೆ ತಾನೂ ಏನೂ ಅಲ್ಲ: ಅದೊಂದು ಬೆಟ್ಟ; ತಾನೊಂದು ನೊರಜುಗಲ್ಲು ಎನ್ನಿಸುತ್ತಿದೆ. ಏನು ಮಾತನಾಡುವುದು?

ಆದರೂ ಪ್ರಯತ್ನ ಮಾಡಿದ. ತಾನು ಭಾರಿಯ ಲಾಯರ್, ಮಾತುಗಾರನೆಂದು ಹೆಸರಾದವನು. ಇಲ್ಲಿ ಸುಮ್ಮನಾದರೆ ಹೇಗೆ? ಅದೂ ಸಾವಿರಾರು ಕೊಟ್ಟಿರುವ, ಕೊಡುವುದಕ್ಕೆ ಸಿದ್ಧವಾಗಿರುವ, ದೊಡ್ಡ ಗಿರಾಕಿಯು ಎದುರು? ಆದರಿಂದ ಮಾತನಾಡಿದನು.

"ತಾವು ಹೇಳುವುದು ನಿಜ ಆಯಿತು. ಸ್ವಾಮಿಗಳೇ! ಈಗಿನವರು ಹೈತುಕರು, ರೇಷನಲಿಸ್ಟ್ಸ್. ರೀಸನ್ ಈಸ್ ದಿ ಗಾಡ್ ಅಂಡ್ ಗೈಡ್ ಆಫ್ ದಿಸ್ ಏಜ್. ಈ ಏಜಿನಲ್ಲಿ ನಾವು ಹಿಂದಿನ ಸ್ಟೋರೀಸ್ ಆಫ್ ಮಿರೆಕಲ್ ಓದಿಕೊಂಡು ಕುಳಿತಿರುವುದು ನ್ಯಾಯವೇ ಸ್ವಾಮಿಗಳೇ?"

“ಹೋ! ಮಿರೆಕಲ್ಸ್ ವಿಚಾರವೇ? ಹೌದು. ಬೆಳಿಗ್ಗೆಯೇ ತಮಗೆ ಅನುಮಾನ ಬಂದಿತ್ತು. ಅಲ್ಲವೇ? ಹೂ, ಕೇಳಿ. ಈಗ ನಾವು ಸಾಲಗ್ರಾಮ ಇಟ್ಟುಕೊಂಡಿರುವುದು ಒಂದು ಮಿರೆಕಲ್. ಯಾರ ದೃಷ್ಟಿಯಲ್ಲಿ? ಅಜ್ಞರ ದೃಷ್ಟಿಯಲ್ಲಿ. ನಮ್ಮ ಮಲ್ಲಮ್ಮ ನಮ್ಮನ್ನು ಮಹಾತ್ಮರು ಎನ್ನುವುದು ಏತರಿಂದ? ಆಕೆಯೇನೋ ನೋಡಿದರು. ನಮ್ಮ ಗುರುದೇವ, ಆ ಮಹಾಪುರುಷ, ದಯಾನಿಧಿ, ದತ್ತಾತ್ರೇಯರು ಆಕೆಗೆ ನಿನ್ನೆ ದರ್ಶನ ಕೊಟ್ಟರು. ಆಕೆಗೆ ನಂಬಿಕೆ ಬಂತು. ಆಕೆ ನಿಮಗೆ ಸಕಾರಣವಾಗಿ ವಚನವಾಗಿ ತನ್ನ ಅನುಭವವನ್ನು ಹೇಳಲಾರಳು. ಅದರಿಂದ ಆಕೆ ನಿಮ್ಮ ದೃಷ್ಟಿಯಲ್ಲಿ ಅಜ್ಞಳು. ಅವಳ ಅನುಭವ ನಿಮ್ಮ ದೃಷ್ಟಿಯಲ್ಲಿ ಮಿರೆಕಲ್. ಈಗ ಅವಳ ಅನುಭವ ಹೆಚ್ಚೋ? ನಿಮ್ಮ ತರ್ಕ ಪೂರ್ವಕ ವಿವರಣ, ರೀಸನ್ಡ್ ಎಕ್ಸ್‌ಪ್ಲನೇಷನ್ ಹೆಚ್ಚೋ? ಅದೂ ಬಿಡಿ. ನಿಮ್ಮ ಜೊತೆಜೊತೆ ಲಾಯರ್ ಪ್ರಾಣೇಶರಾಯರ ಅನುಭವ ಹೇಳಿ. ಇಲ್ಲಿ ನಡೆದದ್ದೆಲ್ಲ ಸುಳ್ಳು ಅನ್ನುವಿರಾ? ನಿಜವೆನ್ನುವಿರಾ? ಈ ವಿಚಾರ ದಲ್ಲಿ ನಿಮ್ಮ ಗಾಡ್ ಅಂಡ್ ಗೈಡ್ ಆಫ್ ದಿಸ್ ಏಜ್ ಏನು ಹೇಳುತ್ತದೆ? ಸತ್ಯವನ್ನು ದೂರದ ನಕ್ಷತ್ರದಂತೆ ನಿಮ್ಮ ರೀಸ್ನ್ ಗುರ್ತಿಸಬಲ್ಲುದು. ಅಲ್ಲಿಗೆ ಕರೆದುಕೊಂಡು ಹೋಗುವುದು ಅದರಿಂದ ಸಾಧ್ಯವಿಲ್ಲ. ಹಾಗೆಂದು ಅದನ್ನು ಬಿಡಬೇಕು ಎಂದಲ್ಲ. ಹಳ್ಳಿಗೆ ಹೋಗುವವರು ರೈಲು, ಬಸ್, ಗಾಡಿ, ಮೂರರಲ್ಲೂ ಪ್ರಯಾಣಮಾಡಿ ಊರು ಸೇರುವಂತೆ, ನೀವೂ ರೀಸ್ನ್, ಫೆಯಿತ್, ವಿಚಾರ, ಶ್ರದ್ಧೆ, ಎರಡೂ ಹಿಡಿಯಬೇಕು.”

“ಮಿರೆಕಲ್ ವಿಚಾರವೇ ತೆಗೆದುಕೊಳ್ಳಿ. ಯಾವುದನ್ನು ನಾವು ಪವಾಡವೆನ್ನುವುದು? ಸಾಮಾನ್ಯಬುದ್ಧಿಗೆ ಗೋಚರವಾಗದ ವಿಷಯ ವನ್ನು ಅಲ್ಲವೆ ನಾವು ಪವಾಡ ಅನ್ನುವುದು? ಆಯಿತು. ನನ್ನೆದುರಿಗೆ ಕುಳಿತಿರುವ ಸುಮಾರು ಈ ನೂರ ಅರುವತ್ತು ಪೌಂಡು ತೂಕದ ವ್ಯಕ್ತಿ ಯನ್ನು ಈಗ ಕಂಡ ನಾನು ಇದು ತಾಯಿ ಬಸುರಿನಲ್ಲಿತ್ತು, ಎಂದು ನಂಬುವುದು ಹೇಗೆ? ಇಲ್ಲದಿದ್ದರೆ ಈ ವ್ಯಕ್ತಿ ಆಕಾಶದಿಂದ ಬಿತ್ತು; ಇದೊಂದು ಮಿರೆಕಲ್; ಪವಾಡ ಎನ್ನಬೇಕು. ಇಲ್ಲದಿದ್ದರೆ, ಎಲ್ಲರಿಗೂ

ಗೊತ್ತಿರುವ ಜ್ಞಾನವನ್ನು ನಾನೂ ಅವಲಂಬಿಸಿ ಈ ದೇಹವೂ ತಾಯಿ ಬಸುರಿಂದ ಬಂದು ಮಗುವಾಗಿ ಹುಡುಗನಾಗಿ ತರುಣನಾಗಿ ಬೆಳೆದು ಈಗ ಹೀಗಾಗಿದೆ ಎನ್ನಬೇಕು. ಈ ಜ್ಞಾನವಿದ್ದವನಿಗೆ, ಅಂದರೆ ದೇಹವು ಕ್ರಮಕ್ರಮವಾಗಿ ಬೆಳೆಯುತ್ತದೆ ಎಂದು ಗೊತ್ತಿರುವನಿಗೆ ಇದು ಮಿರೆಕಲ್ ಅಲ್ಲ. ಆ ಜ್ಞಾನವಿಲ್ಲದಿದ್ದವನಿಗೆ ಅದೊಂದು ಪವಾಡ ಆಯಿತು. ಆ ಜ್ಞಾನ ಪ್ರತಿಯೊಬ್ಬನಿಗೂ ಬರುವುದು ಹೇಗೆ? ಇನ್ನೊಬ್ಬ ರಿಂದ ಅಲ್ಲವೆ? ಸಮೂಹದಲ್ಲಿರುವಾಗ ಅಲ್ಲಿ ಮತ್ತೊಂದು ದೇಹವು ಹುಟ್ಟುವುದನ್ನು ನೋಡಿ ಅದರಂತೆಯೇ ತಾನೂ ಹುಟ್ಟುವನೆಂದು ಕೊಂಡು ಅಲ್ಲವೇ ಆ ಜ್ಞಾನವನ್ನು ತಾನು ಪಡೆದುಕೊಳ್ಳುವುದು? ಹೀಗೆ ಪ್ರತಿಯೊಬ್ಬರಿಗೂ ತನ್ನ ತನ್ನ ಸಮೂಹದ ಜ್ಞಾನ ಭಂಡಾರ ಲಭ್ಯವಾಗಿದ್ದರೆ, ಆಯಾ ಗುಂಪಿನಲ್ಲಿರುವ ಸಂಸ್ಕೃತಿ ತಿಳಿದಿದ್ದರೆ, ಅಲ್ಲಿ ಸಾಮಾನ್ಯವೇ ಕಾಣುವುದು. ಸಾಮಾನ್ಯದಲ್ಲಿ ವಿಶೇಷವನ್ನು ಕಂಡರೆ ಆಗ ಅದು ಅದ್ಭುತ.

"ಅಥವಾ ಈ ಅದ್ಭುತ ನಿಮ್ಮಲ್ಲಿ ನಡೆಯುತ್ತಿಲ್ಲವೆಂದುಕೊಂಡಿರು ವಿರಾ? ಈ ಜಗತ್ತು, ನಮ್ಮ ಬಾಳು, ಇದೇ ಒಂದು ಪವಾಡವಲ್ಲವೆ? ಈ ಜಗತ್ತು ಬುಗುರಿಯಂತೆ ತಿರುಗುತ್ತಿರುವುದು ಎನ್ನುವರಲ್ಲ? ಅದು ಸುಳ್ಳೆ? ಅಪ್ಪಾಲೆ ತಿಪ್ಪಾಲೆ ತಿರುಗಿದರೆ ತಲೆ ಸುತ್ತುವದಲ್ಲಾ, ಗಂಟೆಗೆ ಎಷ್ಟೋ ನೂರ ಮೈಲಿ ತಿರುಗುವ ಈ ಜಗತ್ತಿನಲ್ಲಿ ನಾವು ಸಹಜವಾಗಿ ಇರುವೆವು ಎಂದರೆ ಅದು ಅದ್ಭುತವಲ್ಲವೆ? ನೀವು ನೆಲ ನೋಡುತ್ತಿರು ವಿರಿ. ಥಟ್ಟನೆ ತಲೆಯೆತ್ತಿ ಎಷ್ಟೋ ಲಕ್ಷ ಕೋಟಿ ಮೈಲುಗಳ ದೂರದಲ್ಲಿ ರುವ ಸೂರ್ಯನನ್ನು ಕಾಣುವಿರಲ್ಲ? ಅದು ಅದ್ಭುತವಲ್ಲವೆ? ನಿಮ್ಮ ಕಣ್ಣಿಗೆ ಕಂಡ ಸೂರ್ಯನು ಇಲ್ಲಿ ನಿಮ್ಮ ಕಣ್ಣಮುಂದೆ ಬಂದನೋ? ಅಥವಾ ನಿಮ್ಮ ಕಣ್ಣು ಸೂರ್ಯನನ್ನು ಇದ್ದಲ್ಲಿಯೇ ಕಂಡಿತೋ? ಇದನ್ನು ಯಾವ ರೀಸನ್ ವಿಮರ್ಶಿಸಿ ಹೇಳಬಲ್ಲುದು? ಇದು ಮಿರೆಕಲ್ ಅಲ್ಲವೆ?"

ರಮೇಶನು ಕಣ್ಣು ಕಣ್ಣು ಬಿಡುತ್ತ ಕೂತಿದ್ದನು. ಸನ್ಯಾಸಿಗಳು

ನಕ್ಕು ಹೇಳಿದರು, "ನೋಡಿದಿರಾ? ನಿಮ್ಮಂಥಾ ಬುದ್ಧಿವಂತರೂ ಎಷ್ಟು
ಬೇಗ ಸಿಕ್ಕಿಕೊಳ್ಳುವರು. ಆದರಿಂದ ತರ್ಕವನ್ನು ಚಾಕು ಕತ್ತರಿಯ
ಹಾಗೆ ಉಪಯೋಗಿಸಿಕೊಂಡು ಕೃತಾರ್ಥರಾಗಿ. ಅದೇ ಸರ್ವವಲ್ಲ.
ಅದೂ ಸಾಧನಗಳಲ್ಲೊಂದು. ಏಕೈಕ ಸಾಧನವಲ್ಲ. ಇನ್ನು ನಮ್ಮ ವಿಷಯ
ತೆಗೆದುಕೊಳ್ಳೋಣ. ಈ ಸಾಲಗ್ರಾಮವನ್ನು ಮೊದಲು ಮೊದಲು ನಶ್ಯ
ವನ್ನು ಸೇದುವ ಹಾಗೆ ಒಳಗೆ ಸೇದಿಕೊಳ್ಳುವುದನ್ನು ನಮ್ಮ ಗುರುಗಳು
ಕಲಿಸಿದರು. ಹಾಲು ಕುಡಿಯುತ್ತಿದ್ದ ಮಗುವು ರೊಟ್ಟಿಯನ್ನು ತಿನ್ನುವ
ಹುಡುಗನಾದಾಗ ಹೊಟ್ಟೆಯು ರೊಟ್ಟಿಯ ತುಂಡುಗಳನ್ನು ಇಟ್ಟುಕೊಳ್ಳ
ಬಲ್ಲ ಸಾಮರ್ಥ್ಯವನ್ನು ಸಂಪಾದಿಸಿಕೊಳ್ಳುವಂತೆ, ದೇಹವೂ ಅಭ್ಯಾಸ
ದಿಂದ ಏನು ಬೇಕಾದರೂ ಮಾಡಬಲ್ಲ ಸಾಮರ್ಥ್ಯವನ್ನು ಪಡೆಯುವುದು.
ಈಗ ಈ ಸಾಲಗ್ರಾಮವು ಹುಬ್ಬಿನ ಮಧ್ಯದಲ್ಲಿರುವ ಆಜ್ಞಾಚಕ್ರದ ಮಾರ್ಗ
ವಾಗಿ ಹೋಗಿ ಬಲಗಡೆಯ ಮೇಲೆ ಇರುವುದು. ಕಪಿಗಳು ತಿಂದ
ತಿಂಡಿಯು ದವಡೆಯಲ್ಲಿರುವಂತೆ, ಹಸುವು ತಿಂದುದೆಲ್ಲ ಮಲಕು ಆಗುವ
ವರೆಗೂ ಮೊದಲನೆಯ ಹೊಟ್ಟೆಯಲ್ಲಿರುವಂತೆ, ಇದೂ ನೆತ್ತಿಯಲ್ಲಿರುವುದು.
ಇವೆಲ್ಲ ಸಿದ್ಧಿಗಳು. ಆದರೊಳಗೂ ಇದಂತೂ ಕ್ಷುದ್ರಸಿದ್ಧಿ. ಗುರುಗಳ
ಅಪ್ಪಣೆ. ನಮಗೆ ಇದು ಬೇಕಿಲ್ಲದಿದ್ದರೂ ಇಟ್ಟುಕೊಂಡಿದ್ದೇವೆ.
ಕೊನೆಯದಾಗಿ ಇಷ್ಟು ಹೇಳಿ ಮುಗಿಸೋಣ. ಈ ಮನುಷ್ಯ
ದೇಹದಲ್ಲಿ ಇರುವ ಜೀವ ತಾನು ಬೇರೆ ಎಂದು ತಿಳಿದುಕೊಂಡು, ಈ
ದೇಹವನ್ನು ಒಂದು ಕ್ರಮದಲ್ಲಿ ಉಪಯೋಗಿಸುವುದಾದರೆ, ಪಕ್ಷಿಯಂತೆ
ಹಾರಬಹುದು. ಮೀನಿನಂತೆ ನೀರಿನಲ್ಲಿ ಇದ್ದುಬಿಡಬಹುದು. ಅದೃಶ್ಯ
ನಾಗಬಹುದು. ಆನೆಯೊಡನೆ ಹೋರಾಡುವ ಬಲಿಷ್ಠನಾಗಬಹುದು.
ಅಷ್ಟೇನು? ಹೂವು ಅರಳಿದಾಗ ಅದರ ಪರಿಮಳವು ಹರಡುವಂತೆ, ಮನು
ಷ್ಯನು ಈ ದೇಹದಲ್ಲಿಯೇ ಕುಳಿತು ಏನೇನೋ ಸಿದ್ಧಿಗಳನ್ನು ತೋರಿಸ
ಬಹುದು. ಒಟ್ಟಿನಲ್ಲಿ ನಮ್ಮಲ್ಲಿಯೂ ಸೈನ್ಸ್ ಇದೆ. ಅದೂ ಕೂಡ
ನಮ್ಮ ವೇದಾಂತದಂತೆಯೇ ದೇಹ ನಾನಲ್ಲ ಎಂದ ಮೇಲೆ ಆರಂಭಿಸು
ತ್ತದೆ. ಅದರಿಂದ ನಮ್ಮಲ್ಲಿ ಸೈನ್ಸ್ ವೇದಾಂತ ಎರಡಕ್ಕೂ ದೇಹದಲ್ಲಿರುವ

ಜೇಹುಯನ್ನು ಗುರುತಿಸುವುದೇ ಮೂಲ, ಅದೇ ಆರಂಭ. ಮನುಷ್ಯನೆಂದರೆ ದೇಹ ಮಾತ್ರವಲ್ಲ. ದೇಹ ಮತ್ತು ಇನ್ನೂ ಅಷ್ಟು. ಅದು ತಿಳಿದರೆ ಯಾವುದೂ ಅದ್ಭುತವಲ್ಲ. ಎಲ್ಲವೂ ಕ್ರಮವರಿತು ನಡೆಯುವ ಸಾಮಾನ್ಯವೇ ಆಗುವುದು. ಅದುವರೆಗೂ ಎಲ್ಲಾ ಅದ್ಭುತ, ಎಲ್ಲಾ ಪವಾಡ, ಎಲ್ಲಾ ಮಿರೆಕಲ್. ನಮಗೆ ಇದು ಬೇಕಿಲ್ಲದಿದ್ದರೂ ಇಟ್ಟುಕೊಂಡಿದ್ದೇವೆ. ಇವೊತ್ತು ಬಹಳ ಮಾತಾಯಿತು. ಇಲ್ಲಿಗೆ ಬಿಡೋಣ." ಇನ್ನೇನಾದರೂ ಮಾತು ನಡೆಯಲಿ.

ರಮೇಶನು ಏನೇನೋ ಕೇಳಬೇಕೆಂದಿದ್ದನು. ಯಾವುದೂ ನೆನಪಾಗಲಿಲ್ಲ. ಎಳೆಯಲಾಗದ ಭಾರವನ್ನು ಎಳೆಯಬೇಕಾದಾಗ ಹಠಮಾಡಿ ಬುಸುಗುಟ್ಟುತ್ತಾ ಮುನ್ನುಗ್ಗುವ ಎತ್ತಿನಂತೆ, ಏನೇನೋ ನೆನೆದುಕೊಂಡು ಏನೋ ಕೇಳಬೇಕೆಂದು ಹೊರಟು, ಕೊನೆಗೆ "ನಾವು ಏನು ಮಾಡಿದರೆ ಕೃತಾರ್ಥರಾಗಬಹುದೋ ಅಪ್ಪಣೆಯಾಗಲಿ" ಎಂದು ಕೈಮುಗಿದನು.

ಸನ್ಯಾಸಿಗಳಿಗೆ ರಮೇಶನ ಒದ್ದಾಟವು ಗೊತ್ತಾಯಿತು. ಸಣ್ಣ ನಗೆ ನಕ್ಕು ಹೇಳಿದರು: "ಒಬ್ಬರನ್ನೊಬ್ಬರು ನಂಬಿ, ಒಬ್ಬರನ್ನೊಬ್ಬರು ಗೌರವಿಸುವುದನ್ನು ಕಲಿತುಕೊಳ್ಳಿ, ಎಲ್ಲ ಸರಿಹೋಗುತ್ತದೆ. ನಿಮ್ಮ ವಿಚಾರವಾಗಿ ನಾನು ಹೇಳಿದ ಮಾತು ನಿಮಗೆ ಹಿಡಿಯುವುದಿಲ್ಲ. ಆದರೂ ಕೇಳಿದರಾಗಿ ಹೇಳುತ್ತೇನೆ. ನೀವು ಈಗ ಎರಡು ಪಾಪ ಮಾಡುತ್ತಿದ್ದೀರಿ. ಜೊತೆಗೆ ಹಣದ ಸಂಪಾದನೆಯೊಂದೇ ಮುಖ್ಯವೆಂದು ನಂಬಿ ಎತ್ತಕಡೆಯಿಂದ ಹೇಗೆ ಬಂದರೇನು ಎಂದು ಹೊರಟಿದ್ದೀರಿ. ಅದು ಬಿಟ್ಟು ಧರ್ಮವಾಗಿ ನ್ಯಾಯವಾಗಿ ವರ್ತಿಸಿ. ಉಹುಂ. ನಮ್ಮ ಮಾತಿಗೆ ಅಡ್ಡ ಮಾತಾಡಬೇಡಿ. ನೀವು ಕೇಳಿದಿರಿ, ನಾನು ಹೇಳಿದೆ. ಹೀಗೆ ಮಾಡಿದರೆ ಒಳ್ಳೆಯದು. ಇಲ್ಲದಿದ್ದರೆ ಅದರ ಫಲ ನೀವೇ ಅನುಭವಿಸುತ್ತೀರಿ. ಅದರಿಂದ ಅಲ್ಲಿಗೆ ಬಿಡೋಣ. ನಮ್ಮ ಮಾತು ಸರಿಯಾಗಿದ್ದರೆ, ಇವೊತ್ತಿಲ್ಲದಿದ್ದರೆ ನಾಳೆಯಾದರೂ ನಿಮಗೆ ಅರ್ಥವಾಗಬೇಕು. ಆಗುತ್ತದೆ. ಆದರೆ ಆ ವೇಳೆಗೆ ನಿಮ್ಮ ಭಾಷೆಯಲ್ಲಿ ಹೇಳಬೇಕಾದರೆ ಟೂ ಲೇಟ್."

ರಮೇಶನು ಸಿಟ್ಟುಸಿರು ಬಿಟ್ಟು ನುಂಗಲಾರದ ತುತ್ತು ಎಂದುಕೊಳ್ಳು ವಸಂತೆ ಏನೋ ಆಯಾಸದಿಂದ ಸುಮ್ಮನಾದನು. ಪ್ರಾಣೇಶನು ಸುಮ್ಮ ನಿದ್ದರೆ ಚೆನ್ನಿಲ್ಲ ಎಂದು ಮಾತನಾಡುವುದಕ್ಕೆ ಪ್ರಯತ್ನಿಸಿದನು; ಸನ್ಯಾಸಿ ಗಳು ಕಣ್ಣು ಮುಚ್ಚಿ ಕುಳಿತಿದ್ದವರು ಒಂದು ಗಳಿಗೆಯಾದ ಮೇಲೆ ಕಣ್ಣು ಬಿಟ್ಟರು. ಅವರ ಕಣ್ಣು ನೇರವಾಗಿ ಪ್ರಾಣೇಶನ ಮೇಲೇ ಬಿತ್ತು. ಅದೇ ತನಗೆ ಅಪ್ಪಣೆಯೆಂದು ಹೇಳಿದನು: "ನಿನ್ನೆಯ ದಿನ ಶಿವಪೂಜೆ ಮಾಡ ಬೇಕೆಂದು ಅಪ್ಪಣೆಯಾಯಿತು."

"ಹೌದು. ನಾವು ಮಾಡುವ ಕೆಲಸದಲ್ಲೆಲ್ಲ ಯಾವುದಾದರೊಂದು ವಿಧದಲ್ಲಿ ಅಷ್ಟೋ ಇಷ್ಟೋ ಪಾಪ ಬರುತ್ತಲೇ ಇರುತ್ತದೆ. ಅದರಿಂದ ಹಿಂದಿನ ಪಾಪ, ಮುಂದಿನ ಪಾಪ, ಎರಡೂ ಕಳೆದುಕೊಳ್ಳುವುದಕ್ಕೆ ಸಾಧನವೆಂದು ಹಿರಿಯರು ತಪಸ್ಸು ಮಾಡಬೇಕು ಎನ್ನುತ್ತಾರೆ. ಆ ತಪಸ್ಸಾಧನಗಳಲ್ಲಿ ಪೂಜೆಯೂ ಒಂದು. ಅದನ್ನು ಮಾಡಿ ಕೃತಾರ್ಥ ರಾಗಿ."

ಗೌಡನು ಕೈಮುಗಿದುಕೊಂಡು "ಅಪ್ಪಣೆಯಾದರೆ........" ಎಂದು ಕೇಳಿದನು. ಸನ್ಯಾಸಿಗಳು "ಹೂಂ" ಎಂದರು. ಗೌಡನು ಕೇಳಿದನು: "ಪಾಪ ಬರುತ್ತಲೇ ಇದೆ ಅಂದಮೇಲೆ ಪೂಜೆ ಮಾಡಿದರೆ ಫಲವೇನು?"

ಒಂದು ಸಣ್ಣ ನಗೆ ನಕ್ಕು ಹೇಳಿದರು: "ಪೂಜೆ ನಿಮ್ಮ ಸ್ನಾನದ ಹಾಗೆ. ದಿನದಿನವೂ ಮೈ ಕೊಳೆಯುತ್ತಲೇ ಇದೆಯೆಂದು ಸ್ನಾನ ಬಿಡುವಿ ರೇನು? ಸೋಪು ಹಾಕಿ ಮೈ ತೊಳೆದದ್ದೂ ತೊಳೆದದ್ದೇ! ಹಾಗೇ, ಮನಸ್ಸನ್ನೂ ತೊಳೆಯಬಲ್ಲಿರಾದರೆ ಗೆದ್ದಿರಿ. ಇಲ್ಲಿಗೆ ಬಿಡೋಣ. ಇವೊ ತ್ತಿಗೆ ಸಾಕು. ನಾವು ಇಷ್ಟು ಮಾತಾಡಿ ಬಹು ವರ್ಷವಾಯಿತು. ಮೌನ ದಲ್ಲಿ ಸುಖ ಕಂಡವರಿಗೆ ಮಾತು ಅಷ್ಟು ಪ್ರಿಯವಲ್ಲ" ಎಂದು ಮೈ ಮುರಿದರು.

* * * *

ಆ ದಿನ ರಾತ್ರಿ ಊಟವಾದ ಮೇಲೆ ಪ್ರಾಣೇಶನೂ ರಮೇಶನೂ ಬಿಸಿಲುಮಚ್ಚಿನಲ್ಲಿ ಕುಳಿತಿದ್ದಾರೆ. ಗೌಡನೂ ಹುರಿಗಾಳು, ಹುರುಳಿಯ ಹಪ್ಪಳ, ಒಂದು ಸೀಸೆ ಜೇನು, ಹಣ್ಣು ಒಂದು ತಟ್ಟೆಯ ತುಂಬಾ ತುಂಬಿ ಕೊಂಡು ಬಂದು ಮೇಜಿನ ಮೇಲಿಟ್ಟನು. ಮೂವರೂ ಮಾತನಾಡದೆ ಒಂದು ಗಳಿಗೆ ಏನೋ ವಿಮನಸ್ಕರಾಗಿ ಕುಳಿತಿದ್ದರು.

ಗೌಡನೇ ಮಾತು ಮೊದಲುಮಾಡಿದನು: "ಏನು ರಾಯರೇ! ನಮ್ಮ ಗುರುಗಳು ಹ್ಯಾಗಿದ್ದಾರೆ?"

ರಮೇಶನಿಗೆ ಪ್ರಾಣೇಶನು ಮಾತನಾಡಲೆಂದು ಮನಸ್ಸು. ಅದರಿಂದ ಸುಮ್ಮನಿದ್ದನು. ಪ್ರಾಣೇಶನು ಪ್ರಶ್ನಕ್ಕೆ ಉತ್ತರವಿಲ್ಲವಿದ್ದರೆ ಹೇಗೆ ಎಂದು ಮಾತನಾಡಿದನು. "ಅವರು ಯಾವುದೋ ಲೋಕದವರು ಎನ್ನುವ ಹಾಗಿದೆ. ಅಂತೂ ನಮ್ಮ ಲೋಕವಲ್ಲ. ನಮಗೆ ಅರ್ಥವಾಗುವ ಜನ ವಲ್ಲ. ಏನಾದರೂ ಆಗಲಿ, ಇಂಥವರ ದರ್ಶನ ಮಾಡುವುದೇ ಒಂದು ಅನುಭವ. ನೀವು ನಮಗೆ ಒಂದು ರೀತಿಯಲ್ಲಿ ಉಪಕಾರ ಮಾಡಿದಿರಿ. ಇವರು ನಿಮಗೆ ಹೇಗೆ ಸಿಕ್ಕಿದರು? ನೀವು ನಿಜವಾಗಿಯೂ ಅದೃಷ್ಟ ವಂತರು."

"ಅವೊತ್ತು ನಾನು ನಿಮಗೆ ಎಲ್ಲಾ ಹೇಳಲಿಲ್ಲ. ನೀವು ಓದಿದ ಜನ, ಲಾಯರ್‌ಗಳು. ಪಾಯಿಂಟ್ ಮೇಲೆ ಪಾಯಿಂಟ್ ಹಾಕಿ ಉರುಳಿಸಿ ಬಿಡೋರು. ನಿಮ್ಮ ಹತ್ತಿರ ನಿಜ ಹೇಳಿದರೆ ನಡೆಯೋಲ್ಲ ಅಂತ ನಿಮಗೆ ಒಪ್ಪಿಗೆಯಾಗೋವು ಎರಡು ಮಾತು ಹೇಳಿದೆ ಅಷ್ಟೆ! ಈಗ ನಿಜ ನಿಮಗೂ ಗೊತ್ತಾಗದೆ. ಅದರಿಂದ ಹೇಳಿಯೇಬಿಡೋಣ. ಆ ಹಾಳು ಪಾಪ ಕಳೆದುಹೋಗಲಿ."

"ನೀವು ಗೆದ್ದರಲ್ಲಾ ಆ ಕೇಸು ನಿಜ, ಸುಳ್ಳಲ್ಲ. ಕರಿಯ ಅನ್ನೋ ಆಳು ನಮ್ಮಲ್ಲಿದ್ದ. ಅವನು ಮಲೆಯಾಳಕ್ಕೆ ಹೋಗಿ ಮಂತ್ರಗಿಂತ್ರ ಕಲಿತು ಬಂದಿದ್ದವ. ಅವನೇ ನಮ್ಮ ತೋಟಗೀಟಕ್ಕೆಲ್ಲಾ ಕಟ್ಟು ಮಾಡಿ ದ್ದವ. ಇದುವರೆಗೂ ನಮ್ಮಲ್ಲಿ ಒಂದು ತೆಂಗಿನಕಾಯಿ, ಬಾಳೇಗೊನೆ

ಕೂಡ ಹೋಗಿಲ್ಲ. ಇವನಿಗೆ ಅಲ್ಲಿಯೋಳೇ ಒಬ್ಬಳು ಸೂಳೆ. ಅವಳನ್ನೇ ಹೆಂಡಿತೀ ಅಂತ ಹೇಳೋನು. ನಮಗೇನು ಅಂತ ನಾನೂ ಇದ್ದುಬಿಟ್ಟೆ. ಈ ಕಟ್ಟುಗಳೆಲ್ಲ ಹನ್ನೆರಡು ವರ್ಷಕ್ಕೆ ಒಂದು ಸಲ ಮತ್ತೆ ಮಾಡಬೇಕು. ಹೋದವರ್ಷ ಹೊಸ ಕಟ್ಟು ಕಟ್ಟಬೇಕು. ಕಟ್ಟು ಅಂದೆ. ಈ ಸಲ ನನಗೆ ವರ್ಷಕ್ಕೆ ಸಾವಿರ ರೂಪಾಯಿ ಕೊಡಬೇಕು ಎಂದ. ಆ ಕೇಳಿದ್ದರಲ್ಲಿ ಬಲು ಸೊಕ್ಕಿತ್ತು. ನನಗೆ ಬಹಳ ಕೋಪ ಬಂತು. ಇರಲಿ ಎಂದು ಎಲ್ಲಾ ನುಂಗಿಕೊಂಡು ಆಗಲಿ ಎಂದು ಒಪ್ಪಿಕೊಂಡೆ. ಇದಾದ ಒಂದು ತಿಂಗಳಿಗೆ ಅವನ ಹೆಂಡಿತಿ ಜಗಳ ಆಡಿಕೊಂಡು ಹೊರಟುಹೋದಳು. ಅವಳು ಇರುವ ವರೆಗೂ ಅವನ ಕುಡಿತ ಒಂದು ಹಿಡಿತದಲ್ಲಿತ್ತು. ಅವಳು ಹೊರಟುಹೋಗುತ್ತಲೂ ಅವನ ಕುಡಿತ ಹಿಡಿತ ತಪ್ಪಿಹೋಯಿತು. ಯಾವಾಗಲೂ ನಿಷಾನೇ! ಯಾರನ್ನು ಕಂಡರೂ ಬಾಯಿಗೆ ಬಂದ ಮಾತು. ನಾನೂ ಬಹಳ ತಡೆದೆ. ಒಂದು ದಿನ ನಾನು ಈ ರಾಯರು ಇರೋ ರೂಮಿನಲ್ಲಿ ಇದೇನೆ. ಮ್ಯಾನೇಜರು ಅಳುತಾ ಬಂದರು: "ಕರಿಯ ಇವೊತ್ತು ನಮ್ಮ ಮನೇ ನುಗ್ಗಿ ಹೆಂಗಸರ ಮೇಲೆ ಬೀಳೋಕೆ ಹೋದ. ನಾಕೈದು ಜನ ಸೇರಿ ಹೊರಕ್ಕೆ ನೂಕಿದೆವು. ಮಾಟ ಮಾಡಿ ನಿಮ್ಮನ್ನೆಲ್ಲ ಮಟ್ಟ ಹಾಕುತ್ತೇನೆ ಅಂತ ಕೂತಿದ್ದಾನೆ" ಅಂದರು. ನಾನು ಸಿಂಗನ್ನ ಕಳುಹಿಸಿ ಕರೆಸಿಕೊಂಡೆ. ನಿಷಾದಲ್ಲಿ "ಎಲ್ಲಿ ಗೌಡನೋ? ಹಾಗೆ, ಹೀಗೆ" ಎಂದು ಬಾಯಿ ಹಿಡಿಸಲಾರದ ಮಾತೆಲ್ಲ ಆಡಿದ. ಕೊನೆಗೆ "ನಿನಗೆ ಮಾತ್ರ ಇಬ್ಬರು ಹೆಂಡರು ಬೇಕು. ನನಗೆ ಒಬ್ಬಳೂ ಬೇಡವೋ? ನಿನ್ನ ಧರ್ಮದ ಹೆಂಡಿತಿ ಬೇಡ. ಆ ಕೂಡಿಕೆ ಅವಳನ್ನ ಕೊಡೋ" ಅನ್ನೋದೆ? ಭೋ ಕೋಪ ಬಂತು, ಒದ್ದುಬಿಟ್ಟೆ. ಝಾಡಿಸಿ ಒದ್ದು ಒದ್ದೆ. ಕಿಬ್ಬೊಟ್ಟೆಗೆ ಏಟು ಬಿತ್ತು, ಸತ್ತ. ಅವನೀಗ ದೈಯ ವಾಗಿ ಹೋಗಿದಾನೆ. ಅವನು ನಮ್ಮ ಕಿರಿಯ ಹೆಂಡಿತಿ ಕಣ್ಣಿಗೆ ಕಾಣೋದು 'ನಿನ್ನ ಗೌಡನ್ನ ಮುರಿಕೋತೀನೋ ಇಲ್ಲವೋ?' ಅನ್ನೋದು. ಮ್ಯಾನೇಜರ್ ಕಣ್ಣಿಗೆ ಕಾಣೋದು, ಅವನ್ನ ಬಯ್ಯೋದು. ಹೀಗೆ ಶುರು ಆಗಿಹೋಯಿತು."

"ಇದೊಂದಕ್ಕೂ ಹೆದರದಿದ್ದವಳು ನನ್ನ ಹಿರೀ ಹೆಂಡತಿ. ಅವ ರಪ್ಪನ ಮನೆಯವರು ಗಿರೀ ಭಕ್ತರು. ಅವರು ಬಹಳ ನಡೆಕೊಳ್ಳೋದು. ಅವಳು ನನಗೆ ಬೆಂಗಾವಲಾಗಿ ಹೋದಳು. ಅವಳು ಜೊತೆಯಲ್ಲಿ ಇಲ್ಲದೆ ತೋಟ ಸುತ್ತೋಕೆ ಹೊರಟರೆ ಯಾರೋ ಜೊತೇಲಿ ಬಂದ ಹಾಗೆ ಆಗೋದು. ತಿರುಗಿ ನೋಡಿದರೆ ಏನೂ ಇಲ್ಲ."

"ಪಾಪ, ಆ ಜೀವ ನನಗಾಗಿ ಬಹಳ ಒದ್ದಾಡಿತು. ಸೋವಿ, ನಂಬಿತೀರೋ ಇಲ್ಲವೋ? ಒಂದು ವಾರ ದೇವರ ಮುಂದೆ ಉಪವಾಸ ಮಲಗಿಬಿಡೋದಾ? ಆಗ ಕನಸಿನಲ್ಲಿ ಅವಳಿಗೆ ಅವರಪ್ಪನ ಮನೆ ದೇವರು ಗಿರಿಯ ಫಕೀರಪ್ಪ ಕಾಣಿಸಿಕೊಂಡು, ಇನ್ನು ಕೆಲವು ದಿನಕ್ಕೆ ನನ್ನ ಭಕ್ತ ಒಬ್ಬ ಸನ್ಯಾಸಿ ಬರುತಾನೆ. ಅವನಿಗೆ ಭಕ್ತಿಯಾಗಿ ನಡಕೊ, ಅವನು ಕಾಯುತಾನೆ ಎಂದು ಹೇಳಿದಂಗೆ ಆಯಿತು. ಅಂದಿನಿಂದ ಸುತ್ತಮುತ್ತ ಯಾರು ಸನ್ಯಾಸಿಗಳು ಬಂದಿದ್ದಾರೆ, ಯಾರಿಲ್ಲ ಅಂತ ಹುಡುಕೋಕೆ ಷುರು. ಕೊನೆಗೆ ಆರು ತಿಂಗಳ ಹಿಂದೆ ಇವರು ಬಂದು ಗವಿ ಸೇರಿದ್ದಾರೆ. ಆ ದಿನ ಕನಸು. "ಆ ಗವಿಯಲ್ಲಿ ಬಂದು ಇಳಿದಿದ್ದಾನೆ. ನಾಳೆ ಶುಕ್ರ ವಾರ, ಹೋಗಬೇಡ. ನಾಳಿದ್ದು ಬೆಳಗೆದ್ದು ಹಣ್ಣು, ಕಾಯಿ, ಹೂವು, ಹಾಲು ತಕೊಂಡು ಹೋಗು" ಅಂತ ಅವಳಿಗೆ ಅಪ್ಪಣೆ ಆಗಿದೆ. ಬೆಳ ಗೆದ್ದು ಹೇಳಿದಳು. ಸರಿ, ಹಾಗೆಯೇ ಶನಿವಾರ ಅವಳೂ ನಾನೂ ಹೋದೆವು. ಆ ಸನ್ಯಾಸಿ ಅವಳನ್ನು ನೋಡುತ್ತಿದ್ದ ಹಾಗೆಯೇ ಮಗ ಳನ್ನು ಕಂಡ ತಂದೆ ಹಾಗೆ "ಬಲು ನೊಂದೆಯಾ ಅವ್ವ! ದೇವರಿದ್ದಾನೆ. ನಿನ್ನ ತಾಳಿ ಕೀಳೋಕೆ ಬಿಡೋಲ್ಲ" ಅಂದರು. ನಾವಿಬ್ಬರೂ ಅವರ ಕಾಲು ಕಟ್ಟಿಕೊಂಡು ಅತ್ತುಬುಟ್ವೀ. ಏನೋ ನಮ್ಮ ದೇವರ ಕಂಡಂಗೆ ಆಗಿ ಹೋಯಿತು.

"ಈ ಕೇಸಿನಲ್ಲಿ ನೀವು ಕೂಡ ಮದರಾಸ್ ಲಾಯರ್ ತರಬೇಕು ಅಂದುಕೊಳ್ಳಲಿಲ್ಲವಾ? ಆಗ ಇವರೇ 'ಇರಲಿ ಬಿಡು. ಆದರೆ ಅವರು ಕೇಳಿದಷ್ಟು ದುಡ್ಡು ಕೊಟ್ಟುಬಿಡು.' ಅಂದರು. ಅದರ ಮೇಲೆ ನಾನೂ

ನಿಮಗೆ ಎಷ್ಟಾದರೂ ತೆಗೆದುಕೊಳ್ಳಿ ಎಂದು ಸೈನ್ ಮಾಡಿ ಚೆಕ್ ಕೊಟ್ಟು ಬಂದುದು."

"ಈಗ ಇವರು ಬಂದಮೇಲೆ ನಾನು ಬಹಳ ಬದಲಾಯಿಸಿ ಹೋದೆ ಸೋಮಿ. ಆಳುಕಾಳಿಗೆಲ್ಲ ಈಗ ಏನು ಸ್ವರ್ಗ ಮಾಡಿಬಿಟ್ಟಿದ್ದೀನಿ. ಮ್ಯಾನೇಜರಿಗೆ ಸಂಬಳ ಡಬಲ್ ಮಾಡಿದ್ದೀನಿ. ನೀವು ಬಂದ ಮೇಲೆ ಕೇಳಿ, ಇವರಿಗೆಲ್ಲಾ ಇನ್‌ಷ್ಯೂರೆನ್ಸ್ ಕೂಡ ಮಾಡಿಸೋಣ ಅಂತ ಇದ್ದೀನಿ. ಆದರೆ, ನೋಡಿ, ಈ ಆಳುಮಕ್ಕಳು ಬುದ್ಧಿ ಏನು ಹೇಳಲಿ, ಒಂದು ಒಪ್ಪೊತ್ತಿಗಿದ್ದರೆ, ಅವೊತ್ತು ಕೆಲಸ ಮಾಡೋಲ್ಲ. ಅದು ನನಗೆ ದಿಗಿಲು. ಇವರಿಗೆ ಕೊಂಚ ತಂಪು ಮಾಡಿದರೆ, ನಮ್ಮ ಕೆಲಸಕ್ಕೇ ಚಕ್ಕರ್. ಏನು ಮಾಡೋದು ಹೇಳಿ."

"ಅದಕ್ಕೇನು ಗೌಡರೆ, ದಿನಗೂಲಿ ಹೆಚ್ಚುಮಾಡಿ."

"ಇಲ್ಲ ಲಾಯರೆ, ಯೋಚನೆ ಮಾಡಿ, ಈಗೀಗ ನಮ್ಮಂಗೇ ಅವರು ಅಂತಾ ತೋರುತಾ ಅದೆ. ನಮಗೆ ಮುಪ್ಪಿನ ಕಾಲಕ್ಕೆ ನಿರಾಳವಾಗಿ ಇರಬೇಕು" ಅನ್ನಿಸೋ ಹಾಗೆ ಈ ದುಡಿಯೋ ಮಕ್ಕಳಿಗೂ ಪಾಪ, ಕೊನೆಗಾಲಕ್ಕೆ ಏನಾದರೂ ಒದಗೋಹಾಗೆ ಮಾಡಬೇಕು. ದಿನಗೂಲಿ ಹೆಚ್ಚಿಸಿದರೂ ಆಗೊಲ್ಲ. ಈಗ ನಿಮಗೆಲ್ಲ ಬ್ಯಾಂಕಿನವರು ಸ್ಟಾಂಡಿಗ್ ಫೀಸೂ ಕೊಟ್ಟು ಕೇಸು ಕೇಸಿಗೂ ಫೀಸ್ ಕೊಡೋಲ್ಲವಾ? ಹಾಗೆ ಒಂದು ಸಿಸ್ಟಂ ಬೇಕು. ನಾನೇ ಮಾಡೋಣ ಅಂದರೆ, ಮಿಕ್ಕ ತೋಟದವರೆಲ್ಲ ಏನೆಂದುಕೊಳ್ಳುತ್ತಾರೋ ಅಂತ ಅದು ಬೇರೆ! ಅಂತೂ ಏನಾದರೂ ಹೊಸದು ಮಾಡಬೇಕು. ಇಲ್ಲದಿದ್ದರೆ ಬದುಕೋಹಾಗಿಲ್ಲ."

"ಆಯಿತು. ಸಂನ್ಯಾಸಿಗಳದು ಹೇಳಿ. ಅದೇನು ಅವರು ಇಷ್ಟು ದಿನವೂ ಗವಿಯಲ್ಲಿದ್ದು ಈಗ ನಿಮ್ಮ ತೋಟಕ್ಕೆ ಬಂದುದು?"

"ನಿನ್ನೆ ನೀವೆಲ್ಲ ನೋಡಿಕೊಳ್ಳಲಿಲ್ಲವಾ?"

"ಹಾಗಾದರೆ ಅದೆಲ್ಲ ನಿಮಗೂ ಗೊತ್ತಿತ್ತೇನು?"

"ಹೇಳಿದ್ದರೇನು?"

"ಹೌದು. ಅವರು ಕರೆದುಕೊಂಡು ಬಾ ಅಂದದಕ್ಕೇ ನಾನೂ ಕರಕೊಂಡು ಬಂದದ್ದು. ಅವರ ಅಪ್ಪಣೆ ಆಗಿತ್ತು ಅಂತಲೇ ರಮೇಶ ರಾಯರು ಹೊರಟರು. ಇಲ್ಲದಿದ್ದರೆ ಹೊರಡುತಾ ಇದ್ದರೆ?"

"ಅದೂ ನಿಜ. ನಾನು ಕಾರಲ್ಲಿ ಕುಳಿತುಕೊಳ್ಳುವಾಗಲೂ ನನಗೆ ಅರೆ ಮನಸ್ಸು."

"ಈಗ?"

"ನೋಡಬೇಕಾದ ವಸ್ತು. ನೋಡಿದ್ದೇ ಒಳ್ಳೆಯದಾಯಿತು."

"ಆಯಿತು. ಗೌಡರೇ, ನಿಮ್ಮ ಮನೆಗೆ ಬಂದದ್ದು ಹೇಳಲಿಲ್ಲ ವಲ್ಲಾ?"

"ಅದು ನನ್ನ ಹೆಂಡತಿ ಭಕ್ತಿ. ಅವಳು ನನ್ನ ಮನೆಗೆ ಬಂದು ಹಾಲೂ ಹಣ್ಣೂ ತಕೋಬೇಕು ಅಂತ ದಿನ ಕೇಳಿಕೊಳ್ಳುತ್ತಿದ್ದಳು. ಇಲ್ಲಿ ಒಂದು ಪ್ರಾರಬ್ಧ ಕಳೆದು ಆಮೇಲೆ ಅಲ್ಲಿಗೆ ಬಂದು ಆ ಪ್ರಾರಬ್ಧ ಕಳೆಯೋದು ಅನ್ನುತ್ತಿದ್ದರು. ನಿನ್ನೆ ಇಲ್ಲಿಗೆ ಬಂದರು."

"ಮುಂದಿನದೂ ಹೇಳಿದ್ದಾರೆಯೋ? ಭವಿಷ್ಯ ಹೇಳುತಾರೆಯೋ?"

"ಹೇಳುವುದಿಲ್ಲ. ನಿಮ್ಮದು ಮಾತ್ರ ಹೇಳಿದ್ದರು. ಇನ್ನು ಯಾವುದೂ ಹೇಳಿಲ್ಲ."

"ನಿನ್ನೆ ಹೇಳಿದ್ದರಲ್ಲಿ ಏನೋ ವಿಪತ್ತು ಇನ್ನೂ ಕಾದಿರುವಂತೆ ಇದೆ."

"ಏನಿದ್ದರೂ ಅವರು ಹೇಳಿದ ಹಾಗೆ ಮಾಡಿಬಿಡಿ. ಸುಖವಾಗಿರ ಬಹುದು."

"ಅವರು ಪ್ರಾಕ್ಟೀಸ್ ಬಿಡಿ ಎನ್ನುತ್ತಾರೆ."

"ನೋಡಿ. ಆ ವಿಚಾರ ನಾ ಹೇಳೊಲ್ಲ. ಇಷ್ಟು ನನ್ನ ಮಾತು. ಹಿಂದೆ ಐದು ವರ್ಷದಲ್ಲಿ ನನಗೆ ಎರಡು ಲಕ್ಷ ರೂಪಾಯಿನ ಆಸ್ತಿ ಉಳಿಸಿದ್ದೀರಿ. ಈಗ ಮಾನ ಪ್ರಾಣ ಉಳಿಸಿದ್ದೀರಿ. ನಾನು ನಿಮ್ಮ

ಇಬ್ಬರಿಗೂ ನನ್ನ ಜೀವ ಇರೋವರೆಗೂ ವರ್ಷಕ್ಕೆ ಎರಡೆರಡು ಸಾವಿರ ಕೊಡುವುದಕ್ಕೆ ಸಿದ್ಧವಾಗಿದ್ದೇನೆ."

"ಆಯಿತು ಗೌಡರೆ, ತಿಂಗಳಿಗೆ ಸಾವಿರಾರು ಸಂಪಾದಿಸುತ್ತಿದ್ದವರು ಪ್ರಾಕ್ಟೀಸ್ ಬಿಟ್ಟು ಇನ್ನೊಬ್ಬರ ಕೈ ಕಾಯುವ ಬೊಂಬೆಗಳಾಗಿ ಕೂಡುವುದೇ ?"

"ಸೋಮಿ, ನನ್ನ ಮಾತು ಕೇಳ್ತೀರಾ ? ಸ್ವಾಮಿಗಳನ್ನೆ ನಾಳೆ ಕೇಳಿಬಿಡಿ. ಅವರು ಕಾರಣವಿಲ್ಲದೆ ಹೇಳುವುದಿಲ್ಲ. ಪ್ರಾಣಕ್ಕಿಂತ ದೊಡ್ಡದು ಯಾವುದೂ ಇಲ್ಲ."

"ಅಲ್ಲದೆ ಪ್ರಾಕ್ಟೀಸ್ ಬಿಟ್ಟರೂ ಉಪವಾಸ ಕೂರಬೇಕಾಗಿಲ್ಲ. ಅದೂ ನಿಜ. ಆದರೂ ಒಲಿದುಬಂದ ವಕೀಲಿ ಬಿಟ್ಟುಬಿಡುವುದು ಎಂದರೆ, ಅರ್ಧ ಪ್ರಾಣವೇ ಬಿಟ್ಟಹಾಗಲ್ಲವೆ?''

"ನಾನು ಮುಂದಕ್ಕೆ ಏನು ಹೇಳಲಿ ? ಹತ್ತು ಗಂಟೆ ಆಯಿತು. ನಾನಿನ್ನು ಬರಲೇ ?"

"ಸರಿ ಹೋಗಿಬನ್ನಿ."

ಗೌಡನು ಹೋಗುವಾಗ ರಮೇಶನನ್ನು ಬೇರೆಯಾಗಿ ಕರೆದು "ನಿಮ್ಮ ಕುಟುಂಬ ನಿನ್ನೆಯದೇನಾದರೂ ಹೇಳಿದರೇನು ?" ಎಂದು ಕೇಳಿದನು.

"ಇಲ್ಲ."

"ಕೇಳಿನೋಡಿ"

ರಾಯರಿಬ್ಬರೂ ಒಂದು ಗಳಿಗೆ ಅಲ್ಲಿ ಕುಳಿತಿದ್ದು ಮಲಗುವುದಕ್ಕೆ ಹೋದರು.

ಮೋಹನೆಯು ಅಡಕೆಲೆ ಮಡಿಸಿಟ್ಟು ಹಾಗೇ ಮಂಚ ಒರಗಿಕೊಂಡು ಮಲಗಿದ್ದಳು. ಜೊಂಪು ಹಿಡಿದಿತ್ತು. ರಮೇಶನು ಸದ್ದಿಲ್ಲದೆ

ಹೋಗಿ ಮಂಚದ ಮೇಲೆ ಕುಳಿತನು. ಅವನ ಚೇಷ್ಟೆಯಿಂದ ಅವಳಿಗೂ ಎಚ್ಚರವಾಯಿತು.

ಒಂದು ಗಳಿಗೆ ಅದೂ ಇದೂ ಮಾತಾಡುತ್ತಿದ್ದು "ನಿನ್ನೆ ನೀವು ಸ್ವಾಮಿಗಳ ಹತ್ತಿರ ಹೋದಾಗ ಏನಾಯಿತು?" ಎಂದು ಕೇಳಿದನು.

ಅವಳು ಉತ್ತರ ಕೊಡಲಿಲ್ಲ. ಅವನ ಎದೆಯ ಮೇಲೆ ಮೊಕ ವಿಟ್ಟುಕೊಂಡು ಅತ್ತುಬಿಟ್ಟಳು. ಅವನೂ ಬಹಳ ಸಮಾಧಾನ ಮಾಡಿ ಕೇಳಿದರೆ, "ನಾನು ಅವರಿಗೆ ನಮಸ್ಕಾರ ಮಾಡುವಾಗ ಹಣೆಯಲ್ಲಿ ಕುಂಕುಮವಿರಲಿಲ್ಲ. ವೀಣಾ ನೋಡಿ ಸನ್ನೆ ಮಾಡಿದಳು. ಆಮೇಲೆ ಹಚ್ಚಿಕೊಂಡೆ" ಎಂದಳು. ಅದನ್ನು ಕೇಳಿ ರಮೇಶನಿಗೂ ಏನೋ ನೋವಾಯಿತು. ಆದರೂ ಅದನ್ನು ತೋರಿಸಿಕೊಳ್ಳದೆ ಲೊಚಗುಟ್ಟಿ ಕೊಂಡು ದೀಪವನ್ನು ಆರಿಸಿದನು.

ಮರುದಿವಸ ಸ್ವಾಮಿಗಳು ಮೌನವಾಗಿ ಪೂಜೆಯನ್ನು ಮಾಡಿ ದರು. ಎಲ್ಲರಿಗೂ ಪ್ರಸಾದ ವಿನಿಯೋಗವಾದ ಮೇಲೆ, "ಇವೊತ್ತಿನಿಂದ ಇನ್ನೊಂದೆಂಟು ದಿನ ಮೌನ ಮಾಡುತ್ತೇವೆ. ನೀವು ನಮ್ಮನ್ನು ಮತ್ತೆ ನೋಡಬೇಕಾಗಿಲ್ಲ. ಹೋಗಿಬರಬಹುದು.'' ಎಂದು ಹೇಳಿದರು.

*　　*　　*　　*

ಯಾರಿಗೂ ಅವರಿಗೆ ಪ್ರತಿನುಡಿಯುವ ಧೈರ್ಯವಿರಲಿಲ್ಲ. ವೀಣಾ "ನಮ್ಮ ಮನೆಗೆ ಬರಬೇಕು ಸ್ವಾಮಿಗಳೇ!" ಎಂದಳು.

ಸ್ವಾಮಿಗಳು ತಲೆಯೆತ್ತಿ ಅಷ್ಟು ಹೊತ್ತು ನೆಟ್ಟ ದೃಷ್ಟಿಯಿಂದ ನೋಡಿ, "ಆಗಲಮ್ಮ, ನಿನ್ನ ಮನೆಗೆ ಬರಬೇಕು. ಬರುತ್ತೇನೆ. ಆದರೆ ಈ ದೇಹದಲ್ಲಲ್ಲ." ಎಂದರು.

ಅದಕ್ಕೂ ಯಾರೂ ಏನೂ ಹೇಳಲಿಲ್ಲ.

ಅಂದಿನ ದಿನವೇ ರಾಯರಿಬ್ಬರೂ ಹಿಂತಿರುಗಿದರು. ಗೌಡನು ತಡೆದು ನಿಲ್ಲಿಸಬೇಕೆಂದು ಆಸೆಯಿದ್ದರೂ ಅವನನ್ನು ತಡೆಯಲಿಲ್ಲ.

೪

ರಮೇಶ್ ಬೆಳಗೆದ್ದು ಕಾಫಿ ತೆಗೆದುಕೊಂಡು ಕ್ಷೌರಮಾಡಿಕೊಳ್ಳುತ್ತ ಕುಳಿತಿದ್ದಾನೆ. ಕ್ಲಾರ್ಕ್ ನರಸಿಂಹಯ್ಯನು ಬಂದು ಕಾಣಿಸಿಕೊಂಡನು.

"ಏನ್ರೀ, ನಿಮಗೊಂದು ವಿಚಾರ ಹೇಳಬೇಕೂಂತಿದ್ದೆ. ನೀವು ಒಂದು ಎಂಟು ದಿನ ಬಿಟ್ಟುಕೊಂಡು ಪಿಳ್ಳೇಗೌಡನ ಎಸ್ಟೇಟಿಗೆ ಹೋಗಿ ಬನ್ನಿ. ಅಲ್ಲಿ ಒಬ್ಬರು ಸನ್ಯಾಸಿ ಇದ್ದಾರೆ. ನಿಮ್ಮಂತಹವರು ಅವರನ್ನು ನೋಡಿದರೆ ಬಹಳ ಸಂತೋಷಪಡುತ್ತೀರಿ."

"ಹಾಗಾದರೆ ತಾವು ಅಲ್ಲಿಗೇನೇನು ಹೋಗಿದ್ದುದು?"

"ಯಾಕೆ, ನಾನು ನಿಮಗೆ ಹೇಳಿದ್ದೆನಲ್ಲ. ಎಲ್ಲಿ ಹೋದರೂ ಸನ್ಯಾಸಿಗಳನ್ನ ನೋಡೋಕೆ ಅಂತ ಹೇಳಿರಲಿಲ್ಲ. ನಾನೂ ಏನೋ ಅಂದುಕೊಂಡು ಹೋದೆ. ಭಾರಿ ಬಂದೂಕ. ಅದು ಜೋಡು ನಲ್ಲಿ. ಡು ಯೂ ಬಿಲೀವ್ ನರಸಿಂಹಯ್ಯ, ನನಗೂ ಆತನ ಎದುರು ಮಾತನಾಡೋಕೆ ದಿಗಿಲಾಯ್ತು."

"ತಮಗೆ ಏನು ಹೇಳಿದರು ಸ್ವಾಮಿ?"

"ಅವರು ಪ್ರಾಣೇಶನ ಫಾದರ್ಸ್ ಫ್ರೆಂಡ್ ಅಂತೆ. ಅವರವರಿಗೆ ಬಹಳ ಆಯಿತು. ನನಗೇನು, ನಮ್ಮಿಬ್ಬರಿಗೂ ಹೇಳಿದ್ರು ಪ್ರಾಕ್ಟೀಸ್ ಬಿಟ್ಟು ದೇವರ ಪೂಜೆಮಾಡಿಕೊಂಡಿರಿ ಅಂತ."

"ತಾವು ಏನು ಹೇಳಿದಿರಿ ಸ್ವಾಮಿ."

"ಅಂಥಾವರೆದುರು ಏನು ಹೇಳೋಕೆ ಆಗುತ್ತೆ ? ದಟ್ ವಾಸ್ ಎ ವಂಡರ್‌ಫುಲ್ ಎಕ್ಸ್‌ಪೀರಿಯನ್ಸ್. ಐ ಕುಡ್ ನಾಟ್ ಫೈಂಡ್ ವರ್ಡ್ಸ್ ಟು ರಿಜಿಸ್ಟರ್ ಮೈ ಪ್ರೊಟೆಸ್ಟ್. ಅಲ್ಲದೆ, ಮೈ ಫ್ರೆಂಡ್, ಯೂ ನೋ ವಿ. ನಾನು ಅಷ್ಟು ಪ್ಯೂರಿಸ್ಟ್ ಆಗಿರೋದು ಸಾಧ್ಯವಿಲ್ಲ. ಅವರು ಹೆದರಿಸಿಯೂ ಇದ್ದಾರೆ. ಕಪ್ ಈಸ್ ಫುಲ್, ಅಂತ ವಾರ್ನಿಂಗ್ ಕೂಡ ಕೊಟ್ಟರು. ಅವರ ವಾರ್ನಿಂಗ್ ಐಡಲ್ ಅಲ್ಲ ಅಂತಲೂ ಅನ್ನಿಸಿತು. ಆದರೂ ರಮೇಶ್ ಕಾಂಟ್ ಹೆಲ್ಪ್ ಇಟ್, ಟೂ ಹಾರ್ಡ್‌ಬೇಕ್ಡ್."

"ತಮಗೆ ಹೇಳಿದ ಎಕ್ಸಾಕ್ಟ್ ವರ್ಡ್ಸ್ ಏನು ಸ್ವಾಮಿ ?"

"ಗುಡ್, ಎಷ್ಟೇ ಆಗಲಿ ಲಾಯರ್ ಗುಮಾಸ್ತೆ ಅಲ್ಲವೆ ? ಕ್ರಾಸ್ ಮಾಡುತ್ತಿದ್ದೀರಿ ?"

"ಅಲ್ಲ, ಸ್ವಾಮಿ, ಅವರು ಏನೆಂದರು ? ತಾವೇನು ಅಪ್ಪಣೆ ಕೊಡಿಸಿದಿರಿ, ಗೊತ್ತಾದರೆ ಅಲ್ಲವೆ ಸ್ವಾಮಿ, ತಮ್ಮ ಸ್ಟೇಟ್‌ಮೆಂಟಿನ ಫುಲ್ ಫೋರ್ಸ್ ತಿಳಿಯೋದು ? ಅದಕ್ಕೆ ಕೇಳಿದೆ."

"ಐ ಸೀ, ಅವರು ಆಡಿದ್ದರಲ್ಲಿ ಎರಡು ಮೂರು ಮಾತು ಬಹಳ ಸರಿ. ಮೊದಲನೆಯದಾಗಿ ನಾನು ಹೇಳುತ್ತೀನಲ್ಲ. ಪೈರೋ ಟೆಕ್ನಿಕ್ಸ್ ಇನ್ ವರ್ಡ್ಸ್. ಅದಕ್ಕೆ ಚೆನ್ನಾಗಿ ಕೊಟ್ಟರು. ಪ್ಲಾಟ್‌ಫಾರಂ ಮೇಲೆ ನಿಂತರೆ ನಮ್ಮ ಋಷಿಗಳ ದೇಶ ಅಂತೀರಿ, ಮನೇಲೆಲ್ಲ ಆಕ್ಸ್‌ಫರ್ಡ್ ಕ್ರೇಂಬ್ರಿಜ್ ಮಕ್ಕಳಾಗಿದ್ದೀರಿ ಅಂತ ಜಡಿದರು. ಆಮೇಲೆ, ದೇಹದೊಳಗೆ ಒಬ್ಬ ಆತ್ಮ ಇದ್ದಾನೆ ಅಂತ ನಂಬಿ ಅಂದರು. ಮಾಡುವ ಕೆಲಸ ಕೆಲಸದಲ್ಲೂ ಪಾಪ ಬರುತ್ತೆ; ಅದು ಕಳೆದುಕೊಳ್ಳೋಕೆ ಪೂಜೆ ಮಾಡಿ ಅಂದರು. ಕೊನೆಯದಾಗಿ ಬಹಳ ವೆಹ್‌ಮೆಂಟಾಗಿ 'ಮೈ ಮಾತ್ರ ಕೊಳೆಯಾದರೆ, ಸೋಪ್ ಹಾಕಿದ್ರೂ ಹಾಕಿದ್ದೇ. ಮನಸ್ಸಿನ ಕೋಳೀನೂ ಹಾಗೆ ಏತಕ್ಕರೀ ತೊಳೆಯೋಲ್ಲಾ ?' ಎಂದರು. ಡು ಯು ಸೋ ? ಹೌ ಅಥಾರಿಟೆಟಿವ್ ಅಂಡ್ ಡಿಕ್ಟೇಟೋರಿಯಲ್ ಹಿ ವಾಸ್ ? ಮೈ ಗಾಡ್ ?"

"ತಾವೇನಂದಿರಿ ಸ್ವಾಮಿ ?"

"ಅನ್ನೋದೇನು? ಹುಲಿ ಎದುರಿಗೆ ಹೋದ ಕುರೀ ಹಾಗೆ ಸರಿಸರಿ ಅಂತ, ತಪ್ಪಿಸಿಕೊಂಡು ಬಂದರೆ ಸಾಕು ಅಂತ ಬಂದುಬಿಟ್ಟೆವು. ಡು ಯು ನೋ ಐಸೆ? ಅವರು ಥಾಟ್ ರೀಡಿಂಗ್ ಚೆನ್ನಾಗಿ ಬಲ್ಲರು."

"ಅದು ತಮಗೆ ಹೇಗೆ ತಿಳಿಯಿತು ಸ್ವಾಮಿ?"

"ಇಟ್ ವಾಸ್ ಈಸಿ. ಅಸ್ ಆಬ್ವಿಯಸ್ ಅಸ್ ದಿ ಬ್ರಾಡ್ ಡೇ ಲೈಟ್. ಅವರು ಹೇಳತಾ ಇದ್ದರೆ ಮನಸ್ಸಿನಲ್ಲಿ 'ಇದೆಲ್ಲಾ ಯುಟೋಪಿಯರ್, ಕೆಲಸಕ್ಕೆ ಬಾರದ್ದು. ನಾಟ್ ಟು ದಿ ಪಾಯಿಂಟ್' ಎಂದುಕೊಂಡೆ. ಕೂಡಲೇ 'ನೀವಿನ್ನು ಹೊರಟುಬಿಡಿ. ಇನ್ನು ಎಂಟು ದಿನ ನಮಗೆ ಮೌನ' ಎಂದರು. ಪ್ರಾಣೇಶ್‌ಗೆ ಇನ್ನೂ ಮಾತನಾಡ ಬೇಕು ಎಂದು ಇತ್ತೇನೋ? ಅವನಿಗೆ ಬಹುಶಃ ಡಿಸ್ಸಅಪಾಯಿಂಟ್ ಆಗಿರಬೇಕು."

"ತಮ್ಮ ಅಭಿಪ್ರಾಯ ಏನು ಸ್ವಾಮಿ?"

"ಅಂಥಾವರ ಮೇಲೆ ನಮ್ಮ ಅಭಿಪ್ರಾಯ ಅನ್ನೋದು ಪ್ರಿಪಾಸ್ಟರಸ್. ಆದರೂ, ಹೇಳದೆ ಇರುವುದು ಹೇಗೆ? ಆದರಿಂದ ಹೇಳೋದು. ಅಂಥಾವರು ಪ್ಲೇನನಲ್ಲಿ ಹೋಗುವವರು. ನಾವು ಜಟಕಾ ಗಾಡಿಯವರು. ಅವರು ಹೇಳಿದ್ದು ಮಾಡೋಕೂ ನಮ್ಮಿಂದ ಸಾಧ್ಯವಿಲ್ಲ. ನೀವು ಎಷ್ಟಾದರೂ ಜಪ, ದೇವತಾರ್ಚನೆ ಇಟ್ಟುಕೊಂಡಿರುವವರು ನೀವು ಹೋಗಿಬನ್ನಿ. ಅವರಿಂದ ನಮಗಿಂತ ನಿಮಗೆ ಹೆಚ್ಚು ಪ್ರಯೋಜನವಾಗ ಬಹುದು."

"ತಾವು ಲೀವ್ ಕೊಡುತ್ತೀರಾ ಸ್ವಾಮಿ."

"ನಾವು ಸದ್ಯದಲ್ಲಿ ತಿರುಪತಿಗೆ ಹೋಗಿ ಬರಬೇಕು ಅಂತ ಇದ್ದೇವೆ. ಆಗ ನೀವು ಹೋಗಿ ಬನ್ನಿ."

"ಎಲ್ಲಿ ಸ್ವಾಮಿ? ತಾವಿಲ್ಲದೆ ಇದ್ದರೆ ಚಿಕ್ಕರಾಯರಿಗೆ ನೋಟ್ ಗೀಟ್ಸ್ ಬೇಕಾದರೆ? ಇರದಿದ್ದರೆ ಹೇಗೆ?"

"ಅದೂ ನಿಜ. ಹಾಗಾದರೆ ಬರುವ ವಾರ ಹೋಗಿ ಬನ್ನಿ. ನೀವು ಬಂದಮೇಲೆ ನಾವು ಹೋಗುತ್ತೇವೆ. ಅಷ್ಟರೊಳಗಾಗಿ ನಾನೂ ಪ್ರಾಣೇಶ್ ಆ ಡೀಡ್ ಮುಗಿಸುತ್ತೇವೆ. ಏನ್ರಿ, ನಮ್ಮ ಅನಾಥಾಲಯಕ್ಕೆ ಪಿಳ್ಳೇಗೌಡನೂ ಒಬ್ಬ ಟ್ರಸ್ಟಿ ಆದರೆ ಒಳ್ಳೆಯದಲ್ಲವೆ?"

"ಮನುಷ್ಯನೂ ಒಳ್ಳೆಯವ. ಕಾಲಧರ್ಮಕ್ಕೂ ಅನುಗುಣವಾಗಿರುತ್ತದೆ. ಆಗಬಹುದು."

"ನೀವು ಸೆಕ್ರಟರಿ ಆಗುತ್ತೀರೋ?"

"ತಾವಿದ್ದಮೇಲೆ ನಾನೆಲ್ಲಿ ಹೋಗೋದು ? ಆದರೆ ಸೆಕ್ರಟರಿಯಾಗಿ ........"

"ಹೌದಿರಿ, ಇರಿ. ಹೇಳುತೀನಿ. ಆ ಐದನೆಯ ರೋಡಿನ ಮನೆಯಿದೆ ನೋಡಿ. ಅಲ್ಲಿ ಅನಾಥಾಲಯ. ಈಗ ಸದ್ಯಕ್ಕೆ ಐವತ್ತು ಸಾವಿರ ರೂಪಾಯಿ ಕ್ಯಾಪಿಟಲ್ ಫಂಡ್. ನನ್ನ ಇನ್ಷ್ಯೂರೆನ್ಸ್ ಹಣ ಕೂಡ ಅದಕ್ಕೇ. ಪ್ರೊಫೆಸರ್ ಶತಾನಂದ ಇದ್ದಾರಲ್ಲ: ಅವರು, ಪ್ರಾಣೇಶ್, ಗೌಡ, ನೀವು, ನಾನು, ಟ್ರಸ್ಟಿಗಳು. ಆ ಪಾಣೇಶ್ ಈ ವೇಳೆಗೆ ಬರಬೇಕಾಗಿತ್ತು. ಇನ್ನೂ ಬಂದಿಲ್ಲ."

"ಇಗೋ, ಸ್ಕೂಲ್ ಹುಡುಗರು ಹೇಳುವಹಾಗೆ, ಪ್ರೆಸೆಂಟ್, ಸಾರ್."

"ಅಗೋ ಬಂದ; ಪ್ರಾಣೇಶ್, ನಿನಗೆ ನೂರು ವರ್ಷ ಆಯುಸ್ಸು. ನಾನು ನರಸಿಂಹಯ್ನನ್ನ ಆ ಸನ್ಯಾಸಿಗಳನ್ನ ನೋಡೋಕೆ ಹೋಗಿ ಬನ್ನಿ ಅಂತ ಹೇಳಿದೆ. ವಾಟ್ ಈಸ್ ಯುವರ್ ಒಪಿನಿಯನ್ ?

"ನರಸಿಂಹಯ್ಯ ಅಲ್ಲಿಗೆ ಹೋದರೆ ಅವರ ಹಿಂದೆಯೇ ಹೊರಟು ಹೋಗುತ್ತಾರೆ."

"ಅದೇನು ಸ್ವಾಮಿ ಹಾಗಂತೀರಿ?"

"ನಿಮ್ಮ ಕಲ್ಚರ್ ಅಂಥಾದ್ದು. ನಿಮಗಿರೋ ಶ್ರದ್ಧೆ ನಮಗೆಲ್ಲಿಂದ ಬರಬೇಕು ? ನಾವೆಲ್ಲ ಬುಡಬುಡಿಕೆಗಳು."

"ಉಂಟೆ ಸ್ವಾಮಿ ? ನೀವೆಲ್ಲ ಓದಿದವರು. ಡಬ್ಬಲ್ ಗ್ರಾಜ್ಯುಯೇಟ್ಸ್. ನಿಮಗಿಲ್ಲದ ಕಲ್ಚರ್ ನಮಗೆಲ್ಲಿಯದು ?"

"ಹಾಗೆನ್ನಬೇಡಿ. ನಾವು ಓದಿದ್ದೇವೆ. ನಮಗೆ ಪಾಲಿಷ್ ಬಂದಿದೆ. ಆದರೆ ಹೃದಯ ಪಾಷಾಣವಾಗಿಯೇ ಇದೆ. ಅದು ಮೆತ್ತಗಾಗುವುದೇ ಕಲ್ಚರ್, ನೋಡಿ. ನರಸಿಂಹಯ್ಯ, ನಮ್ಮ ಇಂಡಿಯನ್ ಕಲ್ಚರ್‌ನಲ್ಲಿ ಕಾನ್‌ಕ್ರೀಟ್, ಅಬ್‌ಸ್ಟ್ರಾಕ್ಟ್ ಎರಡಕ್ಕೂ ಬಹಳ ಸಂಬಂಧ. ಅಬ್‌ಸ್ಟ್ರಾಕ್ಟೇ ಕಾನ್‌ಕ್ರೀಟ್ ಆಗಿದೆ. ಕಾನ್‌ಕ್ರೀಟ್ ಈಸ್ ದಿ ಸಿಂಬಲ್ ಆಫ್ ಅಬ್‌ಸ್ಟ್ರಾಕ್ಟ್—ಒಂದನ್ನೊಂದು ಬಿಟ್ಟಿಲ್ಲ. ಇದನ್ನು ಕಂಡು ಅದನ್ನ, ಅದನ್ನ ನೆನೆದಾಗ ಇದನ್ನ, ತಂದಿಟ್ಟುಕೊಂಡು ಬ್ಯಾಲೆನ್ಸ್ ಮಾಡಬೇಕು. ಇದಕ್ಕೆ ಶ್ರದ್ಧೆಬೇಕು. ಅದು ನಮಗಿಲ್ಲ. ನಮಗೆ ಅದಿದ್ದಾಗ ಇದಿಲ್ಲ: ಇದಿದ್ದಾಗ ಅದಿಲ್ಲ. ನೀವು ನೋಡಿ, ಮೂರ್ತಿಪೂಜೆ ಮಾಡಿ ಪರಮಾತ್ಮ ಎಂದು ಸುಲಭವಾಗಿ ನುಡಿದುಬಿಡುತ್ತೀರಿ. ನಮ್ಮಿಂದ ಆಗೋಲ್ಲ."

"ರಮೇಶ್, ಪೂಜೆ ಅನ್ನುತ್ತಲೂ ನೆನಪಾಯಿತು. ಸ್ವಾಮಿಗಳು ಹೇಳಿದ ಶಿವಪೂಜೆ ಏನು ಮಾಡಿದೆ ?"

"ನೀನೇನು ಮಾಡಿದೆ ?"

"ಸದ್ಯದಲ್ಲಿ ಒಬ್ಬ ದೇವರ ಪೂಜೆ ಬ್ರಾಹ್ಮಣನ್ನ ಇಡೋದು. ಕಾಲಕ್ರಮದಲ್ಲಿ ನಾನೇ ಆರಂಭಿಸೋದು."

"ಐ ಡೋಂಟ್ ಲೈಕ್ ಇಟ್. ಮಾಡಿದರೆ ನಾವು ಮಾಡಬೇಕು. ಅಲ್ಲವಯ್ಯಾ, ನರಸಿಂಹಯ್ಯಾ, ನೀವು ಕೋಪ ಮಾಡಿಕೊಳ್ಳಬೇಡಿ. ಅಲ್ಲರೀ, ನಮ್ಮ ಹತ್ತಿರ ಆಶ್ರಯಕ್ಕೆ ಬಂದೋನ ಆಶೀರ್ವಾದ ನಮಗೆ ಫಲಿಸತ್ತೆ ಏನ್ರಿ ? ಆಶೀರ್ವಾದ ಎಂದರೆ ಮಳೆ ಬಂದಹಾಗೆ ಮೇಲಿಂದ ಬರಬೇಕು. ಅದು ಕ್ರಿಶ್ಚಿಯನ್ ಗ್ರೇಸ್. ಮಳೆ ಕೊಡುತು ಅಂತ

ಮೋಡಕ್ಕೆ ನೀವು ಏನು ಕೊಡಬಲ್ಲಿರಿ? ಅದು ಬಿಟ್ಟು ಹೊಟ್ಟೇಗಿಲ್ಲ ಒಂದು ರೂಪಾಯಿ ಕೊಡಿ ಅಂತ ಬಂದೋನು ಮಂತ್ರ ಹೇಳಿ ಆಶೀರ್ವಾದ ಮಾಡುವುದಕ್ಕೆ ಕೈಯೆತ್ತಿದರೆ, ನನಗೆ ತಕ್ಷಣ 'ಹೀಲ್ ದೈ ಸೆಲ್ಫ್, ಡಾಕ್ಟರ್' ಅನ್ನಬೇಕು ಅನ್ನಿಸತದೆ."

"ರಮೇಶ್ ದುಡುಕಿದೆ, ಈಗ ನರಸಿಂಹಯ್ಯ ನಿನ್ನ ಹತ್ತಿರ ಕ್ಲಾರ್ಕ್ ಆಗಿದ್ದಾರೆ, ಆದರೆ ಯೂ ಡೋಂಟ್ ಅಸ್ಯೂಮ್ ದಟ್ ಯೂ ಆರ್ ಹಿಸ್ ಸೀನಿಯರ್ ಸ್ಪಿರಿಚುಯಲಿ. ಈಗ ನೀನು ಅವರ ಆಶೀರ್ವಾದ ಕೇಳಬೇಕೋ, ಅವರು ನಿನ್ನ ಆಶೀರ್ವಾದ ಕೇಳಬೇಕೋ?"

"ಅವರು ಆನೆಸ್ಟ್ ಆಗಿ ದುಡಿತಾರಯ್ಯ! ನಾವೊಂದರಲ್ಲಿ ಹೆಚ್ಚಾದರೆ ಅವರಲ್ಲಿ ಇನ್ನೊಂದರಲ್ಲಿ ಹೆಚ್ಚು ಅಂತ ಮನಸ್ಸು ಒಪ್ಪತ್ತೆ? ಅದಿಲ್ಲದೆ ಬರಿಬರಿದೇ ಬ್ಲೆಸಿಂಗ್‌ಗೆ ಬರೋನ್ನ ಕುರಿತು ನಾನು ಹೇಳಿದ್ದು."

"ನೋ, ಐ ಡೋಂಟ್ ಅಗ್ರಿ ವಿತ್ ಯೂ ದೇರ್! ಈಗ ಸ್ವಾಮಿಗಳಿಗೆ ಹಿಂದಿಲ್ಲ ಮುಂದಿಲ್ಲ. ಅವರು ಗೌಡರ ಆಶ್ರಯದಲ್ಲಿದ್ದಾರೆ. ಹಾಗೆಂದು ಗೌಡರು ಅವರಿಗಿಂತ ಹೆಚ್ಚು ಎನ್ನೋಣವೇನು? ನಮ್ಮವರು ಬೇಕುಬೇಕು ಎನ್ನುವುದಕ್ಕಿಂತ ಬೇಡಬೇಡ ಎನ್ನುವುದಕ್ಕೆ ಹೆಚ್ಚು ಬೆಲೆ ಕೊಟ್ಟು ವೈರಾಗ್ಯದ ತಳಹದಿಯ ಮೇಲೆ ಲೈಫ್ ಕಟ್ಟಿದ್ದರು. ಅದರಿಂದ ನೀನು ಬಡವರನ್ನು ಕಂಡೆಮ್ನ್ ಮಾಡಬೇಡ."

"ಅಲ್ಲವಯ್ಯೋ, ನಾನು ಬಡವರನ್ನು ಕಂಡೆಮ್ನ್ ಮಾಡೋಕೆ ಹೊರಟಿಲ್ಲ. ಬಡತನ ಸಹಿಸಲಾನದೆ ತಮ್ಮ ಸರ್ವಸ್ವವನ್ನೂ ಆ ಮಾರಿಗೆ ಬಲಿ ಕೊಟ್ಟು ತಮ್ಮ ಸ್ಪಿರಿಚುಯಾಲಿಟಿಯನ್ನೂ ಬಡತನದ ಬಾಧೆ ಕಳೆದುಕೊಳ್ಳುವುದಕ್ಕೆ ಮಾರಿಕೊಳ್ಳುತ್ತಾರಲ್ಲ, ಅಂಥವರನ್ನು ಕುರಿತು ನಾನು ಹೇಳಿದ್ದು."

"ಆ, ಆ, ದಟ್ಸ್ ದಿ ಲಾಯರ್ ಇನ್ ಯು."

"ಸ್ವಾಮಿ, ನನಗೇನಾದರೂ ಇನ್‌ಸ್ಟ್ರಕ್ಷನ್ಸ್ ಇದೆಯೇ ಸ್ವಾಮಿ? ಎಂಟೂವರೆ ಆಗುತ್ತಾ ಬಂತು?"

"ಡು ಯು ಸೀ ಹೌ ಈಸಿಲಿ ನರಸಿಂಹಯ್ಯ ಟೆಲ್ಸ್ ಅ ಸ್ ದಟ್ ವಿ ಆರ್ ವೇಸ್ಟಿಂಗ್ ಟೈಮ್!''

"ಅದೂ ನಿಜವೇ! ದೇವರ ಪೂಜೆ ಮಾಡಿಸು. ನಾನು ಹೊರಡುತ್ತೇನೆ.''

"ಕಾಫಿ ಬರಲಿ, ತಡಿ, ನಾನೂ ಯೋಚನೆ ಮಾಡಿದೆ. ಐ ಡೋಂಟ್ ಥಿಂಕ್ ಐ ಅಕ್ಸೆಪ್ಟ್ ದಟ್. ಸದ್ಯದಲ್ಲಿ ದಿನಕ್ಕೆ ನಾಲ್ಕಾಣೆ ಯಂತೆ ತಿಂಗಳಿಗೆ ಏಳೂವರೆ ರೂಪಾಯಿ, ವರ್ಷಕ್ಕೆ ೯೦ ರೂಪಾಯಿ ಬಡ್ಡಿ ಬರುವ ಹಾಗೆ ಎರಡೂವರೆ ಸಾವಿರ ರೂಪಾಯಿ ಪುದುವಟ್ಟು ನಮ್ಮಪ್ಪನ ಹೆಸರಿನಲ್ಲಿ ಮಂಜುನಾಥನಿಗೆ ಕೊಟ್ಟುಬಿಡೋದು. ಆಮೇಲೆ ಅದೃಷ್ಟವಿದ್ದರೆ, ನಾವು ಮನೆಯಲ್ಲಿ ಪೂಜೆ ಆರಂಭಿಸೋದು. ಸದ್ಯದಲ್ಲಿ ಪೂಜೆಗೆ ಬೇಕಾದ ಮೆಂಟಾಲಿಟಿ ನಮ್ಮ ಮನೆಯಲ್ಲಿ ಇಲ್ಲ. ಆ ಅಟ್ಮೋಸ್ಫಿಯರ್ ಇಲ್ಲ. ಅದು ಕಲ್ಟಿವೇಟ್ ಮಾಡುವುದಕ್ಕೂ ಸಾಧ್ಯವಿಲ್ಲ. ವೈ ವರಿ? ವೀ ಆರ್ ಆಲ್ ಮೆಷೀನ್ಸ್. ಪ್ರಾಣೇಶ್. ದಟ್ಸ್ ವ್ಹಾಟ್ ವಿ ಆರ್."

''ಆಯಿತು, ಪ್ರೊಫೆಸರ್‌ಗೆ ಬರೆದೆಯಾ?''

"ನಾಳಿದ್ದು ಅಂದರೆ ಬುಧವಾರ ಸಂಜೆ ನಾಲ್ಕು ಗಂಟೆಗೆ ನಾವೆಲ್ಲ ಸೇರೋಣ. ಇಫ್ ಪಾಸಿಬಲ್ ಗೆಟ್ ಗೌಡ ಆಲ್ಸೋ. ವಿ ವಿಲ್ ಸೆಟಲ್ ಇಟ್ ಆಫ್"

"ಸರಿ."

* * * * *

ವೆಂಕಟೇಶಯ್ಯನವರು ಗೋಡೆ ಒರಗಿಕೊಂಡು ಯೋಚನೆಯಲ್ಲಿ ಕುಳಿತಿದ್ದಾರೆ: ''ಪದಾರ್ಥಗಳ ಬೆಲೆ ವಿಷ ಏರುವ ಹಾಗೆ ಏರಿಹೋಗುತ್ತಿದೆ. ಈ ಸರ್ಕಾರವೂ ಅದಕ್ಕೇ ಅನುಕೂಲವಾಗಿದೆ. ನಮ್ಮ

ಸಂಪಾದನೆ ಬೆಳೆಯಲಿಲ್ಲ: ಖರ್ಚು ಒಂದಕ್ಕೆರಡು ಆಯಿತು. ಇನ್ನು ಮಾನವಾಗಿ ಬದುಕುವ ಹಾಗಿಲ್ಲ. ಒಂದು ಜೊತೆ ಪಂಚೆ ತರೋಣ ಅಂದರೆ, ಇಪ್ಪತ್ತು ರೂಪಾಯಿ. ಹೆಂಗುಸಿಗೆ ಒಂದು ಸೀರೆ ತರೋಣ ಅಂದರೆ, ಇಪ್ಪತ್ತೈದು. ಏನೋ ಬದುಕುವುದಕ್ಕೆ ಬರಲಿಲ್ಲ ಈ ಕಾಲ. ಏನು ಮಾಡಬೇಕು?'' ಇದುವರೆಗೆ ಒಳ್ಳೆಯವ ಎನ್ನಿಸಿಕೊಂಡು ಬದುಕಿದ್ದಾಯಿತು. ಇನ್ನು ಮುಂದೆ ಏನು ಗತಿ? ಮಕ್ಕಳುಮರಿ ಇಲ್ಲದ್ದು ಏನೋ ಒಂದು ಅನುಕೂಲ ಆಯಿತು. ಅವರೂ ಇದ್ದು ಹೀಗಾಗಿದ್ದರೆ,...." ಎಂದು ಇನ್ನೂ ಏನೋ ಯೋಚನೆಗಳಲ್ಲಿ ಒದ್ದಾಡುತ್ತಿದ್ದರು. ''ಏನು ಸಮಯ, ವೆಂಕಟೇಶಯ್ಯನವರೇ?" ಎಂದು ನರಸಿಂಹಯ್ಯನವರು ಬಂದರು.

''ದಯಮಾಡಿಸಿ, ಅಪರೂಪವಾಗಿ ಬಂದಿರಿ?''

''ನಾವು ಲಾಯರ್ ಗುಮಾಸ್ತೆಗಳು. ಕೆಲಸವಿಲ್ಲದೆ ಬರುತ್ತೇವೆಯೇ?"

''ಅಪ್ಪಣೆಯಾಗಲಿ. ಸಿದ್ಧವಾಗಿದ್ದೀನಿ."

''ನಿಮಗೆ ರಿಟೈರ್ ಆಯಿತಂತೆ!"

"ಅದೇ ಬಂದಿರುವ ಕಷ್ಟ. ಸಂಬಳ ಒಂದು ಐವತ್ತು. ಅದರ ಜೊತೆಯಲ್ಲಿ ಎರಡು ಮೂರು ಪಾಠ ಒಂದು ಮೂವತ್ತೋ ಬರುತ್ತ ಏನೋ ಒಂದು ರೀತಿ ತೂಗಿಸುತ್ತ ಇದ್ದೆ. ಇನ್ನು ಮುಂದೆ ಆ ವೆಂಕಟೇಶ ಹೇಗೆ ಮಾಡುತ್ತಾನೋ ನೋಡಬೇಕು."

"ನಿಮಗೇನ್ರಿ? ನೀವು ದೇವರನ್ನ ಕಂಡೋರು. ಹೇಗೋ ಆಗುತ್ತೆ?"

"ದೇವರೇ ಎಲ್ಲಾ ಮಾಡಿಸೋದು. ಆದರೆ ಮನುಷ್ಯನ ಮನಸ್ಸು, ಜೊತೆಗೆ, ನಾವು ಯಾರ ಜೊತೆಯಲ್ಲಿ ಇದ್ದರೆ ಅವರಂತೆ ಮನಸ್ಸೂ, ಎಲ್ಲರೂ ದುಡ್ಡು ದುಡ್ಡು ಎನ್ನುತ್ತಿರುವಾಗ, ನಾನು ದೇವರು ದೇವರು ಎಂದು ಕುಳಿತಿರುವುದಕ್ಕೆ ಆದೀತೆ?"

"ನಿಜ. ಅದಿರಲಿ, ನಿಮಗೆ ದೇವರ ಪೂಜೆ ಮಾಡಿಕೊಂಡು ಇರೋದಕ್ಕೆ ಅನುಕೂಲವಾದರೆ ಏನು ಹೇಳ್ತೀರಿ?"

"ಅದೇನು ಹೇಳಿ."

"ರಮೇಶರಾಯರು ಒಂದು ಅನಾಥಾಲಯ ಮಾಡಬೇಕು ಅಂತ ಇದ್ದಾರೆ. ಅದಕ್ಕೆ ಅವರೇ ಪ್ರೆಸಿಡೆಂಟ್, ಪ್ಲಾಂಟರ್ ಪಿಳ್ಳೆಗೌಡರು ವೈಸ್ ಪ್ರೆಸಿಡೆಂಟ್, ಲಾಯರ್ ಪ್ರಾಣೇಶ್ವರರಾಯರು ಸೆಕ್ರೆಟರಿ, ಪ್ರೊಫೆಸರ್ ಶತಾನಂದರು, ಜವಳಿ ಅಂಗಡಿ ಜೀವಣ್ಣನವರು, ಮೆಂಬರುಗಳು, ನಾನು ಅಸಿಸ್ಟೆಂಟ್ ಸೆಕ್ರೆಟರಿ. ಮ್ಯಾನೇಜರ್ ಒಬ್ಬರು ಬೇಕು. ಸದ್ಯದಲ್ಲಿ ಆರು ಜನ ಅನಾಥ ಬಾಲಿಕೆಯರನ್ನು ಅಲ್ಲಿ ಇಡುವುದು. ಮಿಡಲ್ ಸ್ಕೂಲ್ ಪರೀಕ್ಷೆವರೆಗೂ ಓದಿಸೋದು. ಆಮೇಲೆ ಸಂಗೀತ ವೈದ್ಯ ಕಲಿಸೋದು. ಸುಮಾರು ಹದಿನಾಲ್ಕು ಹದಿನೈದರ ವೇಳೆಗೆ ಮದುವೆ ಮಾಡಿ ಕಳಿಸೋದು. ಮ್ಯಾನೇಜರಿಗೆ ಮನೆ ಕೊಡುತ್ತೆ. ಸಂಸಾರ ಸಮೇತ ಅವರು ಅಲ್ಲಿಯೇ ಇರಬೇಕು. ಊಟಗೀಟ ಎಲ್ಲ ಅಲ್ಲೇ! ಅವರಿಗೆ ಒಂದು ಗಂಡಾಳು, ಒಂದು ಹೆಣ್ಣಾಳು, ಇಷ್ಟು ಮಾಡಬೇಕು ಅಂತ ಆಗಿದೆ."

"ಕೊಂಚ ಟೈಂ ಕೊಡಿ. ಯೋಚನೆ ಮಾಡ್ತೇನೆ. ಅವಳು ಏನಂತಾಳೋ ಕೇಳೋಣ."

"ನೀವು ಹುಡುಗರಲ್ಲಿ ಒಗ್ಗಿದವರು. ಅದರಿಂದ ನಿಮ್ಮನ್ನು ನಾನೇ ರಾಯರಿಗೆ ಹೇಳಿದೆ. ಗೊತ್ತಿದೆಯಲ್ಲ ಅವರು ನನ್ನ ಮಾತು ತೆಗೆದು ಹಾಕೋಲ್ಲ ಅಂತ. ನೀವು ಒಪ್ಪಿಕೊಳ್ಳಿ. ಜೊತೆಗೆ ಅವರ ಮಗಳು ವೀಣಾಗೆ ಈಗ ಐದಾರು ವರ್ಷ. ಅವಳ ಪಾಠ ಅನ್ನೋ ನೆವದಲ್ಲಿ ಅದೊಂದು ಮೂವತ್ತು ರೂಪಾಯಿ ಕೊಡಿಸುತ್ತೇನೆ. ಮ್ಯಾನೇಜರ್ ಅಲೋಯನ್ಸ್ ಒಂದು ಮೂವತ್ತು ರೂಪಾಯಿ ಬರುತ್ತೆ. ಮನೆ ಬಾಡಿಗೆ ಇಲ್ಲ. ಊಟದ ಖರ್ಚು ಇಲ್ಲ. ಏನು ಹೇಳುತ್ತೀರಿ?"

"ಆಗಬಹುದು ಅನ್ನಬೇಕು ಅನ್ನುತ್ತೇ ಮನಸ್ಸು. ಆದರೂ

ಕೊಂಚ ಯೋಚಿಸಿ, ನಾಳೆ ಹೇಳುತ್ತೇನೆ. ಇದೇನು ಪ್ರೈವೆಟ್ಟೊ ಪಬ್ಲಿಕ್ಕೋ?"

"ಅದಿನ್ನೂ ಸೆಟಲ್ ಆಗಿಲ್ಲ. ಸದ್ಯದಲ್ಲಿ ಈ ಗತಿಯಿಲ್ಲದಿದ್ದ ಜಾತೀಗೆ ಅಂತ ಅಂದುಕೊಂಡಿರೋದು. ಆಮೇಲೆ ಅನುಕೂಲವಾದರೆ ನೋಡೋಣ."

"ಸರಕಾರ ಒಪ್ಪುತ್ತೆಯೇ?"

"ಏನು ವೆಂಕಟೇಶಯ್ಯನವರೇ, ಸರಕಾರದ ಹತ್ತಿರ ನಡೆಯೋವಾಗ ಅವರು ಹೇಳಿದಹಾಗೆ, ನಮ್ಮ ಮನೆಗೆ ಬಂದರೆ ನಾವು ಹೇಳಿದಹಾಗೆ. ಏನಿದು ಹಿಂದಿನ ಕಾಲ ಅಂದುಕೊಂಡಿರಾ? ಸೆಕ್ಯುಲರ್ ಗವರ್ನ್‌ಮೆಂಟ್ ಬಂದ ಮೇಲೆ, ನೀವು ಪಾಪಭೀತರಾಗಿ ನಡೆಯೋದು ನಿಮ್ಮ ಸಂತೋಷಕ್ಕೆ. ರೈಲಿನಲ್ಲಿ ಟಿಕೆಟ್ ತಕೊಂಡು ಕೂತುಕೊಂಡ ಮೇಲೆ ನೀವು ಏನು ಮಾಡಬೇಕಾದರೂ ಮಾಡಿಕೊಳ್ಳಿ. ರೈಲಿನವರು ಕೇಳುತಾರೆಯೇ? ಲಾ ಅಂಡ್ ಆರ್ಡರ್ ಕೆಡದ ರೀತಿಯಲ್ಲಿ ನೀವು ಬಾರಾ ಖೂನ್ ಮಾಡಿದರೂ ಮಾಫ್. ಒಟ್ಟಿನಲ್ಲಿ ಸಿಕ್ಕಿದರೆ ಕೆಟ್ಟಿರಿ. ಸಿಕ್ಕಿಕೊಳ್ಳದೆ ಏನು ಮಾಡಿದರೂ ಪರವಾಯಿಲ್ಲ."

"ಆಯಿತು. ನರಸಿಂಹಯ್ಯನವರೇ, ಮಿಕ್ಕಾದವರೆಲ್ಲ ತಮ್ಮ ತಮ್ಮ ಜಾತಿ ಹಾಸ್ಟೆಲ್, ಬ್ಯಾಂಕ್, ಸೊಸೈಟಿ ಮಾಡುತ್ತಿದ್ದಾರಲ್ಲ. ಬ್ರಾಹ್ಮಣರೂ ಏಕೆ ಮಾಡಬಾರದು?"

"ಅದು ತಪ್ಪು ಎಂದು ಬ್ರಾಹ್ಮಣನಿಗೆ ಗೊತ್ತಿದೆ. ಎಲ್ಲಾ ಒಟ್ಟಾಗಬೇಕಾದ ಕಾಲ. ಸಬ್‌ಲುಂಡಾ ಏಕ್‌ಲುಂಡಾ ಆಗುವ ಕಾಲ ಬಂದಿದೆ ಎನ್ನುವುದು ಅವನಿಗೆ ಗೊತ್ತಿದೆ. ಅದರಿಂದ ಹೆದರುತ್ತಾನೆ. ಇತರರು ಇನ್ನೂ ಅದು ಅರ್ಥವಾಗುವಷ್ಟು ಬೆಳೆದಿಲ್ಲ. ಅದರಿಂದ ಅವರು ಧೈರ್ಯವಾಗಿ ಆ ಕೆಲಸ ಮಾಡುತ್ತಿದ್ದಾರೆ."

"ಹಾಗಂತೀರಾ?"

“ಕೇಳಿಲ್ಲವೇ ವೆಂಕಟೇಶಯ್ಯ, ಮೀಸೆ ಬರೋನು ದೇಶಾ ಕಾಣ ಅಂತ. ಅದರ ಹಾಗೆ, ಇವರೆಲ್ಲ ಇಷ್ಟು ದಿವಸ ಬ್ರಾಹ್ಮಣನ ಜೈಲಿನಲ್ಲಿದ್ದು ಈಗ ಈಚೆಗೆ ಬಂದವರ ಹಾಗೆ ಆಡುತ್ತಾ ಇದ್ದಾರೆ. ಆ ಭಾವ ತಪ್ಪೋವರೆಗೂ ಈ ಬೇರೆ ಬೇರೆ ಭಾವ ಹೋಗೋಲ್ಲ. ಈಗ ಆ ಮಾತು ಬಿಡೋಣ. ನಾವು ಕೈತುಂಬ ಕೆಲಸದವರು. ಈ ಹೊಟ್ಟೆಯೋ ಬೆಳಗಿಂದ ಸಂಜೆವರೆಗೂ ದುಡಿದರೂ ತುಂಬುವುದಿಲ್ಲ. ನೀವು ಒಪ್ಪಿಕೊಳ್ಳಿ. ಒಂದು ವೇಳೆ ಕಾಸ್ಮಾಪೊಲಿಟಿರ್ ಆದರೆ ನಿಮಗೇನು ಕಷ್ಟ?”

“ಶುಚಿರುಚಿಯಾಗಿದ್ದರೆ ಮನಸ್ಸು ಒಡೆಯುವುದಿಲ್ಲ. ಅಲ್ಲಿಗೆ ಬಂದ ಮೇಲೆ ಶುಚಿರುಚಿಯಾಗಿ ಇಟ್ಟುಕೊಳ್ಳುವುದು ನಮ್ಮ ಕೆಲಸ ಆದರಿಂದ ಅದಕ್ಕೂ ಚಿಂತೆಯಿಲ್ಲ.”

“ಸರಿ. ಇಷ್ಟಕ್ಕೆ ಸಿದ್ಧರಾದರೋ ಸಾಕು. ಹೋಗಿ ಪ್ರೊಫೆಸರ್ ಶತಾನಂದಂ ಅವರನ್ನ ಕಂಡು ಬನ್ನಿ. ಮುಂದಿನದು ನನ್ನ ಕೆಲಸ.”

“ಯಾವೊತ್ತು ಹೋಗಲಿ?”

“ಯಾವೊತ್ತೇನು? ಇವೊತ್ತೋ ನಾಳೆಯೋ ಅದನ್ನೂ ಮುಗಿಸಿಬಿಡಿ. ರಾಯರ ಮಗಳ ಪಾಠ ಯಾವೊತ್ತಿನಿಂದ ಆರಂಭಿಸುತ್ತೀರಿ?”

“ಗುರುವಾರ ದಿನ ಚೆನ್ನಾಗಿದೆ.”

“ಅವರು ಇವೊತ್ತಿನವರೆಗೂ ಏನೂ ಮುದ್ದು ಅಂತ ಪಾಠಗೀಟ ಏನೂ ಹೇಳಿಸಿಲ್ಲ. ಆ ಹುಡುಗಿ ಬುದ್ಧಿ ಪಾದರಸ. ನೋಡಿಕೊಳ್ಳಿ.”

“ಸರಿ.”

ಆವೊತ್ತೇ ವೆಂಕಟೇಶಯ್ಯ ಶತಾನಂದಂ ಮನೆಗೆ ಹೋದ: ಶತಾನಂದಂ ಹೆಸರಾದ ಪ್ರೊಫೆಸರ್. ಎರಡು ಮೂರು ಯೂನಿವರ್ಸಿಟಿಗಳಿಂದ ಡಾಕ್ಟರೇಟ್‌ಗಳು ಬಂದಿದ್ದರೂ ಅವನಿಗೆ ಜಂಭ ಇಲ್ಲ. ಅವನಿಗೆ ಹಗಲೂ ರಾತ್ರಿ ಒಂದೇ ಯೋಚನೆ. ನಮ್ಮ ದೇಶ ಎಂದಿಗೆ ಮುಂದಕ್ಕೆ ಬರೋದು? ಮಿಕ್ಕದೇಶಗಳ ಹಾಗೆ ನಮ್ಮ ದೇಶವೂ ತಲೆ

ಯೆತ್ತಿಕೊಂಡು ನಿಲ್ಲುವುದು ಹೇಗೆ? ಎಂದು ಮುಂತಾಗಿ ಹತ್ತಿದ ಹರಿಯದ ಯೋಚನೆ. ಆತನಿಗೆ ಒಬ್ಬನೇ ಮಗ. ಅವನಿಗೆ ಓದು ಎಂದರೆ ತಲೆ ನೋವು. ಇದ್ದಕ್ಕಿದ್ದ ಹಾಗೆ ಮಗನ ಯೋಚನೆ ಬರುವುದು. "ದೇಶವನ್ನೆಲ್ಲ ಉದ್ಧಾರಮಾಡುವ ಯೋಚನೆಯಲ್ಲಿ ಮನೆಯ ಮಗನನ್ನು ತಿದ್ದಿಲ್ಲ. ಇವನು ಮುಂದಕ್ಕೆ ಏನಾಗುವನೋ ಏನೋ?" ಎಂದು ಚಿಂತಾಕ್ರಾಂತ ನಾಗುವನು. ಕೂಡಲೇ "ಮನುಷ್ಯನಿಗೆ ಇರುವ ಎನರ್ಜಿಯೆಲ್ಲ ಒಂದು ಎಕ್ಸ್ ಕ್ವಾಂಟಿಟಿ. ಅದನ್ನು ಫ್ಯಾಮಿಲಿಗಾದರೂ ಕೊಡಬಹುದು. ಕಂಟ್ರಿಗಾದರೂ ಕೊಡಬಹುದು. ನಮ್ಮಲ್ಲಿ ಅಬಂಡಂಟ್ ಎನರ್ಜಿ ಇದ್ದರೆ ಎರಡಕ್ಕೂ ಆದೀತು. ಪರ್‌ಹ್ಯಾಪ್ಸ್, ವಿ ಹ್ಯಾವ್ ಟು ಪೇ ಎ ಪ್ರೈಸ್ ಒರ್ ಫಾರ್ ದಿ ಅದರ್ ಅಂಡ್ ನಾಟ್ ಬೋತ್ ಎಂದು ಕಾಣುತ್ತದೆ." ಎಂದುಕೊಂಡು ಆ ಚಿಂತೆ, ಆ ಯೋಚನೆ, ಬಿಟ್ಟು ಸುಮ್ಮನಾಗುವನು.

ವೆಂಕಟೇಶಯ್ಯನು ಹೋದಾಗ ಶತಾನಂದಂಗೆ ಇಂತಹುದೇ ಒಂದು ಚಿಂತಾಲಹರಿ ಎದ್ದಿತ್ತು. ಆ ಮನುಷ್ಯ ತನ್ನನ್ನು ನೋಡುವುದಕ್ಕೆ ಬರುವ ನೆಂದು ಆತನಿಗೂ ಗೊತ್ತಿತ್ತು. ಅದರಿಂದ, ತನ್ನ ಯೋಚನೆಯನ್ನು ಒದರಿ, ಹೋಗಿ, ಆತನನ್ನು ಒಳಕ್ಕೆ ಕರೆದುಕೊಂಡು ಬಂದು 'ಕೂತು ಕೊಳ್ಳಿ' ಎಂದನು. ವೆಂಕಟೇಶಯ್ಯನು "ತಾವು ದೊಡ್ಡ ಮನುಷ್ಯರು, ಸಾರ್, ನಾನು ತಮ್ಮೆದುರು ಕೂತುಕೊಂಡರೆ ಹೇಗೆ?" ಎಂದನು.

"ಮಿಸ್ಟರ್, ದಯವಿಟ್ಟು ಕುಳಿತುಕೊಳ್ಳಿ. ಡೆಮೋಕ್ರಸಿ ಎಂದರೆ ಒಬ್ಬರಿಗೊಬ್ಬರು ಸಮಾನ ಅಂತ. ನಾವು ಅದನ್ನು ಆಚರಣೆಯಲ್ಲಿ ತರೋವರೆಗೂ ನಮಗೆ ಸ್ವಾತಂತ್ರ್ಯ ಇದ್ದರೂ ಇಲ್ಲದಿದ್ದ ಹಾಗೆ. ವಿ ಆರ್ ಈಕ್ವಲ್ ಸ್. ಡೋಂಟ್ ವರಿ. ಕುಳಿತುಕೊಳ್ಳಿ."

"ಸ್ವಾಮಿ, ತಾವು ದೊಡ್ಡವರು ಆ ಮಾತು ಹೇಳಬಹುದು. ಆದರೆ, ನಾನು ಮಿಡಲ್ ಸ್ಕೂಲಿನಲ್ಲಿ ಬಡಮೇಷ್ಟರಾಗಿ ರಿಟೈರ್ ಆದವನು ಯೂನಿವರ್ಸಿಟಿ ಪ್ರೊಫೆಸರ್ ಮನೆಗೆ ಬಂದು ನಾನೂ ನೀವೂ ಒಂದೇ ಸಮ ಎಂದರೆ ನಡೆದೀತೆ? ಡೆಮೋಕ್ರಸಿ, ಸ್ವಾತಂತ್ರ್ಯ, ಎಲ್ಲ ಬಂತು.

ಸ್ವಾಮಿ, ಬಂದು ಮೂರು ನಾಲ್ಕು ವರ್ಷವಾಯಿತು. ಆದರೂ ಹೆಳ್ಳದಿಷ್ಟೆ ಹೆಚ್ಚಾಗುತ್ತಿದೆಯೇ ಹೊರತು ಸಮವಾದ ಹಾಗೆ ಕಾಣಲಿಲ್ಲ. ಮಾತಿನಲ್ಲಿ ಒಂದೇ ಆದ ಸಮಾಜ ಮರದ ಕೊನೆಗಳ ಹಾಗೆ ಒಡೆದು ಒಡೆದು ನೂರಾರು ಗುಂಪು ಆಗುತ್ತಿದೆ."

ಪ್ರೊಫೆಸರ್ ಶತಾನಂದಂ ಆ ಮಾತಿನಲ್ಲಿ ಅಡಗಿರುವ ನಿಜ ಅರಿತನು. ಅದುವರೆಗೆ ಅವನು ಹಾಗೆ ಮಾಡುತ್ತಿದ್ದುದ್ದು. ಯಾರು ಬಂದರೂ ತಾನು ದೊಡ್ಡವನು. ಅವನಿಗೆ ಸಮದಹಾಗೆ ನಡೆಯುವುದೇ ಅವನಿಗೆ ತಾನು ಮಾಡುವ ಅನುಗ್ರಹ ಎಂದುಕೊಳ್ಳುತ್ತಿದ್ದವನು. ಈಗ ಏನೋ ಹೊಸ ಬೆಳಕು ಬಂದಹಾಗೆ ಆಯಿತು. ಆದರೆ ಆ ಬೆಳಕು ಬರುವುದು ಒಬ್ಬ ಮಿಡಲ್ ಸ್ಕೂಲ್ ಟೀಚರಿಂದ? ತನಗೆ?

ಆದರೆ ಶತಾನಂದಂ ಬೆಳಕು ಬಂದರೆ ಬೇಡ ಎನ್ನುವ ಜಾತಿಯಲ್ಲ. ವೆಂಕಟೇಶಯ್ಯನನ್ನು ಇನ್ನಷ್ಟು ಮಾತನಾಡಿಸಬೇಕು ಎಂದುಕೊಂಡನು. ಬಲವಂತವಾಗಿ ಹಿಡಿದು ಕುರ್ಚಿಯಲ್ಲಿ ಕುಳ್ಳಿರಿಸಿದನು. "ಆಯಿತು. ಮುಂದೆ ಹೇಳಿ. ಏನು ಮಾಡಿದರೆ ಇದು ಸರಿಹೋಗುತ್ತೆ?"

"ನಾನೊಬ್ಬ ಬಡ ಟೀಚರು ಸ್ವಾಮಿ. ನಾವು ತಮಗೆ ಹೇಳೋದೆ?"

"ನಾನೇ ಕೇಳುತ್ತಿದ್ದೇನಲ್ಲ? ಆಯಿತು. ನಮ್ಮ ಮನೆಯಲ್ಲಿ ಕಾಫಿ ತೆಗೆದುಕೊಳ್ಳುತ್ತೀರೋ?"

"ಸ್ವಾಮಿ, ಭಾಗ್ಯವಂತರಿಗೆ ಭಾಗ್ಯ ಬಂದು ಅವರೆಲ್ಲ ಒಂದೇ ಸಮನಾಗುತ್ತಾರೆ. ಬಡವರಿಗೆ ಏನೂ ಇಲ್ಲದೆ ಇರೋಣದರಿಂದ ಅವರಿಗೆ ಜಾತಿ ಬೇಕಾಗಿಲ್ಲ. ಇರುವುದೆಲ್ಲ ಮಧ್ಯಮವರ್ಗದವರಿಗೆ. ಅವರು ಬಿಡಲಾರರು; ಇಟ್ಟುಕೊಳ್ಳಲಾರರು. ಸಮಾಜದ ಸಹಜಸ್ಥಿತಿ ಕಾಣು ವುದು ಈ ಕೊನೆಯಲ್ಲೂ ಆ ಕೊನೆಯಲ್ಲೂ ಅಲ್ಲ. ಈ ನಡುವೆ, ಮಧ್ಯದಲ್ಲಿರುವ ಮಧ್ಯಮವರ್ಗದಿಂದ. ಆದರೆ ಈಗ ನಡುಮನೆ ಇಲ್ಲ ಸ್ವಾಮಿ. ಇರುವುದೆಲ್ಲ ಯಾವ ಮನೆಗೆ ಹೋಗಲಿ, ಇಲ್ಲದಿದ್ದರೆ ರೂಮು; ಇಲ್ಲದಿದ್ದರೆ ಹಾಲು. ಹೀಗಿರುವಾಗ ನಾನೇನು ಹೇಳಲಿ."

"ಕಾಫಿ ವಿಚಾರ ಹೇಳಲಿಲ್ಲವಲ್ಲ?"

"ನಮಗೆ ಬೇಡ ಎನ್ನುವ ದಿಟ್ಟತನವೂ ಇಲ್ಲ; ಬೇಕು ಎನ್ನುವ ಧೈರ್ಯವೂ ಇಲ್ಲ."

"ಸೋ, ಯು ಟೇಕ್"

"ಆಗಬಹುದು"

ಪ್ರೊಫೆಸರ್‌ರಿಗೆ "ಈ ಮನುಷ್ಯ ನೇರವಾಗಿ ತೆಗೆದುಕೊಳ್ಳುತ್ತೇನೆ ಎಂದು ಏಕೆ ಹೇಳಲಿಲ್ಲ" ಎಂದು ಯೋಚನೆ. "ಡಸ್ ಹಿ ಹೈಡ್ ಹಿಸ್ ಥಾಟ್ಸ್? ವೈ ದಿಸ್ ಬೀಟಿಂಗ್ ಔಟ್ ದಿ ಬುಷ್? ಲುಕ್ಸ್ ಇಂಟೆಲಿಜೆಂಟ್. ಲೆಟ್ ಮಿ ಎಂಗೇಜ್ ಹಿಮ್?" ಎಂದು ಇತ್ಯರ್ಥಮಾಡಿ, ಕೊನೆಗೆ, ದಟ್ಸ್ ಆಲ್ ರೈಟ್" ಎಂದು ಕಾಲಿಂಗ್ ಬೆಲ್ ಒತ್ತಿದನು. ಆಳು ಬಂದನು. "ಕಾಫಿ ಪ್ಲೀಸ್" ಎಂದು ಇಬ್ಬರನ್ನೂ ತೋರಿಸಿದನು.

"ಆಯಿತು. ಮೊದಲು ನಾವು ಮಾತಾಡಿದ ಕಡೆಯಿಂದ ಹೇಳಿ. ಮುಂದಕ್ಕೆ?"

"ನಾನು ಶಾಸ್ತ್ರಪಾಠ ಬಹಳ ಮಾಡಿದೋನಲ್ಲ ಸ್ವಾಮಿ. ಆದರೆ ನಮ್ಮ ತಂದೆ ಬಹಳ ಒಳ್ಳೆಯ ವಿದ್ವಾಂಸರು. ಅವರು ಮಾತನಾಡುತ್ತಿದ್ದುದನ್ನು ಕೇಳಿ ಕೇಳಿ ನಾನೂ ಎಣ್ಣೆ ಅಳೆದ ಮಾನವಾಗಿದ್ದೇನೆ. ನಾನು ಅಷ್ಟೋ ಇಷ್ಟೋ ಓದಿದೆ. ಆದರೆ ಹೊಟ್ಟೆಗೋಸ್ಕರ ಮಿಡಲ್ ಸ್ಕೂಲ್ ಸೇರಿದೆ. ಏನೋ ಎರಡನೆಯ ಯುದ್ಧ ಕಳೆಯೋವರೆಗೂ ಅಷ್ಟೇನೂ ಬಿಸಿ ತೋರಲಿಲ್ಲ. ಅಲ್ಲಿಂದೀಚೆಗೆ ಬಿಸಿ ತೋರಿ, ತಲೆ ಕಾಯಿತು. ಹೊಸ ಹೊಸ ವಿಚಾರ ತಲೆಯಲ್ಲಿ ಸುಳಿದು ಹೊಸ ಕನಸುಗಳು ಬರುತ್ತಿವೆ. ಆಗ, ಹಿಂದೆ ಸುಮಾರು ಮೂವತ್ತು ವರ್ಷದಲ್ಲಿ ನಮ್ಮ ತಂದೆ ಹೇಳುತ್ತಿದ್ದ ಮಾತು ಈಗ ಅರ್ಥವಾಗುತ್ತಿದೆ."

"ಏನು ಹೇಳುತ್ತಿದ್ದರು?"

"ನೋಡಿ, ಈ ಪವರ್ ಫ್ಯಾನಿನಲ್ಲಿ ಬೀಸುತ್ತಿರಲಿ, ಬಲ್ಬ್‌ನಲ್ಲಿ ಉರಿಯುತ್ತಿರಲಿ, ಒಂದೇ ಅಲ್ಲವೆ?"

"ಹೌದು."

"ಹಾಗೆಯೇ ತಾವು ಪ್ರೊಫೆಸರ್ ಆಗಿರಿ, ನಾನು ಬಡ ಟೀಚರ್ ಆಗಿರಲಿ, ನಮ್ಮಿಬ್ಬರಲ್ಲಿಯೂ ಇರುವ ಜೀವ ಒಂದೇ! ಮೊಳೆಯೂ ಹಾರೆಯೂ ಒಂದೇ ಕಬ್ಬಿಣದಿಂದ ಆದರೂ ಅದರ ಕೆಲಸ ಬೇರೆ! ಇದರ ಕೆಲಸ ಬೇರೆ! ಹಾಗೆ ಜೀವದ ವಿಚಾರ ಹೇಳಿದರೆ ವೇದಾಂತ; ಹೀಗೆ ಕೆಲಸದ ವಿಚಾರ ಹೇಳುವಾಗ ಲೋಕ, ಸಮಾಜ. ವೇದಾಂತದಲ್ಲಿ ಭೇದ ಇರಬಾರದು; ಲೋಕದಲ್ಲಿ ಭೇದ ಬಿಡಬಾರದು. ಆದರೆ ಈಗ ಎಲ್ಲಾ ತಳಾತಳಕು ಆಗಿದೆ. ಲೋಕದಲ್ಲಿ ಭೇದ ಇಲ್ಲ ಎನ್ನುತ್ತಾರೆ; ವೇದಾಂತ ದಲ್ಲಿ ಭೇದ ಉಂಟು ಎನ್ನುತ್ತಾರೆ. ಇದೇ ಈಗಿನ ತಲೆನೋವು."

ಪ್ರೊಫೆಸರ್ ತಲೆದೂಗುತ್ತ ಕೇಳಿದರು: "ಇದಕ್ಕೆ ನಿಮ್ಮ ಔಷಧ ವೇನು?"

"ಸ್ವಾಮಿ, ಮನುಷ್ಯನ ಮನಸ್ಸು ಬಲಿತಾಗ ಅದರಲ್ಲಿ ಧೈರ್ಯ, ವಿಶ್ವಾಸ, ಸೌಜನ್ಯ ಮೊದಲಾದ ಸದ್ಗುಣಗಳು ಬರುತ್ತವೆ. ಬಲಿಯ ದಿದ್ದಾಗ ಎಲ್ಲಾ ದುರ್ಗುಣಗಳೇ ಇರುತ್ತವೆ. ಅದರಿಂದ ಈಗ ಮನಸ್ಸು ಬಲಿಯುವ ವಿದ್ಯೆ ಕಲಿಸಬೇಕು."

"ಈಗ ಕಲಿಸುತ್ತಿರುವ ವಿದ್ಯೆ?"

"ಇಂದ್ರಿಯಗಳ ನೈಪುಣ್ಯ ಹೆಚ್ಚಿಸುತ್ತ ಮನಸ್ಸಿನ ಚಾಪಲ್ಯ ಬೆಳೆ ಸುತ್ತಿರುವ ವಿದ್ಯೆ ಸ್ವಾಮಿ ಈಗಿನದು. ಹಿಂದೆ ನಮಗೆ ಹಿರಿಯರ ಭಯ ಇತ್ತು. ಸಮಾಜದ ದಿಗಿಲು ಇತ್ತು. ದೇವರದಿಂಡರ ಅಂಜಿಕೆಯಿತ್ತು. ಇವೆಲ್ಲ ಮನಸ್ಸನ್ನು ಹತೋಟಿಯಲ್ಲಿಡುತ್ತಿದ್ದುವು. ಈಗ ಇವು ಯಾವುದೂ ಇಲ್ಲ. ಮನಸ್ಸು ಅಂಕೆಯಿಲ್ಲದ ಕಪಿಯಾಗಿದೆ. ಆ ಕಪಿ ತನಗೆ ಬೇಕಾದ್ದು ತಕೊಳ್ಳೋಕೆ ಸಿದ್ಧವಾಗಿರುವಷ್ಟು, ಬಿಡೋವಕ್ಕೆ ಸಿದ್ಧವಾಗಿಲ್ಲ. ಹೀಚು ತಿನ್ನಬೇಡ, ಹಣ್ಣಾಗುವ ವರೆಗೆ ಬಿಡು ಎಂದರೆ, ಅದಕ್ಕೆ ಆಗಲೇ ಕೋಪ ಬಂತು; ಮೇಲೆ ಬಿತ್ತು. ಹೀಗಾಗಿದೆ. ಇದು ತಪ್ಪುವ ವರೆಗೂ

ಸ್ವಾತಂತ್ರ್ಯ ಯಾರಿಗೆ ಸ್ವಾಮಿ? ತಪ್ಪು ಮಾಡುವವರಿಗೆ. ನೇರವಾಗಿ ಇರುವವರಿಗೆ ಇಲ್ಲ."

"ನಾಳೆ ನೀವು ಡಿಕ್ಟೇಟರ್ ಆದರೆ ಏನು ಮಾಡುತ್ತೀರಿ ಮೇಷ್ಟರೆ?"

"ಸ್ವಾಮಿ, ನಮಗೊಬ್ಬರು ಹೆಡ್‌ಮಾಸ್ಟರು ಬಂದರು. ಎಲ್ಲಾ ಕರೆಕ್ಟ್ ಆಗಿರಬೇಕು ಅವರಿಗೆ. ಯಾರ ಮೇಲೂ ಅಭಿಮಾನವಿಲ್ಲ. ಕರೆಕ್ಟ್, ಪ್ರಿಸ್ಟೈಜ್, ರೂಲ್ಸ್, ರೆಗ್ಯುಲೇಷನ್ ಬಿಟ್ಟು ಬೇರೆ ಮಾತಿಲ್ಲ. ಏನಾಯಿತು ಗೊತ್ತೆ? ಒಬ್ಬೊಬ್ಬರಿಗೆ ಪ್ರೀತಿಯಿಲ್ಲ. ಎಲ್ಲಾ ರೇಷನ್ ಆಗಿಹೋಯಿತು. ಫಲವೇನಾಯಿತು? ಎಲ್ಲೂ ಜೀವವಿಲ್ಲ. ಏನೋ ಬಿಕೋ ಅನ್ನುವ ಹಾಗಾಯಿತು. ಅದೇ ಇನ್ನೊಬ್ಬರು ಹೆಡ್ಮಾಸ್ಟರು. ಅವರು ಯಾರು ಬಂದರೂ ಅಭಿಮಾನ ಮುಂಚೆ; ಆಮೇಲೆ ರೂಲ್ಸು. ಆತನ ಕಾಲದಲ್ಲಿ ಎಲ್ಲಿ ನೋಡಿದರೂ ಏನೋ ಹಾಲುಕ್ಕುವಂತೆ ಒಂದು ತುಂಬು. ಈಗ ಬೇಕಾದ್ದು ಈ ಎರಡನೆಯ ಜಾತಿ. ತಾವು ಹೇಳುವುದು ಮೊದಲನೆಯ ಜಾತಿ."

"ಡಿಸಿಪ್ಲಿನ್ ಬೇಡವೇನಿರಿ?"

"ಬೇಕು ಸ್ವಾಮಿ, ಆದರೆ ಡಿಸಿಪ್ಲಿನ್ ತಂದೆತಾಯಿ ಕೊಡೋ ಶಿಕ್ಷೆ ಹಾಗಿರಬೇಕು. ಜೈಲಿನಲ್ಲಿ ಕೊಡೋ ಸಜಾದ ಹಾಗಿರಬಾರದು ಸ್ವಾಮಿ!"

"ಹಾಗೆಂದರೆ?"

"ತಂದೆತಾಯಿಗೆ ಅಭಿಮಾನವಿದೆ ಸ್ವಾಮಿ. ಮಗನ್ನ ಎದುರು ಹಾಕೊಳ್ಳೋಕೆ ಅವರಿಗೆ ಇಷ್ಟವಿರಲ್ಲ. ಜೊತೆಗೆ ಎಂದಾದರೂ ಒಂದು ದಿನ ತಮ್ಮ ಸರ್ವಸ್ವವನ್ನೂ ಅವನಿಗೆ ಕೊಟ್ಟೇ ಕೊಡಬೇಕು ಎನ್ನುವುದು ಅವರಿಗೆ ಗೊತ್ತು. ಅದರಿಂದ, ಮುಂದೆ ಮನೆಯ ಬೆಳಕಾಗಲಿ ಎಂದು ಅವರು ಶಿಕ್ಷಿಸುವುದು. ಜೈಲಿನಲ್ಲಿ, ಇರೋವರೆಗೂ ಭಯ ಬಿದ್ದಿರಲಿ; ಅಣಗಿರಲಿ ಎಂದು ತುಳಿಯುವುದಕ್ಕೆ ಶಿಕ್ಷೆ ಮಾಡುವುದು. ಎರಡೂ ಒಂದೇ ಹ್ಯಾಗೆ? ಹಾಗೆ ಡಿಕ್ಟೇಟರ್ ಬಂದರೆ ನಮಗೆಲ್ಲಾ ಮನೆಗಳೇ ಜೈಲು ಆಗುತ್ತವೆ."

"ಹಾಗಾದರೆ ಏನು ಮಾಡಬೇಕು? ಅದು ಹೇಳಿ."

"ಅಮಾವಾಸ್ಯೆಯ ದಿನ ಎಲ್ಲೆಲ್ಲೂ ಕತ್ತಲು. ಚಂದ್ರನಿಲ್ಲ. ಹಾಗೆಂದು ಯಾರೂ ಅಳುತ್ತ ಕೂತಿರುವುದಿಲ್ಲ. ಕತ್ತಲಲ್ಲಿ ಹೋಗ ಬೇಕಾದವನು ದೀಪ ಹಿಡಿದುಕೊಂಡು ಹೋಗುತ್ತಾನೆ. ಹಾಗೆ ಬೇಕಾದ ವರು ದೀಪ ಹಚ್ಚಿಕೊಳ್ಳಲಿ ಅಂತ ಬಿಟ್ಟುಬಿಡಿ."

"ಹಾಗೆಲ್ಲಾಗುತ್ತದೆ? ಸಿವಿಲೈಸ್ಡ್ ಗವರ್ನ್‌ಮೆಂಟ್ಸ್ ಎಲ್ಲಾ ಎಜುಕೇಷನ್ ತಮ್ಮ ರೆಸ್‌ಪಾನ್‌ಸಿಬಿಲಿಟಿ ಎಂದು ಅಕ್ಸೆಪ್ಟ್ ಮಾಡಿಕೊಂಡಿ ದ್ದಾರೆ."

"ಆಯಿತು ಸ್ವಾಮಿ, ಆಗಲಿ. ಹೂಂ ಅನ್ನೋಣ. ಅಲ್ಲಿಗೆ ಬಿಡೋಣ. ತಾವೂ ಬೇಕಾದಷ್ಟು ಬಲ್ಲವರು. ನಮ್ಮ ಅಲ್ಪ ಬುದ್ಧಿಗೆ ತಿಳಿದಹಾಗೆ, ಕೊನೆಯ ಮಾತಾಗಿ ಇಷ್ಟು ಹೇಳುತ್ತೇನೆ. ಇತರರಿಗಿಂತ ನಾನು ಹೆಚ್ಚಾಗಿರಬೇಕು ಎನ್ನುವುದು ಎಲ್ಲರಿಗೂ ಸಹಜವಾಗಿ ಇರೋ ಆಸೆ. ಅದನ್ನು ಯಾರೂ ಕಲಿಸಬೇಕಾಗಿಲ್ಲ; ಆದರೆ ಅದರ ಜೊತೆಗೆ ನನಗಿಂತ ಹೆಚ್ಚಾಗಿ ಇನ್ನೊಬ್ಬರಿದ್ದಾರೆ; ಎಲ್ಲರಿಗಿಂತ ಹೆಚ್ಚಾದ್ದು ಒಂದಿದೆ: ಅದಕ್ಕೆ ಎಲ್ಲರೂ ವಶರು ಅನ್ನುವುದನ್ನು ಕಲಿಸಬೇಕು. ಇಲ್ಲದಿದ್ದರೆ ಕಲಿತ ಕಲಿವೆಲ್ಲ ಕುಲಗೇಡಿಗೆ ಕಾರಣ ಸ್ವಾಮಿ."

"ಯಸ್. ದೇರ್ ಈಸ್ ಎ ಗುಡ್ ಲಾಟ್ ಇನ್ ವಾಟ್ ಯು ಸೇ. ಆಯಿತು ಈಗ ನಾನೇನು ಮಾಡಬೇಕು?"

"ನರಸಿಂಹಯ್ಯನವರು ತಮ್ಮನ್ನು ನೋಡು ಅಂದರು. ಬಂದೆ."

"ಐ ಯಾಮ್ ಗ್ಲಾಡ್ ಐ ಸಾ ಯು."

"ಶತಾನಂದಂ ರಮೇಶ್‌ಗೆ ಫೋನ್ ಮಾಡಿದರು. "ರಮೇಶ್, ನರಸಿಂಹಯ್ಯಾಸ್ ಸೆಲೆಕ್ಷನ್ ಈಸ್ ರಿಯಲಿ ಎ ಫೈಂಡ್. ಹಿ ಹ್ಯಾಸ್ ಸಮ್ ಥಿಂಗ್ ಟು ಗಿವ್. ಐ ಹಾರ್ಟಿಲಿ ಅಪ್ರೂವ್. ....ಯಸ್ ಆಗಲಿ. ಐ ಹ್ಯಾವ್ ನೋ ಅಬ್ಜಕ್ಷನ್. ಗುಡ್ ಈವಿನಿಂಗ್"

ಪ್ರೊಫೆಸರ್ ಒಂದು ಕಾಗದ ಬರೆದು ಅದನ್ನು ವೆಂಕಟೇಶಯ್ಯನ ಕೈಗೆ ಕೊಟ್ಟರು. ಅವನೂ ವಂದನೆ ಮಾಡಿ ಹೊರಡಲು, ಕೈ ಕುಲುಕಿ, "ಪದೇಪದೇ ಬರುತ್ತಿರಿ. ಇಟ್ ಈಸ್ ಎ ಪ್ಲಜರ್ ಟು ಟಾಕ್ ಟು ಯು." ಎಂದು ಸಾದರದಿಂದ ಕಳುಹಿಸಿಕೊಟ್ಟರು.

* * * * *

ರಮೇಶ್ ಮಂಜುನಾಥನಿಗೆ ಎರಡೂವರೆ ಸಾವಿರ ರೂಪಾಯಿ ತಂದೆ ಹೆಸರಿನಲ್ಲಿ ಕಳುಹಿಸಿಕೊಟ್ಟ. ಐವತ್ತು ಸಾವಿರ ರೂಪಾಯಿ ಬ್ಯಾಂಕಿನಲ್ಲಿ ಅನಾಥಾಲಯದ ಹೆಸರಿನಲ್ಲಿ ಡಿಪಾಜಿಟ್ಟು ಆಯಿತು. ಇನ್ನು ಎರಡು ಸಾವಿರ ರೂಪಾಯಿ ತಂದು ತಂದೆ ಹತ್ತಿರ ಕೊಟ್ಟು ತಿರುಪತಿಯ ಯಾತ್ರೆಗೆ ಎಂದು ಹೇಳಿದ. ಎಂಟು ದಿನ ಬಿಟ್ಟು ತ್ರಯೋದಶಿ ಹೊರಡುವುದು ಎಂದು ಗೊತ್ತಾಯಿತು. ಆಫೀಸಿಗೆ ಬಂದು ನರಸಿಂಹಯ್ಯನನ್ನು ಕರೆಸಿಕೊಂಡು "ನರಸಿಂಹಯ್ಯ, ನಿಮಗೆ ಬಹಳ ಶ್ರಮವಾಯಿತು. ಏನು ಸನ್ಯಾಸಿಗಳನ್ನು ನೋಡಿಕೊಂಡು ಬಂದು ಅನಾಥಾಲಯ ಆರಂಭಿಸುತ್ತೀರೋ? ಇಲ್ಲದಿದ್ದರೆ ಇದು ಮುಗಿಸಿಕೊಂಡು ಅಲ್ಲಿಗೆ ಹೋಗುತ್ತೀರೋ?" ಎಂದು ಕೇಳಿದ.

"ಅಲ್ಲಿಗೆ ಹೋಗಿ ಬಂದುಬಿಡುತ್ತೇನೆ."

"ಆಗಬಹುದು. ನೂರು ರೂಪಾಯಿ ಸಾಕೊ?"

"ಪಿಳ್ಳೇಗೌಡರು ನೀವು ಬನ್ನಿ, ಮಿಕ್ಕದ್ದೆಲ್ಲ ನನಗಿರಲಿ ಎಂದರು."

"ಆದರೂ ನೀವು ನನ್ನ ರಿಪ್ರೆಸೆಂಟಿಟಿವ್ ಆಗಿ ಹೋಗುವಾಗ ಬರಿ ಕೈಯ್ಯಲ್ಲಿ ಹೋಗಬಾರದು. ದಾರೀ ಖರ್ಚಿಗೆ ಒಂದು ನೂರು, ಅಲ್ಲಿನ ಖರ್ಚಿಗೆ ಒಂದು ನೂರು. ಸಾಕೋ"

"ಸಾಕು ಸ್ವಾಮಿ."

"ಬೇಕಾದರೆ ಗೌಡರ ಹತ್ತಿರ ನನ್ನ ಅಕೌಂಟಿನಲ್ಲಿ ಬೇಕಾದ್ದು ತೆಗೆದುಕೊಂಡಿರಿ."

"ಸರಿ, ಸ್ವಾಮಿ"

"ಕರ್ನ್‌ವೆರ್ಯನ್ಸ್?"

"ಬಸ್ ಇದೆಯಲ್ಲ!"

"ಬೇಕಾದರೆ ನಮ್ಮ ಕಾರ್ ತೆಗೆದುಕೊಂಡುಹೋಗಿ."

"ಗೌಡರೂ 'ಹೊರಡುವ ದಿವಸ ವೈರ್ ಮಾಡಿ. ವ್ಯಾನ್ ಕಳುಹಿಸುತ್ತೇನೆ.' ಎಂದಿದ್ದರು."

"ಬೇಡಿರಿ. ನಮ್ಮ ಕಾರು ತೆಗೆದುಕೊಂಡುಹೋಗಿ. ಐ ಷಲ್ ಮ್ಯಾನೇಜ್ ವಿತ್ ಮೈ ಫ್ರೆಂಡ್ಸ್."

"ಹಾಗಾದರೆ, ಅರ್ಧ ದಾರಿಯಾಗಿರುತ್ತೆ. ಘಾಟಿ ಸುಬ್ರಹ್ಮಣ್ಯ, ಉಡುಪಿ, ಧರ್ಮಸ್ಥಳ, ಹೋಗಿಬರೋಣವೇನು?"

"ಗುಡ್ ಐಡಿಯಾ? ನಮ್ಮ ತಂದೇನ ಕೇಳಿ, ಅವರೂ ಬರುತ್ತಾರೇನೋ?"

ದೊಡ್ಡ ರಾಯರನ್ನು ಕೇಳಿದ್ದಾಯಿತು. ಅವರು ತಿರುಪತಿ ಯಾತ್ರೆಯಿದೆಯಲ್ಲ ಎಂದರು. ತಿರುಗಿ ಹಾಗೆ ಹೀಗೆ ನೋಡಿ, ಆಳಿದು ಸುರಿದು ಬರುವ ಪಂಚಮಿ ತಿರುಪತಿಯೆಂದು ನರಸಿಂಹಯ್ಯನ ಜೊತೆಯಲ್ಲಿ ಹೊರಟರು.

ಕಾರಿನಲ್ಲಿ ಹಿಂದಿನ ಸೀಟಿನಲ್ಲಿ ದೊಡ್ಡ ರಾಯರು, ಅವರ ಮಗ್ಗುಲಲ್ಲಿ ವೀಣಾ, ಅವಳ ಮಗ್ಗುಲಲ್ಲಿ ನರಸಿಂಹಯ್ಯನ ಹದಿಮೂರು ವರ್ಷದ ಮಗ ಶ್ರೀನಿವಾಸ, ಅವನ ಮಗ್ಗುಲಲ್ಲಿ ಅವರ ತಾಯಿ. ಮುಂದಿನ ಸೀಟಿನಲ್ಲಿ ಡ್ರೈವರ್, ಅವರ ಮಗ್ಗುಲಲ್ಲಿ ನರಸಿಂಹಯ್ಯ. ಕಾರು ಮತ್ತೆ ತೋಟಕ್ಕೆ ಹೋಯಿತು.

ಗೌಡರು ಎಲ್ಲರನ್ನೂ ವಿಶ್ವಾಸವಾಗಿ ಕಂಡರು. ಎಲ್ಲರಿಗೂ ಅವರ ಮ್ಯಾನೇಜರ್ ಮನೆಯಲ್ಲಿ ಬಿಡಾರ ಸಿದ್ಧವಾಗಿತ್ತು. ಬಿಸಿನೀರು ಕಾದಿತ್ತು. ಸ್ನಾನ ಮಾಡಿ ಮಡಿಯುಟ್ಟು ಸಂಧ್ಯಾಕಾರ್ಯಗಳನ್ನು

ನೆರವೇರಿಸಿಕೊಂಡು ನರಸಿಂಹಯ್ಯನವರು ಎಲ್ಲರನ್ನೂ ಕರೆದುಕೊಂಡು ಸ್ವಾಮಿಗಳ ದರ್ಶನಕ್ಕೆ ಹೋದರು. ಅವರೂ ಆಹ್ನೀಕಗಳನ್ನೆಲ್ಲ ಮುಗಿಸಿ ಇವರನ್ನು ನಿರೀಕ್ಷಿಸುತ್ತಿದ್ದರು.

ಗೌಡರು ಎಲ್ಲರನ್ನೂ ಪರಿಚಯ ಮಾಡಿಸಿಕೊಟ್ಟರು. "ಇವರು ರಾಯರ ತಂದೆ: ಮುರಳೀಧರರಾಯರು. ಇವರು ನರಸಿಂಹಯ್ಯನವರು, ರಾಯರ ಗುಮಾಸ್ತೆ" ಎಂದು ತೋರಿಸಿದರು. ಸ್ವಾಮಿಗಳೂ ಒಬ್ಬೊಬ್ಬರನ್ನಾಗಿ ಕುಶಲ ಪ್ರಶ್ನೆ ಮಾಡಿ, ನರಸಿಂಹಯ್ಯನ ಮಗ ಶ್ರೀನಿವಾಸನನ್ನು ಕರೆದು "ಏನು ಓದುತ್ತಿದ್ದೀಯಾ ?" ಎಂದು ಕೇಳಿದರು.

"ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದೇನೆ—ಗುರುಗಳೇ!"

"ನರಸಿಂಹಯ್ಯನವರೇ, ನಿಮ್ಮ ಮಗ ನಮ್ಮನ್ನು ಗುರುಗಳೇ ಅಂದ ನೋಡಿದಿರಾ ? ನಿಮಗದು ಸಮ್ಮತವೇ ?"

"ಸನ್ಯಾಸಿಗಳನ್ನೆಲ್ಲ ಸ್ವಾಮಿಗಳೇ, ಗುರುಗಳೇ, ಎಂದು ತಾನೇ ಕರೆಯುವುದು ?"

"ಅಲ್ಲರೀ, ಒಂದು ವೇಳೆ ಅಂದ ಮಾತು ನಿಜವಾಗಿಹೋದರೆ ?"

"ಅದು ದೈವಚಿತ್ತ, ಸ್ವಾಮಿ, ಹಾಗಾದರೂ ನಾನು ದುಃಖ ಪಡೋದಿಲ್ಲ."

"ನಿಮಗೆ ಒಬ್ಬನೇ ಮಗ ಅಲ್ಲವೆ ?

"ಹೌದು. ಇನ್ನೆರಡು ಮಕ್ಕಳು ಹೋದರು"

"ಇನ್ನೆರಡು ಮಕ್ಕಳಾದರೆ ಇವನನ್ನು ನಮಗೆ ಕೊಡುತ್ತೀರಾ ?"

"ಆ ಯೋಗ ಇವನಿಗೆ ಇದೆ ಅಂತ ಜಾತಕದಲ್ಲಿಯೂ ಬರೆದಿರೋ ಹಾಗಿದೆ. ಆದರೆ ಒಂದು ಮಾತು."

"ಹೇಳಿ."

"ಇವನು ಸನ್ಯಾಸಿಯಾದರೆ ನಮ್ಮ ಗುರುಗಳು ಒಪ್ಪುವಂತಹ ಸನ್ಯಾಸಿಯಾಗಬೇಕು. ಹಾಗೆ ಮಾಡುವಿರಾ ?"

“ಇಲ್ಲ. ಈಗ ದೇಶಕ್ಕೆ ಒಬ್ಬ ಸನ್ಯಾಸಿ ಬೇಕು. ಅವನು ಸ್ವಾಮಿ ವಿವೇಕಾನಂದರ ಹಾಗೆ ಇನ್ನೊಮ್ಮೆ ಲೋಕವನ್ನೆಲ್ಲಾ ಅಲೆದು ಬರಬೇಕು. ಲೋಕಕ್ಕೊಂದು ಹೊಸ ವ್ಯವಸ್ಥೆ ಬರಬೇಕು. ಆದರ ಜೀವವನ್ನು ಅಲ್ಲಲ್ಲಿ ನಾಟಿ ಹಾಕಿ ಬರುವುದಕ್ಕೆ ಭರತಖಂಡದಲ್ಲಿ ಒಬ್ಬ ಸನ್ಯಾಸಿಯ ಜನ್ಮ ಆಗಬೇಕು. ಆ ಸನ್ಯಾಸಿ ಶಂಕರರ ಸಿದ್ಧಾಂತವನ್ನು ಒಪ್ಪಿಕೊಂಡು, ಹೊರಡುವನು. ವಿವೇಕಾನಂದರು ಮಾಡಿದ ಕಾರ್ಯ ವನ್ನು ಪೂರ್ಣ ಮಾಡುವನು.”

“ಇನ್ನಷ್ಟು ವಿವರವಾಗಿ ಅಪ್ಪಣೆಯಾಗಬೇಕು ಮಹಾಸ್ವಾಮಿ.”

“ಇಂಡಿಯಾ ಸ್ವತಂತ್ರವಾದುದು ಲೋಕದ ಬಂಧನವನ್ನು ನೀಗು ವುದಕ್ಕೆ. ಬಹಿರ್ಮುಖವಾಗಿ ಭೋಗಪಡುವುದಕ್ಕಿಂತ ಹೆಚ್ಚಿನ ಸೌಖ್ಯ ಅಂತರ್ಮುಖವಾಗಿ ಧ್ಯಾನದಲ್ಲಿ ಪಡೆಯಬಹುದು ಎಂದು ಲೋಕಕ್ಕೆ ಬೋಧಿಸುವುದಕ್ಕೆ. ಈ ಕಾರ್ಯ ಸಾಧಿಸುವುದಕ್ಕೆ ಬೀಜ ಬಿತ್ತಿ ಒಂದು ನೂರು ವರ್ಷದ ಮೇಲಾಯಿತು. ಇಂಗ್ಲಿಷ್ ವಿದ್ಯಾಭ್ಯಾಸ ಮೊದಲು ಆರಂಭವಾದ ಕಲ್ಕತ್ತೆಯಲ್ಲಿ ಒಂದು ಆಲದ ಬೀಜ ರಾಮಕೃಷ್ಣರ ರೂಪ ವಾಗಿ ಹುಟ್ಟಿತು. ಸರ್ವ ಧರ್ಮಗಳೂ ಮೂಲದಲ್ಲಿ ಒಂದೇ! ಆ ಮೂಲ ವೇದಧರ್ಮ ಎಂದು ಆ ಮಹಾನುಭಾವರು ತೋರಿಸಿಕೊಟ್ಟರು. ಜೀವನದ ಪ್ರಗತಿ ವೈರಾಗ್ಯದಲ್ಲಿದೆ, ಭೋಗದಲ್ಲಿಲ್ಲ ಎಂಬುದನ್ನು ನಿದರ್ಶನ ಮಾಡಿಕೊಟ್ಟರು. ಭೂಮಂಡಲದ ಅತ್ತ ಕಡೆಯಲ್ಲಿದ್ದ ಶಿಷ್ಯಮಂಡಲಿ ಯನ್ನು ಉದ್ಧಾರಮಾಡಲು, ತಮ್ಮ ಸರ್ವಸ್ವವನ್ನೂ ಧಾರೆಯೆರೆದು ಸ್ವಾಮಿ ವಿವೇಕಾನಂದರನ್ನು ಅಲ್ಲಿಗೆ ಕಳುಹಿಸಿಕೊಟ್ಟರು. ಅವರು ಹಚ್ಚಿ ಬಂದ ನಂದಾದೀಪ ಅಲ್ಲೆಲ್ಲಾ ಬೆಳಕು ಚೆಲ್ಲಿ ಹೊಸ ಹೊಸ ಸಿದ್ಧಾಂತಗ ಳನ್ನು ತಂದಿದೆ. ಅವನ್ನೆಲ್ಲಾ ಸಮನ್ವಯ ಮಾಡುವ ಧೀರನೊಬ್ಬ ಪುತ್ರ ಅಲ್ಲಿಗೆ ಹೋಗಬೇಕಾಗಿದೆ. ಅಲ್ಲಿ ನಾನಾಮುಖವಾಗಿ ಹರಡಿರುವ ಸಂಸ್ಕೃತಿಯ ತಂತುಗಳನ್ನೆಲ್ಲ ಒಟ್ಟಿಗೆ ಸೇರಿಸಿ ಹೊಸೆಯಬೇಕಾಗಿದೆ.”

“ಕೋಪ ಮಾಡಿಕೊಳ್ಳಬಾರದು. ಇದು ನಾವು ನಮ್ಮ ದೇಶದ ಅಭಿಮಾನದಿಂದ ಆಡಿಕೊಳ್ಳುವ ಮಾತಲ್ಲವೆ, ಮಹಾಸ್ವಾಮಿ?”

"ಸೊಗಸಾದ ಪ್ರಶ್ನವೆತ್ತಿದಿರಿ. ನರಸಿಂಹಯ್ಯನವರೆ, ನಮ್ಮಲ್ಲಿ
ಂದು ರೂಪಾಯಿ ಇಟ್ಟುಕೊಂಡು ಅದನ್ನು ಹತ್ತು ರೂಪಾಯಿ ಎಂದರೆ
ಭಿಮಾನ. ಆದರೆ ನೂರು ರೂಪಾಯಿ ಇದ್ದು ಅದರಲ್ಲಿ ಇತರರಿಗೆ
ಂಚುವುದಕ್ಕೆಂದು ಹತ್ತು ರೂಪಾಯಿ ತೆಗೆದಿಟ್ಟರೆ ಅದೂ ಅಭಿಮಾನ.
ನು ಹೇಳುತ್ತಿರುವುದು ಎರಡನೆಯ ಜಾತಿ. ನೀವು ಇನ್ನೂ ಒಂದು
ಶ್ನವೆತ್ತಬಹುದು. ನಮ್ಮ ದೇಶದಲ್ಲಿಯೇ ಹೀಗೆ ಅವ್ಯವಸ್ಥೆಯಾಗಿದೆ
ಲ್ಲಾ! ಸೆಕ್ಯುಲರ್ ಗವರ್ನ್‌ಮೆಂಟ್ ಬಂದಿದೆಯಲ್ಲಾ ಎನ್ನುವಿರಿ.
ಜ. ಎಲ್ಲಾ ದೇಶಗಳ ಎಲ್ಲಾ ಧರ್ಮಗಳೂ ಇಲ್ಲಿ ಬಂದು ತಮ್ಮ
ರ್ಥಕ್ಯವನ್ನು ಕಂಡುಕೊಳ್ಳಬೇಕಾದರೆ, ಮೊದಲು ಇಲ್ಲಿ ಶುದ್ಧಿಯಾಗ
ೇಡವೆ? ನೀವು ಹಿಂದೂಗಳು, ಆರ್ಯರು, ಬ್ರಾಹ್ಮಣರು, ಏನಾದರೂ
ರಿದುಕೊಳ್ಳಿ. ನಿಮಗೆ ಇತರರಿಗಿಂತ ನಾವು ಹೆಚ್ಚು ಎಂಬ ಅಹಂಕಾರ
ಂದಿಲ್ಲವೆ? ಸಾವಿರಾರು ವರ್ಷದಿಂದ ನಾವು ಗುಲಾಮರಾಗಿದ್ದೇವಲ್ಲ,
ಮ್ಮ ಧರ್ಮದಲ್ಲಿ ಲೋಪವಿರಬೇಕು. ಆ ಲೋಪವನ್ನು ಭರ್ತಿ ಮಾಡಿ
ಾಳ್ಳೋಣ ಎಂದು ಯಾವಾಗಲಾದರೂ ಎನ್ನಿಸಿದೆಯೇ? ಇಂಡಿಯ
ಲ್ಲಿ ನಾವು ಹೆಚ್ಚೆಂದು ಬಾಯಲ್ಲಿ ಹೇಳಿಕೊಳ್ಳುತ್ತ, ನಮ್ಮ ದೇಶದ
ೂಳಿಯರಿಗಿಂತ ಹೊಲಿಯರಾದವರ ಕೈಗೆ ಸಿಕ್ಕಿ ನರಳಿದುದನ್ನು ಮರೆ
ರಾ? ಇನ್ನೆಷ್ಟು ದಿನ ಈ ಸಂಕೋಚ ಭಾವದಲ್ಲಿ ತೊಳಲುವಿರಿ?
ೃಣ್ವಂತೋ ವಿಶ್ವಮಾದ್ಯಂ ಎಂಬುದನ್ನು ಏಕೆ ಮರೆತಿರಿ? ನಿಮ್ಮ ದೀಪ
ಲ್ಲಿ ಇನ್ನೊಬ್ಬ ದೀಪ ಹಚ್ಚಿಕೊಂಡರೆ ನಿಮ್ಮ ದೀಪದ ಬೆಳಕು ಕಮ್ಮಿ
ಆಯಿತೆ? ದೀಪ ನಮ್ಮದು, ಇದರ ಬಳಿ ಬರಬೇಡಿ ಎಂದು ಬೇಲಿ
ಾಕಲು ನಿಮಗೆ ಯಾರು ಅಧಿಕಾರ ಕೊಟ್ಟರು? ವಿಶ್ವಕ್ಕಾಗಿ ಬಂದ
ೇದಧರ್ಮವು ಕೆಲವರ ಹಿತ್ತಿಲಿನ ಮರವಾಗಿ ಮರುಗಬೇಕೇ? ಜೀವ
ೇವರ ಪ್ರಗತಿಗೆಂದು ಪ್ರಕೃತಿಯ ಸ್ವಭಾವವನ್ನು ಅನುಸರಿಸಿ ವಿಕಾಸ
ಾದ ವರ್ಣಾಶ್ರಮಧರ್ಮವಿಂದು ಇತರರ ಹಿಂಸೆಗೆ ಕಾರಣವಾಗಬೇಕೆ?
ವನ್ನೆಲ್ಲ ಈಶ್ವರನು ಇಂದು ಹೊಸ ಮೂಸೆಯಲ್ಲಿಟ್ಟು ಕರಗಿಸಿ ಇದರಲ್ಲಿರುವ
ಂದು ತೆಗೆದು ಊದಿದ ಬೆಳ್ಳಿಯನ್ನು ಗಟ್ಟಿ ಹೊಯ್ದು ಇಡಬೇಕೆಂದಿರು

ವನು. ವಿಶ್ವಧರ್ಮದ ವಿಶಾಲಮಂದಿರದಲ್ಲಿ ಎದ್ದಿರುವ ಗೋಡೆಗಳನ
ಸ್ವಾಮಿಯು ತಳ್ಳಿಹಾಕಬೇಕೆಂದು ಹೊರಟಿರುವನು. ಮತ್ತೊಮ್ಮೆ
ಜಗತ್ತು ಮನುಷ್ಯರೆಲ್ಲ ಒಂದೇ ಕುಲದವರು; ಮನುಷ್ಯರು ಕಪಿಸಂತಾ
ವಲ್ಲ; ದೇವಸಂತಾನ ಎಂದು ತಿಳಿಯುವರು ಆಗ ಹಸ್ತದ ಐದು ಬೆರಳ
ಹೆಚ್ಚುಕಡಿಮೆಗಳಿದ್ದರೂ ಹಸ್ತದ್ದೇ ಎಂದು ತಿಳಿಯುವ ಹಾಗೆ, ಧರ್ಮ
ಬೇರೆಬೇರೆಯಾಗಿ ಕಂಡರೂ ಒಂದೇ ಮೂಲದ್ದು ಎಂದು ಅರಿತು ನಂಬ
ವರು. ಅದಕ್ಕಾಗಿ ಇನ್ನೊಬ್ಬ ವಿವೇಕಾನಂದನು ಬರಬೇಕಾಗಿದೆ.
ವಿವೇಕಾನಂದನನ್ನು ತಯಾರಿಸುವ ಮಹಾಶಕ್ತಿಯು ಇಂದು ನಿಮ್ಮನ
ಕೇಳುತ್ತಿದೆ. ದಾನಮಾಡುವಿರಾ? ಲೋಕೋಪಕಾರ ಮಾಡುವಿರಾ?

ನರಸಿಂಹಯ್ಯನಿಗೆ ಅವರ ಮಾತು ಕೇಳಿ ನೈ ನವಿರೆದ್ದಿತು
ಕಣ್ಣಲ್ಲಿ ಆನಂದಾಶ್ರುಗಳು ಉದುರಿದುವು. ಕಂಠವು ಬಿಗಿದುಬಂತು
ಎದ್ದು ನಿಂತು ಕೈ ಮುಗಿದು, “ದೇವಾ ಈಶ್ವರಚಿತ್ತಕ್ಕೆ ಅಡ್ಡಿ ಬರುವ
ದುಷ್ಪ್ರವೃತ್ತಿ ನನ್ನಲ್ಲಿ ಹುಟ್ಟದಿರಲಿ. ನನ್ನ ಪಾಲಿನ ಸ್ವಾಮ್ಯವನ್ನು
ಕೊಟ್ಟಿದ್ದೇನೆ. ಆದರೆ ಹೆತ್ತ ಕರುಳು, ಅಲ್ಲಿದೆ” ಎಂದು ನಮಸ್ಕಾ
ಮಾಡಿದನು.

ಸ್ವಾಮಿಗಳೂ ಆತನ ಮಾತು ಕೇಳಿ ಆನಂದಪಟ್ಟರು. ಅವರಿಗೂ
ಕಣ್ಣು ಒದ್ದೆಯಾಗಿ, ಗಂಟಲು ಬಿಗಿದುಬಂತು. ಒಂದು ಗಳಿಗೆ ಸುಮ್ಮ
ನಿದ್ದು “ಏನು ತಾಯಿ, ಒಬ್ಬ ಮಗನನ್ನು ಕೊಡಿ, ಇಬ್ಬರು ಮಕ್ಕಳನ್ನು
ಎತ್ತಿಕೊಳ್ಳಿ. ಆಗಬಹುದೇ?” ಎಂದರು.

ನರಸಿಂಹಯ್ಯನ ಪತ್ನಿ ಏನೋ ಸ್ವಪ್ನದಲ್ಲಿ ಇದ್ದವರಂತೆ ಕಣ್ಣ
ಬಿಟ್ಟು, ಗಂಡನು ನಿಂತಿರುವುದನ್ನು ಕಂಡು ತಾವೂ ಎದ್ದು ನಿಂತು. ಅ
ನಿದ್ದೆಯಲ್ಲಿ ಮಾತನಾಡುವರಂತೆ, “ಮನೇ ದೇವರಾಗಿ ಬಂದು ನಿಂತ
ಕೊಂಡಿದ್ದೀಯೆ. ಮೂಗುತೀ ಕೊಡು, ಎರಡು ಕಿವಿಗೂ ಎರಡು ವಾಲ
ಕೊಡುತ್ತೀನಿ ಅಂತಿದ್ದೀಯೆ. ವಜ್ರದ ಮೂಗುತಿ ಬೇಕು ಎಂಬವನು
ಮೂಗೇಕೆ ಬರೀದು ಮಾಡುತ್ತೀಯೆ? ಅವಕ್ಕೂ ಒಂದು ಕೊಡು” ಎಂದ
ಅಡ್ಡಬಿದ್ದರು.

"ಆಗಬಹುದು. ಎರಡು ಗಂಡು ಒಂದು ಹೆಣ್ಣು."

"ಅಷ್ಟೇ ಸಾಲದು."

"ಇನ್ನೇನು ಬೇಕು?"

"ನಮ್ಮ ಮನೆ ನಂದಾದೀಪ ಹತ್ತು ಕಾಲ ತುಪ್ಪದ ನಂದಾದೀಪ
ರಬೇಕು."

"ಇನ್ನು ನೂರು ವರ್ಷ ನಿಮ್ಮ ಮನೆಯಲ್ಲಿ ತುಪ್ಪದ ನಂದಾದೀಪ
ಗಲಿ."

"ಅಭಯಹಸ್ತವೆಲ್ಲಿ ಮತ್ತೆ?"

"ಇಗೋ?" ಸನ್ಯಾಸಿಗಳು ಕೈನೀಡಿದರು. ಆ ಮುತ್ತೈದೆಯು
ೋಷವಾಗಿ, ನಮಸ್ಕಾರಮಾಡಿ "ಕೊಟ್ಟೆ" ಎಂದರು. ಸನ್ಯಾಸಿಗಳು
ಬಿಟ್ಟು ಗೌಡನ ಮುಖ ನೋಡಿದರು. ಗೌಡ ದೊಡ್ಡ ಹೆಂಡಿತಿಯ
ಖನೋಡಿದನು. ಅವಳು ಏನೋ ತರುವುದಕ್ಕೆ ಅತ್ತ ಹೋದಳು.

ವೀಣಾ ನಕ್ಕಳು. ಎಲ್ಲರ ಕಣ್ಣು ಅತ್ತ ತಿರುಗಿತು. ಅವಳು
ಮಿಗಳೇ, ನನ್ನ ಪಾಲು ನಾನು ಕೊಡದಿದ್ದರೆ?" ಎಂದಳು.

ಸ್ವಾಮಿಗಳು ಥಟ್ಟನೆ ಉಗ್ರವಾಗಿ ಅತ್ತ ತಿರುಗಿದರು. "ಪಾಲು
ಸುವವಳು ನೀನು ಯಾರು?" ಎಂದು ಗರ್ಜಿಸಿದರು.

ವೀಣಾ ಕೊಂಚವೂ ಹೆದರದೆ, "ಶ್ರೀನಿವಾಸ ನನ್ನ ಗಂಡ. ನಾನು
ನನ್ನು ಒಪ್ಪಿದ್ದೇನೆ. ನಾನು ಕೊಡುವುದಿಲ್ಲ." ಎಂದಳು.

ಸನ್ಯಾಸಿಗಳು ಆ ಮಾತನ್ನು ಹುಡುಗಿಯ ಹುಡುಗು ನುಡಿಯೆಂದು
ಲಿಲ್ಲ. ಒಂದು ನಿಟ್ಟುಸಿರುಬಿಟ್ಟರು. "ಆಗಲಿ, ಬಿಡು, ಸುಂಕ
ಟ್ಟರಾಯಿತೋ ಇಲ್ಲವೋ? ಕಾಲಬಂದಾಗ ಸಾಲತೀರಿಸಿಕೋ.
ಮ ನಾಣ್ಯ ಬೇಕೆಂದಾಗ ಅವನು ನೋಟು ಕೊಡುತ್ತಾನೆ ಹೋಗು."
ದರು.

ವೀಣಾ ಅಳುತ್ತ ಎದ್ದು ಹೋದಳು.

ಮಲ್ಲಮ್ಮನು ಆ ವೇಳೆಗೆ ಒಂದು ತಟ್ಟೆ ತಂದಿಟ್ಟಳು. ಅದರ ತುಂಬಾ ರೂಪಾಯಿಗಳು-ನೋಟುಗಳು. ಒಂದು ಬಂಗಾರದ ತಾಯಿತಿ.

"ಏನು ಶ್ರೀನಿವಾಸ, ನೀನೇನು ಹೇಳುತ್ತೀಯೆ? ನಿನ್ನ ಇಷ್ಟ ವೇನು?" ಸನ್ಯಾಸಿಗಳು ಕೇಳಿದರು.

"ಏನೋ ತಮ್ಮ ಜೊತೆಯಲ್ಲಿ ಯಾವಾಗಲೂ ಇರಬೇಕು ಎನ್ನಿಸುತ್ತಿದೆ."

"ಈಗ ಸದ್ಯದಲ್ಲಿ ನಿಮ್ಮ ತಾಯಿ ಅಪ್ಪಣೆಯಾಗುವವರೆಗೂ ನಾವು ನಿನ್ನ ಜೊತೆಯಲ್ಲಿರುತ್ತೇವೆ. ಆಮೇಲೆ ನೀನು ನಮ್ಮ ಜೊತೆಯಲ್ಲಿರುವಂತೆ ಇಲ್ಲಿ ಬಾ. ನರಸಿಂಹಯ್ಯನವರೇ, ನೀವು ದಂಪತಿಗಳು ಅಪ್ಪಣೆ ಕೊಡಿ. ಇವನಿಗೊಂದು ಸಂಸ್ಕಾರಮಾಡುತ್ತೇವೆ."

ಇಬ್ಬರೂ ಕೀಲು ಬೊಂಬೆಗಳಂತೆ ಒಬ್ಬರ ಮುಖ ಒಬ್ಬರು ನೋಡಿಕೊಂಡು "ಆಗಬಹುದು" ಎಂದರು.

ಸನ್ಯಾಸಿಗಳು ಹುಡುಗನ ತಲೆಯಮೇಲೆ ಕೈಯಿಟ್ಟರು. "ಏನಾಗುತ್ತಿದೆ?" ಎಂದು ಕೇಳಿದರು. ಹುಡುಗನು ಒಂದು ಗಳಿಗೆ ತನ್ನಲ್ಲಿ ಆಗುತ್ತಿರುವ ಕಾರ್ಯವನ್ನು ನೋಡಿ, ಅದರ ಸುಖವನ್ನು ಅನುಭವಿಸಿ, "ಸಣ್ಣನೆ ಸೋನೆ ಮಳೆ ಮೇಲೆ ಉದುರುತ್ತಿದೆ. ಅದು ಮೈಯೆಲ್ಲ ವ್ಯಾಪಿಸಿ, ಬಹು ಸುಖಪಡಿಸುತ್ತಿದೆ." ಎಂದನು.

"ಹುಬ್ಬಿನ ನಡುವೆ ಮನಸ್ಸಿಟ್ಟು ಆ ಸುಖದ ಮಧ್ಯೆ ಏನಿದೆ ನೋಡು."

"ಅಲ್ಲೊಂದು ನೀಲಿಯ ಬೆಳಕಿದೆ."

"ಅದನ್ನು ನೋಡಿ, ಅದಕ್ಕೆ ಪಂಚೋಪಚಾರ ಪೂಜೆಮಾಡು. ಯಾವಾಗಲೂ ದರ್ಶನ ಕೊಡುತ್ತಿರಬೇಕೆಂದು ಕೇಳಿಕೊ."

ಹುಡುಗನು ಎದ್ದು ನಮಸ್ಕಾರ ಮಾಡಿದನು. "ಇದು ಯಾರಿಗೂ ಕಾಣದ್ದು ನನಗೆ ಕಂಡಿತು ಎಂದುಕೊಳ್ಳಬೇಡ. ಎಳ್ಳುಎಳ್ಳಿನಲ್ಲಿಯೂ

ಎಷ್ಟೆ ಇರುವಂತೆ ಇದು ದೇಹದೇಹದಲ್ಲೂ ಇದೆ, ಬೇಕೆಂದವರಿಗೆಲ್ಲ ಕಾಣುತ್ತದೆ. ದಿನವೂ ಸಾವಿರ ಗಾಯತ್ರಿ ಮಾಡು. ತಂದೆತಾಯಿಗಳ ಮಾತು ವೇದವಾಕ್ಯವೆಂದು ನಡೆದುಕೊ. ಇನ್ನು ಹತ್ತುವರ್ಷ ಅವರಲ್ಲಿ ಇದ್ದು ಓದನ್ನೆಲ್ಲಾ ಪೂರೈಸು. ಮುಂದಿನ ಮಾತು ಆಮೇಲೆ. ನರಸಿಂಹಯ್ಯ, ಈ ನಮ್ಮ ವಸ್ತು ನಿಮ್ಮಲ್ಲಿ ಇರಲಿ. ನಿಮಗೆ ಮಗನಿಗೆ ಏನೇನು ಓದಿಸಬೇಕು ಎಂದು ತೋರಿದರೆ ಅದನ್ನೆಲ್ಲ ಓದಿಸಿ, ಖರ್ಚಿನ ವಿಚಾರ ಯೋಚಿಸಬೇಡಿ, ಇಕೋ, ತಕ್ಕೊಳ್ಳಿ. ಐದು ಸಾವಿರ ರೂಪಾಯಿ ಇವೆ. ಇದು ಬೀಜಧನ. ಇದು ಒಂದಕ್ಕೆ ಹತ್ತಾಗಿ, ಹತ್ತಕ್ಕೆ ನೂರಾಗಿ ಬೆಳೆಯಲಿ. ತಾಯಿ, ನಿಮಗೆ ಇನ್ನು ಮೂರು ಒಡವೆ ಸಿಕ್ಕುವವರೆಗೂ ಈ ಒಡವೆ ನಮ್ಮದಾಗಿ ನಿಮ್ಮಲ್ಲಿರಲಿ. ನಿಮ್ಮ ಸಂತೋಷ ದಿನದಿನಕ್ಕೂ ಬೆಳೆಯಲಿ. ಹಾಲುಕ್ಕಿದ ಹಾಗೆ ಉಕ್ಕಲಿ. ಏನು ರಾಯರೇ? ತಾವೇನೂ ಮಾತೇ ಆಡಲಿಲ್ಲವಲ್ಲ?"

"ನಮ್ಮ ಮಗ ಬಂದಾಗಲೇ ನಾ ಬರಬೇಕಿತ್ತು. ಅಂತ ಈಗ ಒದ್ದಾಡುತ್ತಿದ್ದೇನೆ. ಏನು ಹೇಳ್ಲಿ ?"

"ನೀವು ಮಂಜನಾಥನ ಸೇವೆ ಆಗಲೇ ಮಾಡಿದ್ದರೆ ಆಗಲೇ ಬರುತ್ತಿದ್ದಿರಿ. ಆಯಿತು ಈಗಲಾದರೂ ಬಂದರಲ್ಲ. ತಿರುಪತಿಗೂ ಹೋಗಿ ಬಂದು ಸುಖವಾಗಿದ್ದುಬಿಡಿ ರಾಯರೆ?''

''ಆದೀತು ಮಾರಾಯರೇ! ನಮ್ಮ ವೀಣಾ ಸುಖವಾಗಿರಬೇಕು."

"ವೀಣಾ ಅಂತ ಹೆಸರಿಟ್ಟಿದ್ದೀರಿ. ಏನಮ್ಮ ವೀಣೆ ನುಡಿತಿದ್ದರೆ ಸುಖವೋ?. ಮೂಲೆಯಲ್ಲಿ ಮುಸುಕಿ ಹಾಕಿಕೊಂಡು ಕೂತಿದ್ದರೆ ಸುಖವೋ?"

"ಮುಸುಕಿ ಹಾಕಿಕೊಂಡಿದ್ದರೆ ಅದಕ್ಕೆ ಸುಖ. ನುಡೀತಿದ್ದರೆ ಇತರರಿಗೆ ಸುಖ."

"ನಿನಗೆ ಹೇಗೆ ಇರಬೇಕು ಎಂದಾಶೆ?"

“ನುಡಿದು ಸುಖಪಡಿಸಿ, ಸುಮ್ಮನಾಗಿ, ಪೂಜೆಮಾಡಿಸಿಕೊಳ್ಳ ಬೇಕು.”

“ಆ ಬುದ್ಧಿ ನೋಡಿದಿರಾ? ಹೌದು. ಹೊಸಯುಗದ ಹೆಣ್ಣು. ನುಡೀಬೇಕು. ಸುಖಪಡಿಸಬೇಕು. ಸುಮ್ಮನಾಗಬೇಕು. ಪೂಜೆ ಮಾಡಿಸಿಕೊಳ್ಳಬೇಕು. ಆಗಲಮ್ಮ, ಅಪ್ಪಾ ಆಗಲಿ, ಯಾರ ರುಣ ಎಷ್ಟೆಷ್ಟು ತಂದಿದ್ದೀಯೊ ಅಷ್ಟು ಕೊಟ್ಟು ಕೊನೆಗೆ ಪೂಜೆಮಾಡಿಸಿಕೊಳ್ಳು ವವಳೀ ಆಗು” ಎಂದು ಎಲ್ಲರನ್ನೂ ಬೀಳ್ಕೊಂಡರು.

ಗೌಡನೂ ಮಲ್ಲಮ್ಮನೂ ಇನ್ನೂ ನಿಂತಿದ್ದರು.

“ಏನು ಗೌಡರೆ?”

“ಏನು ಹೇಳಲಿ. ಬುದ್ಧಿ, ಇವೊತ್ತಿನ ಮಾತು ಕೇಳಿ ಗಂಗೆಯಲ್ಲಿ ಮಿಂದಾಗಾಯಿತು.”

“ಎಲ್ಲಾ ನಿಮ್ಮ ಪುಣ್ಯ. ನೀವು ಆ ಭಾರಿ ಹಣ ಕೊಡದಿದ್ದರೆ ಇದೆಲ್ಲಿ ಸಾಧ್ಯವಾಗುತ್ತಿತ್ತು? ಮುಖ್ಯ ನಿಮಗಿಂತ ನಿಮ್ಮ ಹೆಂಡತಿ, ನಮ್ಮ ತಾಯಿ, ಮಲ್ಲಮ್ಮನ ಪುಣ್ಯ ದೊಡ್ಡದು. ಏನು ತಾಯಿ, ಮಗನ್ನ ಕೊಂಡುಕೊಂಡೆ, ಆದರೆ ಮಗ ಸನ್ಯಾಸಿ.”

ಮಲ್ಲಮ್ಮ ಕಣ್ಣೀರು ಚೆಲ್ಲಾಡಲು ಸೆರಗಿಂದ ಒರಸಿಕೊಂಡು, “ಅಪ್ಪಾ, ನಾ ನಿನ್ನ ಮಗಳಾದೆ. ನನ್ನ ಉದ್ಧಾರ ಮಾಡಿದೆ. ನನ್ನ ದೊರೆ. ನನಗೆ ಮಕ್ಕಳಿಲ್ಲ, ನಾನು ಬಂಜೆ ಅನ್ನೋ ದುಕ್ಕ ಉಕ್ಕುತ್ತಿತ್ತು. ಅದು ತಪ್ಪಿದೆ. ನನ್ನ ಗಂಡನಿಗೆ ಮಗನಾಗಲಿ. ನಿನ್ನ ಹರಕೆ ನಿಜವಾಗಲಿ. ಆ ಮಗನೇ ನನಗೂ ಗತಿಕಾಣಿಸಲಿ,” ಎಂದು ನಮಸ್ಕಾರ ಮಾಡಿದಳು.

ಗೌಡನು “ಪರಶಿವನೇ ಈ ರೂಪವಾಗಿ ಬಂದಾಗದೆ. ಏಕೆ ಇದ್ದು ದೆಲ್ಲಾ ಕೊಟ್ಟು ಜೋಗಿಯಾಗಿ ಇವನ ಹಿಂದೆ ಹೋಗಬಾರದು?” ಎಂದು ಯೋಚಿಸುತ್ತಿದ್ದನು.

ಕೂಡಲೇ ಸನ್ಯಾಸಿ “ಅದೆಲ್ಲ ಕೂಡದು. ಮಲ್ಲಮ್ಮನ ಮನಸ್ಸು

ನೋಯದಂತೆ ಮನೆವಾಳತನ ನಡೆಸಿಕೊಂಡು, ಹಾದಿಬೀದಿ ಹಿಡಿದು ಬಂದ ಜೋಗಿ ಜಂಗಮರಿಗೆ ಹಿಟ್ಟುರೊಟ್ಟಿ ಆದರಿಸಿದರೆ ಶಿವನ ಕೈಲಾಸ ನಿಮ್ಮ ಮನೆ ಬಾಗಿಲಿಗೆ ಬರುತದೆ ಗೌಡರೆ!" ಎಂದರು.

ಗೌಡನು ಏನೋ ಮನಸಿನಲ್ಲಿ "ಹಾಗೇ ಆಗಲಿ ಬುದ್ಧಿ." ಎಂದು ಕೈಮುಗಿದನು.

"ನಮ್ಮ ಕೆಲಸವಾಯಿತು. ನಾವು ನಾಳೆ ಮುಂದಕ್ಕೆ ಹೊರಡೋಣವೋ?"

"ನರಸಿಂಹಯ್ಯನವರು ಎರಡು ದಿನ ಇರುತಾರೆ. ಅಲ್ಲದೆ, ತಾವು ಹೇಳಿದ್ದ ವಾಯಿದೆಗೆ ಇನ್ನೂ ಎಂಟು ದಿನ ಇದೆ."

"ಆಗಲಿ. ಇನ್ನೆಂಟು ದಿನದಲ್ಲಿ ಕಳೆದುಹೋಗುವುದೇನು?"

೫

ರಮೇಶನು ಮನೆಯವರೆಲ್ಲರನ್ನೂ ಕರೆದುಕೊಂಡು ತಿರುಪತಿಗೆ ಹೋಗಿದ್ದನು. ಬಲವಂತಮಾಡಿದರೂ ಪ್ರಾಣೇಶನು ಹೋಗಲಿಲ್ಲ. ಹೊಸದಾಗಿ ಆರಂಭಿಸಿರುವ ಕನ್ಯಾಮಂದಿರವನ್ನು ನೋಡಿಕೊಳ್ಳುವ ನೆಪದಿಂದ ಅವನು ಹಿಂದೆಯೇ ನಿಂತಿದ್ದನು. ಆದರೆ ಅವನಿಗೆ ಗೊತ್ತಿತ್ತು ಇನ್ನೇನೋ ಪಾಪದ ಯೋಚನೆ ಬಹಳವಾಗಿತ್ತು ಎಂದು. ಆದರೆ ಯಾರೊಡನೆಯೂ ಬಾಯಿ ಬಿಡುವಂತಿರಲಿಲ್ಲ.

ಮಗ ಮಲ್ಲೇಶನಿಂದ ರಮೇಶನ ಹೆಂಡಿತಿ ಮೋಹನೆಯ ಮುಖದಲ್ಲಿ ಸನ್ಯಾಸಿಗಳಿಗೆ ನಮಸ್ಕಾರಮಾಡುವಾಗ ಕುಂಕುಮವಿರಲಿಲ್ಲ ಎಂಬ

ಮಾತು ಅವನಿಗೆ ತಿಳಿದಿತ್ತು. ಅದರಮೇಲೆ ಅವನ ಮನಸ್ಸು ಅದೇಕೋ ಒಂದು ಭಾರಿಯ ಆಕಾಶಮಂದಿರವನ್ನು ಕಟ್ಟಲು ಹೊಂಚುತ್ತಿತ್ತು. ಅನೇಕ ವೇಳೆ ಅವನಿಗೆ ಇದ್ದಕ್ಕಿದ್ದ ಹಾಗೆಯೇ 'ನೀವಿಬ್ಬರೂ ಇನ್ನು ಬಹಳ ಕಾಲ ವಕೀಲಿ ನಡೆಸುವಂತಿಲ್ಲ' ಎಂದ ಸನ್ಯಾಸಿಗಳ ವಚನವು ನೆನಪಾಗುವುದು. ಮೋಹನೆಯ ಮುಖದಲ್ಲಿ ಕುಂಕುಮವಿಲ್ಲದಿದ್ದುದೂ ಅದೂ ಕಪಿಲಾ ಕಾವೇರಿಗಳಂತೆ ಸಂಗಮವಾಗಿ ಮುಂದಕ್ಕೆ ಹರಿದು ಹೋಗುವುದು. "ಹಾಗಾದರೆ ರಮೇಶನು ಅಲ್ಪಾಯುವೋ?" ಎನ್ನಿಸುವುದು. ಪ್ರಾಣೇಶನಿಗೆ ಮುದುಕನ ಗತಿಯೇನು ಎನ್ನಿಸುವುದೇ ವಿನಾ, ಇನ್ನೂ ಪ್ರಾಯದವಳು ಮೋಹನೆಯ ಗತಿಯೇನು? ವೀಣಾ ಏನಾಗುವಳೋ ಎಂಬ ಯೋಜನೆಯೇ ಬಾರದು. ಏನಾದರೂ ಮಾಡಿ ವೀಣಾನನ್ನು ತನ್ನ ಮಗನಿಗೆ ತಂದುಕೊಂಡರೆ ಎಂದು ಒಂದು ಚಪಲ ಆಗಲೇ ಮೂಡಿತ್ತು. ಆದರೆ, ಒಂದು ದಿಗಿಲು; ಮಲ್ಲೇಶ ಈಗಿರುವಂತೇ ಇದ್ದರೆ, ಕಾಲೇಜು ಮೊಕ ಕೂಡಾ ನೋಡುವನೋ ಇಲ್ಲವೋ? ವೀಣಾದು ಪ್ರಚಂಡಬುದ್ಧಿ. ರೂಪದಿಂದ ಚಿಂತೆಯಿಲ್ಲ; ವಿದ್ಯಾಬುದ್ಧಿಗಳಿಂದ ಬಹಳ ಅಸಮ, ಜೋಡಿಯಿಲ್ಲ: ತಾಳಿಕೆಯಿಲ್ಲ; ಎನ್ನುವುದು ಅವನಿಗೂ ಗೊತ್ತು, ಬಲವಂತಮಾಡಿ ಮದುವೆ ಮಾಡಿದರೆ ಮನೆ ಉದ್ಧಾರವಾಗುವುದಕ್ಕೆ ಬದಲು ದಾರಿಗೆ ದಾರಿ ಹಿಡಿದರೆ? ಎಂದು ಅದೂ ಒಂದು ದಿಗಿಲು. ಆದರೂ "ಇರಲಿ, ಎಲ್ಲದಕ್ಕೂ ಒಂದು ಉಪಾಯವಿದೆ." ಎಂದು ತರ್ಕ ವಿತರ್ಕಗಳನ್ನು ಆಶಾವಾದವು ತಟ್ಟಿ ಮಲಗಿಸುವುದು.

ರಮೇಶನು ಎಂಟನೆಯ ದಿನ ಹಿಂತಿರುಗಿ ಬರಬೇಕಾಗಿತ್ತು: ಬರಲಿಲ್ಲ. ಅವನಿಂದ ಒಂದು ಕಾಗದವು ಬಂತು; ಇಂಗ್ಲೀಷಿನಲ್ಲಿ ಬರೆದಿತ್ತು: "ಏನೋ ಹುಚ್ಚು ಹತ್ತಿ ದಕ್ಷಿಣ ಭಾರತವೆಲ್ಲ ಸುತ್ತಿ ಬರೋಣ ಎಂದು ಹೊರಟಿದ್ದೇವೆ. ಐದು ಸಾವಿರ ರೂಪಾಯಿ ಮದರಾಸಿನ ವಿಳಾಸಕ್ಕೆ ಕಳುಹಿಸು. ಕನ್ಯಾಮಂದಿರದ ಆರಂಭೋತ್ಸವಕ್ಕೆ ಎಲ್ಲ ಸಿದ್ಧ ಮಾಡಿರು. ನಾವೂ ಆದಷ್ಟು ಬೇಗ ಬಂದುಬಿಡುತ್ತೇವೆ."

ಪ್ರಾಣೇಶನು ಹಣವನ್ನು ಕಳುಹಿಸಿದನು. "ಇಷ್ಟು ಹಣ ಖರ್ಚು

ಮಾಡುವುದಕ್ಕೆ ಮುದುಕ ಹೇಗೆ ಒಪ್ಪಿದ? ರಮೇಶನಿಗೆ ಈ ಯಾತ್ರೆಯ ಹುಚ್ಚು ಏತಕ್ಕೆ ಹಿಡಿಯಿತು? ಈ ವಿಚಿತ್ರ ಏನಾದರೂ ವಿಪರೀತವಾಗುವುದಾದರ ಸೂಚನೆಯೋ?" ಎಂದು ಅವನಿಗೆ ಏನೇನೋ ಯೋಚನೆಗಳು.

ಯೋಚನೆಗಳು ಹರಿಯಲಿಲ್ಲ. ಸುಮಾರು ಹದಿನೈದು ದಿನವಾಯಿತು. ರಮೇಶನಿಂದ ಕಾಗದವೂ ಬಂದಿಲ್ಲ. ನರಸಿಂಹಯ್ಯನು ಬಂದನು. ಪ್ರಾಣೇಶನಿಗೆ ಅವನನ್ನು ನೋಡಿ ಏಕೋ ದಿಗಿಲಾಯಿತು. "ಏನು, ನರಸಿಂಹಯ್ಯ, ಬಂದಿರಿ?" ವಿಶ್ವಾಸದಿಂದ ವಿಚಾರಿಸಿದನು.

"ರಾಯರಿಂದ ಏನಾದರೂ ಕಾಗದ ಬಂತೆ?"

"ಏನೂ ಇಲ್ಲವಲ್ಲ?"

"ಈ ಊರಿನ ಸಮಾಚಾರ ಕೇಳಿದಿರಾ ಸರ್?"

"ಏನು?"

"ಬ್ಯಾಂಕಿನ ವಿಚಾರವಾಗಿ ಏನೇನೋ ಗುಜಗುಂಪಲು"

"ಏನು ಸಮಾಚಾರ?"

"ಅಲ್ಲಿ ಹೆಡ್ಡಾಫೀಸಿನಲ್ಲಿ ಬ್ಯಾಂಕ್‌ಮೇಲೆ ರ್ಶ ಆಗಿದೆಯಂತೆ!"

"ನಿಮಗೆ ಹೇಗೆ ತಿಳೀತು?"

"ಅವರಿವರ ಮಾತು. ಬ್ಯಾಂಕ್ ಮ್ಯಾನೇಜರ್ ನಿನ್ನೆಯಿಂದ ಮೂರು ನಾಲ್ಕು ಸಲ ಫೋನ್ ಮಾಡಿದ್ದರು. ತಾವೂ ಸಿಕ್ಕಲಿಲ್ಲವಂತೆ!"

"ನಿನ್ನೆ ನಾನು ಊರಲ್ಲಿರಲಿಲ್ಲ. ನೀವು ಮ್ಯಾನೇಜರ್ ಕಂಡಿದ್ದಿರಾ?"

"ರಾಯರು ಊರಿಗೆ ಬಂದರೆ? ಅವರ ಅಡ್ರೆಸ್ ತಿಳಿದಿದೆಯೇ?" ಎಂದು ಎರಡು ಮಾತೇ ಅವರದು. ಇನ್ನೇನೂ ಹೇಳುವುದಿಲ್ಲ. ನೀವು ಫೋನ್ ಮಾಡಿ ನೋಡಿ."

ಪ್ರಾಣೇಶನು ಫೋನ್ ಮಾಡಿದನು. ಮ್ಯಾನೇಜರ್ ಮನೆಯಿಂದ ಮಾತನಾಡಿದರು: "ರಾಯರ ಬಳಿ ಮಾತನಾಡಬೇಕಾದ್ದು ಇತ್ತು.

ಅದೂ ಅರ್ಜೆಂಟಾಗಿ. ಅಡ್ರೆಸ್ ತಿಳಿದಿದ್ದರೆ ಟೆಲಿಗ್ರಾಂ ಕೊಡಿ. ರನ್ನಿನ ವಿಚಾರ ತಮಗೆ ಏನೂ ತಿಳಿಯದು. ಪೇಪರಿನಲ್ಲೂ ಅಂತಹ ಸಮಾಚಾರ ವೇನೂ ಇಲ್ಲ."

ಪ್ರಾಣೇಶನಿಗೆ ಅನುಮಾನ ಹುಟ್ಟಿತು. ಮ್ಯಾನೇಜರ್ ದನಿಯಲ್ಲಿ ಏನೋ ಟೊಳ್ಳು ಇತ್ತು ಅಂತ ಅನ್ನಿಸಿತು ಅವನಿಗೆ. ಕೊಂಚ ಹೊತ್ತು ಯೋಚನೆಮಾಡಿ ಹೇಳಿದನು. "ನರಸಿಂಹಯ್ಯ, ನೀವು ಮನಸ್ಸುಮಾಡಿ, ರಮೇಶ್ ಕಾಗದ ಬಂದು ಇವೊತ್ತಿಗೆ ಏಳು ದಿವಸವಾಗಿದೆ. ಅವನು ಮದರಾಸಿನಿಂದ ಬರೆದದ್ದು. ಅದರಿಂದ ಮದರಾಸ್ ಬಿಟ್ಟು ಏಳು ದಿವಸ ವಾಗಿದೆ. ಅವರೂ ಇವೊತ್ತಿನ ದಿವಸ ರಾಮೇಶ್ವರಕ್ಕೆ ಬಂದಿರಬೇಕು. ಅದೇನೂ ಅಂತೀರೋ? ಯಾತ್ರೆ ಅಂದಮೇಲೆ ಪ್ರದಕ್ಷಿಣವಾಗಿ ತಾನೇ ಬರಬೇಕು? ಸರಿ. ನೀವು ಹೊರಡಿ. ಪ್ಲೇನಿನಲ್ಲಿ ನೇರವಾಗಿ ಮಧುರೆಗೆ ಹೋಗಿ. ಅಲ್ಲಿಂದ ರಾಮೇಶ್ವರ ಅಂಡ್ ಬ್ಯಾಕ್. ಅಲ್ಲಿ ಸಿಕ್ಕದಿದ್ದರೆ ಟ್ರಾವೆಂಕೂರಿಗೆ ಬನ್ನಿ. ಹೊರಡುವಾಗ ಟೆಲಿಗ್ರಾಂ ಕಳುಹಿಸಿ. ಸರಿ, ನಿಮಗೆ ಒಂದು ಸಾವಿರ ರೂಪಾಯಿ ಸಾಕೊ?"

ಮಧ್ಯಾಹ್ನ ಮಧುರೆಗೆ ಹೊರಡುವ ಪ್ಲೆಯಿನ್‌ನಲ್ಲಿ ನರಸಿಂಹಯ್ಯನಿಗೆ ಸೀಟೊಂದು ಬುಕ್ಕಾಯಿತು. ಅವನೂ ಹೊರಟನು.

ಅವೊತ್ತಿನ ದಿನ ಪ್ರಾಣೇಶನಿಗೆ ಕೋರ್ಟಿನಲ್ಲಿ ಬಹಳ ಕೆಲಸವಿತ್ತು. ಇದ್ದಿದ್ದರೆ ಕೋರ್ಟು ಮುಗಿಯುವವರೆಗೂ ಟೈಟ್ ವರ್ಕ್. ಆದರೆ ಅವನ ಮನಸ್ಸಿಗೆ ಏನೋ ಗಾಬರಿ. ಏನೋ ಸರ್ವನಾಶವಾಗಿರುವಂತೆ ಅಂಜಿಕೆ. ಕಾರಣವಿಲ್ಲದ ಕಳವಳ. ಏನೋ ಮಹಡಿಯಿಂದ ಕೆಳಕ್ಕೆ ಬೀಳುತ್ತಿರುವವನಂತೆ ಭಯಪಡುತ್ತಿದೆ, ಯಾವ ಕೆಲಸಕ್ಕೂ ಸಿದ್ಧವಿಲ್ಲ. ಬಾರ್‌ಗೆ ಹೋಗಿಬಂದರೂ ಸರಿಹೋಗಲಿಲ್ಲ. ಕೋರ್ಟಿನಲ್ಲಿ ಹೇಳಿಕೊಂಡು ಮನೆಗೆ ಬಂದು ಮಂಚದ ಮೇಲೆ ಮಲಗಿಬಿಟ್ಟನು. ಏನೋ ನಿದ್ದೆ ಬಂದ ಹಾಗಾಯಿತು. ಅದರಲ್ಲಿ ಏನೇನೋ ಕೆಟ್ಟ ಕನಸುಗಳು. ಹಿಂಸೆ ಬೋಧೆ ಯಾಗುತ್ತದೆ. ಆದರೆ ಮನಸ್ಸಿಗೆ ಏನೂ ಗೊತ್ತಾಗದು.

ಸುಮಾರು ಐದು ಗಂಟೆ ಇರಬೇಕು. ಒಂದು ಫೋನ್ ಕಾಲ್ ಬಂತು. "ರಾಯರು ಇದ್ದಾರೆಯೆ ?............ಮಲಗಿದ್ದರೆ ಎಬ್ಬಿಸಿ........ ಹೌದು ಅವರು ಬೇಕೇಬೇಕು. ಅನಾಹುತವಾಗಿದೆ."

ರಾಯನು ಎದ್ದು ಅವಸರ ಅವಸರವಾಗಿ ಫೋನ್ ಬಳಿ ಬಂದನು.

"ಯಾರು ಅದು ?"

"ಇವೊತ್ತಿನ ಪೇಪರು ನೋಡಿದರೇನು ?"

"ಏನು ಸಮಾಚಾರ ?"

"ಯುವರ್ ಫ್ರೆಂಡ್ ಈಸ್ ಇನ್ ಡೇಂಜರ್."

"ವ್ಹಾಟ್?"

"ಹೌದು, ಸರ್. ಪೇಪರ್ ಓದುತೇನೆ. ನೋಡಿ. ರೈಲ್ವೇ ಆಕ್ಸಿಡೆಂಟ್, ಮಧುರ ತಿನ್ನವೆಲ್ಲಿ ಎಕ್ಸ್‌ಪ್ರೆಸ್ ಡಿರೇಯ್‌ಲ್ಡ್. ತ್ರಿ ಬೋಗೀಸ್ ಫಾಲ್—ಮಿ. ರಮೇಶ್ ಬ್ಯಾಂಗಲೂರ್ ಸೀರಿಯಸ್‌ಲಿ ಇನ್‌ಜರ್ಡ್, ಎಟ್‌ಸೆಟ್ರಾ."

"ಎಲ್ಲಿಂದ ಫೋನ್ ಮಾಡುತ್ತಿರುವುದು?"

"ಕ್ಲಬ್ಬಿನಿಂದ"

"ಯಾರು ?"

"ಡಾ. ಕನ್ನು."

"ಡಾಕ್ಟರೇ ?"

"ಹೌದು."

ಪ್ರಾಣೇಶನು ಹಾಗೆಯೇ ರಿಸೀವರ್ ಕೆಳಗಿಟ್ಟು ಕುರ್ಚಿಯ ಮೇಲೆ ಕುಳಿತುಕೊಂಡನು. ಒಂದು ಗಳಿಗೆ ತಲೆಯನ್ನು ಕೈಯ ಮೇಲಿಟ್ಟುಕೊಂಡು ತೀವ್ರವಾಗಿ ಯೋಚಿಸಿದನು. ಎದ್ದು ಫೋನ್ ಬಳಿಗೆ ಹೋಗಿ ಏರ್ ಹೆಡ್‌ಕ್ವಾರ್ಟರ್ಸ್‌ಗೆ ಫೋನ್ ಮಾಡಿದನು. "ಎರಡು

ಗಂಟೆಗೆ ಹೊರಟ ಪ್ಲೇನ್ ಮಧುರೆಗೆ ಎಷ್ಟು ಹೊತ್ತಿಗೆ ಅರೈವ್ ಆಗುತ್ತದೆ."

"ಇವೊತ್ತು ನಾರ್ಮಲ್ ರೂಟ್ ಇರಲಿಲ್ಲ. ವಯಾ ಕೊಯಮುತ್ತೂರು ಹೋಗಿದೆ."

"ಅಲ್ಲಿಗೆ ಎಷ್ಟು ಹೊತ್ತಿಗೆ ತಲಪುತ್ತದೆ ?"

"ಅಲ್ಲಿಂದ ಫೋನ್ ಎಕ್ಸ್‌ಪೆಕ್ಟ್ ಮಾಡುತ್ತಿದ್ದೇವೆ. ಇನ್ನೂ ತಲಪಿಲ್ಲ."

ಪ್ರಾಣೇಶನು ಒಂದು ನಿಟ್ಟುಸಿರುಬಿಟ್ಟನು. "ಒಂದು ಫೋನೋಗ್ರಾಂ ಕಳುಹಿಸಿ. ಎಕ್ಸ್‌ಪ್ರೆಸ್."

"ಯಸ್. ಸಾರ್"

"ಬರೆದುಕೊಳ್ಳಿ. ನರಸಿಂಹಯ್ಯ, ಫ್ರಂ ಬ್ಯಾಂಗಲೂರ್. ರಮೇಶ್ ಸೀರಿಯಸ್. ಸೀ ಈವನಿಂಗ್ ಪೇಪರ್. ಪ್ರೊಸೀಡ್ ಟು ಅಟೆಂಡ್ ವೈರ್ ರಿಸಲ್ಟ್.

ಅಲ್ಲಿಂದ ಫೋನೋಗ್ರಾಂ ಇನ್ನೊಂದು ಸಲ ಓದಿ ಹೇಳಿದ್ದೂ ಆಯಿತು.

ಪ್ರಾಣೇಶನಿಗೆ ಏಕೋ ಹೊಟ್ಟೆ ಹಿಂಡಿಕೊಳ್ಳುವ ಹಾಗಿದೆ. ತಾನೇ ಹೊರಟುಬಿಡೋಣವೇ ಎನ್ನಿಸುತ್ತಿದೆ. ಆದರೆ ಡೀಟೆಯಿಲ್ಸ್ ಬರುವವರೆಗೂ ತಾನೆಲ್ಲಿಗೆ ಹೋಗುವುದು ? ಒದ್ದಾಡುತ್ತಿದ್ದಾನೆ. ಹೆಂಡಿತಿ ಬಂದಳು. ಕಾಫಿ ಬಂತು. ಅವನಿಗೆ ಕಾಫಿ ಕುಡಿಯುವುದಕ್ಕೂ ಇಷ್ಟವಿಲ್ಲ. ಅಭ್ಯಾಸವೇ ಕುಡಿಯಿತು ಕಾಫಿಯನ್ನು. ಹೆಂಡಿತಿ ಇದೇಕೆ ಹೀಗಿದ್ದೀರಿ ?" ಎಂದು ಕೇಳುವಮಟ್ಟಿಗೆ ಮೊಕ ಕೆಟ್ಟುಹೋಗಿತ್ತು.

ಪ್ರಾಣೇಶ್ ಮೃದು ಜಾತಿ. ಹೆಂಗರುಳಿನವನು. ಅವನಿಗೆ ರಮೇಶನಿಗೆ ಆಗಿರಬಹುದಾದ ಅಪಾಯುವನ್ನು ಚಿಂತಿಸಿ ಅಳು ಬಂದುಬಿಟ್ಟಿತ್ತು. ಹೇಗೆಹೇಗೋ ತಡೆದುಕೊಂಡಿದ್ದನು. ಈಗ ಹೆಂಡಿತಿಯೊಡನೆ

ಬಾಯಿ ಮಾತಿನಲ್ಲಿ ಅದನ್ನು ಹೇಳುವಾಗ ತಡೆಯಲು ಆಗಲಿಲ್ಲ. ನರಸಿಂಹಯ್ಯನಿಗೆ ಟೆಲಿಗ್ರಾಂ ಕಳುಹಿಸುವಾಗಲೇ ಮೊದಲಾಗಿದ್ದ ಕಣ್ಣೀರಿನ ಕೋಡಿ ಈಗ ಹರಿದೇಬಿಟ್ಟಿತು. ಮಕ್ಕಳಂತೆ ಬಿಕ್ಕಳಿಸಿ ಅಳುತ್ತಾ, "ರಮೇಶನಿಗೆ ಅಪಾಯವಾಗಿದೆಯಂತೆ." ಎಂದು ಹೇಳಿದನು.

ಪಾಪ! ಅವಳಿಗೂ ಗಾಬರಿಯಾಯಿತು. ವಿವರವಾಗಿ ಕೇಳಬೇಕು ಎನ್ನುವುದರೊಳಗಾಗಿ ಪೇಪರ್ ಬಂತು. ಪೇಪರಿನಲ್ಲಿ ಹೀಗಿತ್ತು :

"ಈ ದಿನ ಬೆಳಿಗ್ಗೆ ೯-೩೫ಕ್ಕೆ ಮಧುರೆಯನ್ನು ಬಿಟ್ಟ ತಿನ್ನವೆಲ್ಲಿ ಎಕ್ಸ್‌ಪ್ರೆಸ್ ಮಧುರೆಯಿಂದ ೩೦-೩೫ ಮೈಲಿ ಬಂದಾಗ ಅಲ್ಲಿ ಕಂಬಿ ತಪ್ಪಿ ಪಕ್ಕದ ಹಳ್ಳದಲ್ಲಿ ಮೊಗಚಿಕೊಂಡಿತು. ಎಂಜಿನ್ ಮಗ್ಗುಲಲ್ಲಿದ್ದ ಫಸ್ಟ್‌ಕ್ಲಾಸ್ ಬೋಗಿಯು ಪುಡಿಪುಡಿಯಾಗಿದೆ. ಅದರಲ್ಲಿ ಕುಟುಂಬ ಸಮೇತವಾಗಿ ಪ್ರಯಾಣ ಮಾಡುತ್ತಿದ್ದ ಬೆಂಗಳೂರಿನ ಅಡ್ವೋಕೇಟ್ ರಮೇಶರಿಗೂ ಅವರ ಹೆಂಡಿತಿಗೂ ಬಹಳ ಗಾಯಗಳಾಗಿವೆ. ಅವರ ಮಗಳು ತಂದೆ ಇಬ್ಬರಿಗೂ ಗಾಯವಾಗಿದ್ದರೂ ಅಷ್ಟಿಲ್ಲ."

ಪ್ರಾಣೇಶನು ಕುಳಿತುಕೊಳ್ಳಲಾಗಲಿಲ್ಲ. ಎದ್ದು ಓಡಾಡಿದನು. ಹೆಂಡಿತಿಯು "ಅಯ್ಯೋ ಪಾಪ!" ಎಂದು ಕಣ್ಣೀರಿಟ್ಟುಕೊಂಡು "ದೇವರಿಗೆ ಒಂದು ತುಪ್ಪದ ದೀಪವನ್ನಾದರೂ ಹಚ್ಚುತ್ತೇನೆ. ಅವರಿಗೆ ಒಳ್ಳೆಯದಾಗಲಿ" ಎಂದು ಒಳಕ್ಕೆ ಹೋದಳು.

ಪ್ರಾಣೇಶನಿಗೆ ಮೊದಲು ಐದು ನಿಮಿಷ ಏನೂ ತೋರಲಿಲ್ಲ. ಥಟ್ಟನೆ ಕಾಫೀ ಎಸ್ಟೇಟಿನಲ್ಲಿ ಸನ್ಯಾಸಿಗಳಿಗೆ ನಮಸ್ಕಾರ ಮಾಡಿದಾಗ ಮೋಹನೆಯ ಮುಖದಲ್ಲಿ ಕುಂಕುಮವಿಲ್ಲದ್ದು ನೆನಪಾಯಿತು. ಮನಸ್ಸು ಏನೇನೋ ಯೋಚಿಸಿತು. ಎಷ್ಟು ಪ್ರಯತ್ನಪಟ್ಟರೂ ಒಳ್ಳೆಯ ಕಡೆಗೆ ತಿರುಗಲೊಲ್ಲದು : "ರಮೇಶನಿಗೆ ಬಿದ್ದಿರುವ ಏಟು ಭಾರಿಯಾಗಿದ್ದರೆ ಹೇಗೆ? ಅವನು ಉಳಿಯದೆಹೋದರೋ? ಎಂದಿದ್ದರೂ ಹೈಕೋರ್ಟಿನ ಜಡ್ಜಿಯಾಗಬೇಕಾಗಿದ್ದವನು ಹೀಗೆ ಅಪಘಾತಕ್ಕೆ ಗುರಿಯಾದನಲ್ಲ! ಸನ್ಯಾಸಿಗಳು ಇದನ್ನು ತಿಳಿದೇ ಶಿವಪೂಜೆ ಮಾಡಿ ಅಂತ ಹೇಳಿದರೊ? ಮಂಜುನಾಥನಿಗೆ ಪೂಜೆ ಮಾಡಿಸಿದ್ದಾನಲ್ಲ!"

"ಆಯಿತು. ಒಂದು ವೇಳೆ ಈ ಅಪಾಯ ಮರಣವಾಗಿ ಪರಿಣಮಿಸಿದರೆ-ಏನು ಗತಿ? ಮೋಹನೆ ಇನ್ನೂ ಚಿಕ್ಕ ವಯಸ್ಸಿನವಳು. ಅವಳು ಗಂಡನಲ್ಲಿ ಪಂಚಪ್ರಾಣ ಇಟ್ಟುಕೊಂಡಿರುವವಳು. ಆದರೂ ಪಾಪ! ಏನೂ ತಿಳಿದವಳಲ್ಲ. ಅವರಿವರ ಮಾತು ಕೇಳಿ ಆಸ್ತಿಪಾಸ್ತಿ ಹಾಳು ಮಾಡಿಕೊಂಡರೋ? ಅದಕ್ಕೆ ಅವಕಾಶ ಕೊಡಕೂಡದು. ಸರ್ವಪ್ರಕಾರದಿಂದಲೂ ಅವರ ಆಸ್ತಿ ಕಾಪಾಡಬೇಕು. ಆ ಹುಡುಗಿಯನ್ನು ಒಳ್ಳೆಯ ವಿದ್ಯಾವಂತಳನ್ನಾಗಿ ಮಾಡಿ ಸರಿಯಾದ ಕಡೆ ಕೊಟ್ಟು ಮದುವೆ ಮಾಡಿ ರಮೇಶನ ಹೆಸರು ನಿಲ್ಲಿಸಬೇಕು."

ಇನ್ನೂ ಏನೇನೋ ಯೋಚನೆಗಳು. ಯಾವುದಕ್ಕೂ ತಡೆಯಿಲ್ಲ. "ಆ ಮುದುಕನಿಗೆ ಏನಾಗಿದೆಯೋ? ಈ ವಯಸ್ಸಿನಲ್ಲಿ ರಮೇಶನದು ಅವಿವೇಕವಾದರೆ ಆ ಮುದುಕನ ಹಣೇಬರೆಹ ಏನು ಹೇಳಬೇಕು?"

ಹೀಗೆ ಇನ್ನೂ ಏನೇನೋ ಮನಸ್ಸಿನಲ್ಲಿ ದುಷ್ಟ ಯೋಚನೆಗಳೇ ಬರುತ್ತಿರುವಾಗ ಒಂದು ಟೆಲಿಗ್ರಾಂ ಬಂತು. ಅದು ಡ್ರೈವರ್ ನಟೇಶ್ ಕಳುಹಿಸಿರುವುದು. "ಯಜಮಾನರಿಗೆ ಜಖಂ ಆಗಿದೆ. ಮೊಖ ಎದೆ ಗಾಯವಾಗಿದೆ. ಅಮ್ಮವರಿಗೆ ಪಕ್ಕಕ್ಕೆ ಏಟು ಬಿದ್ದಿದೆ. ದೊಡ್ಡ ಯಜಮಾನರಿಗೆ ಕಾಲು ಮುರಿದಂತಿದೆ. ಮಗುವಿಗೆ ಭುಜಕ್ಕೆ ಏಟು ಬಿದ್ದಿದೆ. ನಾವೆಲ್ಲ ಮಧುರೆಯ ಆಸ್ಪತ್ರೆಗೆ ಬಂದಿದ್ದೇವೆ. ಇಲಾಜು ನಡೆಯುತ್ತಿದೆ."

"ಸರಿ. ಬೆಳಗೆದ್ದು ನಾನೂ ಮಧುರೆಗೆ ಹೊರಡುವುದು" ಎಂದು ಗೊತ್ತುಮಾಡಿಕೊಳ್ಳುವುದರೊಳಗಾಗಿ ಇನ್ನೊಂದು ಟೆಲಿಗ್ರಾಂ ಬಂತು. ನರಸಿಂಹಯ್ಯ ಕಳುಹಿಸಿದ್ದು. ಅದರಲ್ಲಿ ಹೀಗಿತ್ತು: "ರಾಯರಿಗೆ ಬಹಳ ಪೆಟ್ಟಾಗಿದೆ. ಮದರಾಸಿಗೆ ಕರೆದುಕೊಂಡುಹೋಗಬೇಕು. ತಕ್ಷಣ ಹೊರಟುಬನ್ನಿ."

ಪ್ರಾಣೇಶನು ಮರುದಿನ ಪ್ಲೇನಲ್ಲಿ ಬರುವುದಾಗಿ ನರಸಿಂಹಯ್ಯನಿಗೆ ಕೂಡಲೆ ಎಕ್ಸ್‌ಪ್ರೆಸ್ ತಂತಿಯೊಂದು ಹೋಯಿತು.

ಮರುದಿನ ಪ್ರಾಣೇಶನು ಹೋದನು. ಅಲ್ಲಿ ಜನರಲ್ ಹಾಸ್ಪಿಟಲ್ಲಿನಲ್ಲಿ ಎಲ್ಲರಿಗೂ ಮೊದಲ ಚಿಕಿತ್ಸೆಯಾಗಿದೆ. ಮಗು ಗೆಲುವಾಗಿದ್ದಾಳೆ. ಮೋಹನೆಗೆ ಪಕ್ಕದ ಎರಡು ಎಲುಬು ಮುರಿದುಹೋಗಿದೆ. ಮುದುಕನಿಗೆ ಕಾಲು ಮುರಿದಿದೆ. ಭಾರಿ ಊದಿದೆ. ಆ ಊದು ಇಳಿಯುವವರೆಗೆ ಏನೂ ಮಾಡುವಂತಿಲ್ಲ. ಮೋಹನೆಗೆ ಇವೊತ್ತು ಆಪರೇಷನ್ ಆಗುತ್ತದೆ. ರಮೇಶನನ್ನು ಮಾತ್ರ ಮದರಾಸಿಗೆ ಕರೆದುಕೊಂಡುಹೋಗಬೇಕು. ಅಲ್ಲಿಯೇ ಚಿಕಿತ್ಸೆ ನಡೆಯಬೇಕು. ಮಿದುಳಿಗೆ ಏಟು ಬಿದ್ದಿದ್ದರೆ ಉಳಿಯುವುದು ಕಷ್ಟ. ಇಲ್ಲದಿದ್ದರೆ ಉಳಿಯಬಹುದು. ಆದರೂ ಮುಖವು ವಿಕಾರವಾಗಬಹುದು.

ಮುದುಕನು ಅಲ್ಲಿಯೇ ಇದ್ದು ಪ್ಲಾಸ್ಟರ್ ಹಾಕಿದ ಮೇಲೆ ಬೆಂಗಳೂರಿಗೆ ಹೋಗುವುದು. ಡ್ರೈವರ್ ಅಲ್ಲಿಯೇ ಇದ್ದು ಅವರನ್ನು ನೋಡಿಕೊಳ್ಳುವುದು ಎಂದಾಯಿತು. ರಮೇಶನಿಗೆ ಮೊದಲ ಚಿಕಿತ್ಸೆ ಮಾಡಿಸಿ, ಆತನನ್ನು ಪ್ಲೇನಿನಲ್ಲಿ ಮದರಾಸಿಗೆ ಕರೆದೊಯ್ಯುವುದು. ಎಂದಾಯಿತು. ಮೋಹನೆಯು ಮಧುರೆಯಲ್ಲಿರಲು ಒಪ್ಪಲಿಲ್ಲ. ಅದರಿಂದ ಅವಳೂ ವೀಣಾ ಜೊತೆಯಲ್ಲಿ ಹೋಗುವುದು ಎಂದಾಯಿತು.

ಸಂಜೆಯ ವೇಳೆಗೆ ಎಲ್ಲರೂ ಮದರಾಸಿಗೆ ಬಂದಿದ್ದರು. ಮದರಾಸಿನ ಜನರಲ್ ಹಾಸ್ಪಿಟಲ್‌ನಲ್ಲಿ ಗಂಡಹೆಂಡಿರು ಇನ್‌ಪೇಷೆಂಟ್ ಆಗಿ ಸ್ಪೆಷಲ್ ವಾರ್ಡಿಗೆ ಹೋದರು.

ಮೋಹನೆಯು ಎಂಟು ದಿನದೊಳಗಾಗಿ ಕೊಂಚ ಚೇತರಿಸಿಕೊಂಡಳು. ಅವಳಿಗೆ ಮುರಿದಿದ್ದ ಎಲುಬಿಗೆ ಪ್ರತಿಯಾಗಿ ಸ್ಟೀಲ್‌ರಿಬ್ಸ್ ಜೋಡಿಸಿಯಾಯಿತು. ಆದರಿನ್ನೂ ಅಲುಗಾಡುವಂತಿಲ್ಲ. ಆ ಮಂಚವನ್ನು ಹಾಗೆಯೇ ರಮೇಶನ ಮಂಚದ ಬಳಿ ತಳ್ಳುವುದು. ಅವಳು ಒಂದು ಗಳಿಗೆ ಗಂಡನ ಕೈಯ್ಯನ್ನು ತನ್ನ ಕೈಯಲ್ಲಿ ಇಟ್ಟುಕೊಂಡು ಎರಡು ಹನಿ ಕಣ್ಣೀರು ಉದುರಿಸುವುದು. ಏನೋ ಜ್ಞಾನವಿದ್ದರೆ ರಮೇಶನೂ ಒಂದು ಮಾತಾಡುವುದು. ಇಷ್ಟೇ ಅವರಿಗೆ ಆಪ್ಯಾಯನ. ಅವೇಗೆ ಈಗಂತೂ

ಕಣ್ಮುಚ್ಚಿದರೆ ಏನೇನೋ ಘೋರವಾದ ಕನಸುಗಳು. ಗಂಡನು ಏನಾಗುವನೋ ತನ್ನ ಮಾಂಗಲ್ಯವು ಉಳಿಯುವುದೋ ಇಲ್ಲವೋ ಎನ್ನುವ ದಿಗಿಲು ತಾನೇ ತಾನಾಗಿ ಹೋಗಿದೆ. ಗಂಟೆಗೊಂದು ಸಲ ನರಸಿಂಹಯ್ಯನನ್ನು ಕರೆದು ಗಂಡನ ಯೋಗಕ್ಷೇಮ ವಿಚಾರಿಸುತ್ತಾಳೆ. ವೀಣಾ ಅಂತು "ಹೋಗಮ್ಮ! ಎಷ್ಟು ಸಲ ಬಂದುಬಂದು ಹೇಳಲಿ?" ಎಂದು ಗದರಿಸಿಕೊಳ್ಳುವಷ್ಟು ಬೇಸತ್ತಿದ್ದಾಳೆ.

ರಮೇಶನಿಗೆ ಪ್ಲಾಸ್ಟಿಕ್ ಸರ್ಜರಿ ನಡೆದಿದೆ. ಮಿದುಳಿಗೆ ಅಪಾಯವಾಗಿರಲಾರದು ಎಂದು ಡಾಕ್ಟರ್ ಊಹೆ. ಹುಣ್ಣು ಆರುತ್ತ ಬಂದಿದೆ.

"ತಲೆಯೇ ಜಜ್ಜಿ ಹೋಗಬೇಕಾಗಿತ್ತು. ಅದೃಷ್ಟ: ಮಾಂಸ ಗೀರಿಕೊಂಡು ಹೋಗಿದೆ." ಎಂದು ಅವರ ಸಿದ್ಧಾಂತ. ಆದರೂ ತಲೆಯಲ್ಲಿ ಏನಾದರೂ ಆಗಿದ್ದರೆ? ಎಂದು ಸಂಶಯವೇನೋ ಇದ್ದೇ ಇದೆ. ಜನರಲ್ ಚೆಕ್‌ಅಪ್‌ನಲ್ಲಿ ಏನೂ ತೋರಿಲ್ಲ. ಆದರೂ ಏನೋ ಹೇಗೋ?

ಪ್ರಾಣೇಶನು ಬೆಂಗಳೂರಿಗೆ ಬಂದು ಎಂಟು ದಿನವಾಯಿತು. ದಿನವೂ ಮದರಾಸಿಗೆ ಟ್ರಂಕ್ ಕಾಲ್ ಹಾಕಿ ಸ್ನೇಹಿತನ ಯೋಗಕ್ಷೇಮ ವಿಚಾರಿಸುತ್ತಿದ್ದಾನೆ ಎಲ್ಲರೂ ಗುಣಮುಖವಾಗಿದ್ದಾರೆ ಎಂದು ವರ್ತಮಾನ ಬರುತ್ತಿದೆ. ಆ ಗಾಬರಿಯಲ್ಲಿ ಬ್ಯಾಂಕ್ ವಿಚಾರ ಅವನಿಗೆ ಮರೆತೇ ಹೋಗಿತ್ತು.

ಒಂದು ದಿನ ಪ್ರಾಣೇಶನು ಬೆಳಗ್ಗೆ ತನ್ನ ಡ್ರಾಯಿಂಗ್ ರೂಂನಲ್ಲಿ ಕಾಫಿ ಕುಡಿಯುತ್ತಾ ಕೂತಿದ್ದಾನೆ. ಕಾಫಿ ಕುಡಿದು ಮುಖಮಾಡಿಕೊಂಡು ಸ್ನಾನಕ್ಕೆ ಹೋಗಬೇಕು. ಬೆಳಗ್ಗಿನ ಪೇಪರ್ ಬಂತು. ದೊಡ್ಡಕ್ಷರಗಳಲ್ಲಿ ಎದ್ದು ಕಾಣಿಸುತ್ತಿದ್ದ ಬ್ಯಾನರ್ ಅವನ ಕಣ್ಣಿಗೆ ಬಿತ್ತು "........ಬ್ಯಾಂಕ್ ದಿವಾಳಿಯಾಯಿತು." ಅವನಿಗೆ ಜೀವ ಜಗ್ಗಿಂತು. ಹತ್ತು ದಿನದ ಹಿಂದೆಯೇ ಬಜಾರಿ ಸುದ್ದಿ ಕಿವಿಗೆ ಬಿದ್ದರೂ ತಾನು ವಿಚಾರಿಸಲಿಲ್ಲವಲ್ಲ ಎಂದು ಕರುಳು ಕಿವಿಚಿದಂತಾಯಿತು. ಒಂದು ವಿಚಿತ್ರವಾದ ಗಾಬರಿ ತಾನೇ ತಾನಾಯಿತು. ಥಟ್ಟನೆದ್ದು ಹೋಗಿ ಬ್ಯಾಂಕ್ ಮ್ಯಾನೇಜರ್

ಮನೆಗೆ ಫೋನ್ ಮಾಡಿದನು. "ಅವರು ಊರಲಿಲ್ಲ. ಹೆಡ್ ಆಫೀಸಿನಿಂದ ಕಾಲ್ ಬಂತು. ಅವರು ಹೋಗಿ ಎಂಟು ದಿನವಾಯಿತು. ನಿನ್ನೆ ಬ್ಯಾಂಕ್ ನಡೆಯಿತು. ಈ ದಿನ ಗೊತ್ತಿಲ್ಲ ಅಸಿಸ್ಟೆಂಟ್ ಮ್ಯಾನೇಜರ್ ಛಾರ್ಜಿನಲ್ಲಿದ್ದಾರೆ." ಎಂದು ತಿಳಿಯಿತು.

ಕಾರಿನಲ್ಲಿ ಅಸಿಸ್ಟೆಂಟ್ ಮ್ಯಾನೇಜರ್ ಮನೆಗೆ ಓಡಿದನು. ಅವನೂ ಪೆಚ್ಚಾಗಿ ಕೂತಿದ್ದನು. ಬೆಳಗಿನ ಝಾವ ೫ ಗಂಟೆಗೆ ಅವನಿಗೆ ಎಕ್ಸ್‌ಪ್ರೆಸ್ ವೈರ್ ಬಂದಿತ್ತು. "ಇನ್ನು ಎಂಟು ದಿನ ಬ್ಯಾಂಕ್ ತೆಗೆಯ ಬೇಡಿ" ಎಂದು. ಬೆಳಗಿನ ಪತ್ರಿಕೆಯಲ್ಲಿ ಬ್ಯಾಂಕಿನ ದಿವಾಳಿ ಸುದ್ದಿ. ಅಲ್ಲಿಂದ ಆಚೆಗೆ ಏನು ಕೇಳಿದರೂ "ನಾನು ಕಾಣೆ. ನನಗೆ ಗೊತ್ತಿಲ್ಲ. ತಿಳಿಯದು." ಎಂದು ಅಕೃತ್ರಿಮವಾದ ಸಹಜವಾದ ಸರಳವಾದ ಉತ್ತರ.

"ಹಾಗಾದರೆ ಎಲ್ಲವೂ ಹೋದಹಾಗೆಯೇನೋ ?"

"ಅದು ಹೇಳುವಂತಿಲ್ಲ. ನಿನ್ನೆಯವರೆಗೆ ಏನೂ ಸುದ್ದಿಯಿಲ್ಲ. ಈ ದಿನ ಬೆಳಿಗ್ಗೆ ಹೀಗೆ ಸುದ್ದಿ. ಅಂತೂ ಎಂಟು ದಿನದ ಹಿಂದೆ ಬ್ರಾಂಚ್ ಮ್ಯಾನೇಜರ್‌ಗಳೆಲ್ಲ ಹೋಗಿದ್ದಾರು. ಅವರು ಬಂದ ಮೇಲೆ ಎಲ್ಲ ತಿಳಿಯಬೇಕು."

"ತಿಳಿಯುವುದಿರಲಿ. ಜನರಲ್ ಪೊಸಿಷನ್ ಹೇಗೆ?"

"ಹಣ ಹೋಗುವುದಿಲ್ಲ. ರಿಸರ್ವ್ ಬ್ಯಾಂಕಿಗೆ ಸೇರಿದ ಬ್ಯಾಂಕ್. ಆದರೂ ಈಗ ಏನೂ ಹೇಳುವಂತಿಲ್ಲ."

ಪ್ರಾಸೇಸರಿಗೆ ಏನು ಹೇಳುವುದಕ್ಕೂ ತೋರದಿದ್ದರೂ ಇವನಿಂದ ಏನೂ ವರ್ತಮಾನ ತಿಳಿಯುವಂತಿಲ್ಲ, ಎನ್ನುವುದಂತೂ ತಿಳಿಯಿತು. ಅಲ್ಲಿಂದ ನೇರವಾಗಿ ಮನೆಗೆ ಬಂದನು.

ದಾರಿಯುದ್ದಕ್ಕೂ "ಒಂದೂವರೆ ಲಕ್ಷ. ಮುದುಕನ ಒಂದು ಜೀವಮಾನದ ಸಂಪಾದನೆ. ಜೊತೆಗೆ ರಮೇಶನ ಹತ್ತು ವರುಷದ ಸಂಪಾದನೆ." ಎಂದು ಒಂದು ಯೋಚನೆ. ಅದರ ಮಗ್ಗುಲಲ್ಲಿ "ತನ್ನದು

ಐವತ್ತು ಸಾವಿರ. ದೇವರಿಗಿಲ್ಲ ದಿಂಡರಿಗಿಲ್ಲ. ಇನ್ನೇನು ಮುಳುಗಿದ ಹಾಗೆ ತಾನೇ!" ಎಂದು ಇನ್ನೊಂದು ಯೋಚನೆ. ಆಕಾಶ ಕಳಚಿ ತಲೆಯಮೇಲೆ ಬಿದ್ದ ಹಾಗೆ ಆಗಿದೆ. ತಲೆ ತಿರುಗುತ್ತದೆ. ಹೊಟ್ಟೆಯಲ್ಲಿ ಒಂದು ಗಾಡಿ ಸೌದೆ ಉರಿಯುತ್ತಿರುವಂತಿದೆ. ಯಾರಿಗೂ ಹೇಳಿಕೊಳ್ಳು ವಂತೆಯೂ ಇಲ್ಲ.

ಮನೆಗೆ ಬಂದನು. ಆಫೀಸಿಗೆ ಫೋನ್ ಹೋಯಿತು. "ಈ ದಿನ ಬಹಳ ಇರಿಸುಮುರಿಸಾಗಿದೆ. ಈ ದಿನ ಆಫೀಸಿಗೆ ಬರುವುದಿಲ್ಲ" ಎಂದು.

"ಈ ಸುದ್ದಿ ರಮೇಶನಿಗೆ ತಿಳಿದರೆ?" ಎನ್ನಿಸಿತು. ಇನ್ನೂ ಗಾಬರಿ ಯಾಯಿತು. ಕೂಡಲೆ ನರಸಿಂಹಯ್ಯನಿಗೆ ಟ್ರಂಕ್ ಕಾಲ್ ಹಾಕಿ, ಬ್ಯಾಂಕಿನ ಸುದ್ದಿ ಹೇಳಿ, ಈ ಸುದ್ದಿ ಸರ್ವ ಪ್ರಯತ್ನಮಾಡಿ ರಮೇಶನ ಕಿವಿಗೆ ಬೀಳದಂತೆ ನೋಡಿಕೊಳ್ಳಿ. ವೀಣಾ ವಿಷಯವಾಗಿ ಇನ್ನೊತ್ತು ನಾಳೆ ಬಹಳ ಎಚ್ಚರಿಕೆ" ಎಂದು ಹೇಳಿದನು.

ಇನ್ನಷ್ಟು ಹೊತ್ತಿನೊಳಗಾಗಿ ಪೋಸ್ಟ್ ಬಂತು. ಒಂದು ಎಕ್ಸ್‌ಪ್ರೆಸ್ ಲೆಟರ್. ಮಧುರೆಯಿಂದ ಡ್ರೈವರ್ ಬರೆದದ್ದು. "ದೊಡ್ಡ ರಾಯರು ಪ್ರಯಾಣ ಮಾಡಬಹುದು ಎಂದು ಡಾಕ್ಟರ್ ಹೇಳಿದ್ದಾರೆ. ಅಲ್ಲಿ ಮದರಾಸಿನಲ್ಲಿ ರಾಯರಿಗೆ ಕೊಂಚ ಗುಣಮುಖವಾಗಿದೆಯೆಂದು ನರಸಿಂಹಯ್ಯನವರು ಬರೆದಿದ್ದರು. ದೊಡ್ಡ ರಾಯರು ಅಲ್ಲಿಗೆ ಹೋಗಿ ಚಿಕ್ಕ ರಾಯರನ್ನು ನೋಡಿಕೊಂಡು ಬೆಂಗಳೂರಿಗೆ ಹೋಗುವುದು ಎಂದು ಯೋಚಿಸಿದ್ದಾರೆ. ನಾಳೆಯ ದಿನ ಮೆಯಿಲ್‌ನಲ್ಲಿ ಹೊರಡುವುದು ಎಂದು ಗೊತ್ತಾಗಿದೆ." ಎಂದು ಬರೆದಿತ್ತು.

ಕಾಗದ ಓದಿ ಪ್ರಾಣೇಶನು ನಿಟ್ಟುಸಿರುಬಿಟ್ಟನು. "ಬ್ಯಾಂಕಿನ ವಿಷಯ ಮುಮುಕನಿಗೆ ತಿಳಿದರೆ ಗತಿ ಏನು? ಅವನಿಗೋ ಪ್ರಾಣವೆಲ್ಲ ಹಣದ ಮೇಲೆ ಕೂತಿದೆ. ಹಣ ಹೋಯಿತು ಎಂದರೆ ಅವನ ಪ್ರಾಣ ಉಳಿಯೋದಿಲ್ಲ. ಅಂತೂ ಈಗ ಈ ರಹಸ್ಯ ಕಾಪಾಡದಿದ್ದರೆ ಎರಡು ನೂರು ಪ್ರಾಣ ಹೋಗುತ್ತದೆ. ಆ ಪ್ರಾಣ ಕಾಪಾಡಬೇಕು."

ಮಧುರೆಗೆ ಒಂದು ಎಕ್ಸ್‌ಪ್ರೆಸ್ ಟೆಲಿಗ್ರಾಂ ಹೋಯಿತು. "ಇನ್ನು ಮೂರು ದಿವಸ ರಾಯರು ಅಲ್ಲಿಯೇ ಇರಬೇಕು. ಹೊರಗಿನ ಸಮಾಚಾರ ಅವರಿಗೆ ಏನೂ ತಿಳಿಯಕೂಡದು. ವಿವರಗಳಿಗೆ ಕಾಗದ ಬರುತ್ತದೆ."

ಮತ್ತೆ ಅದೇ ಯೋಚನೆ. "ಎಷ್ಟು ದಿವಸ ಮುದುಕನಿಗೆ ತಿಳಿಯದೆ ಇರಲು ಸಾಧ್ಯ? ಊರಿಗೆ ಊರೇ ಎದ್ದೆದ್ದು ಕುಣಿಯುತ್ತಿರುವಾಗ, ಈ ಸುದ್ದಿ ಆತನಿಗೆ ಮುಟ್ಟದಿರುವುದು ಹೇಗೆ? ಇಲ್ಲ. ರಮೇಶನ ಮೇಲೆ ದೇವರಿಗೆ ಏನೋ ಕೋಪ ಬಂದಿರಬೇಕು. ಇಲ್ಲದಿದ್ದರೆ ಹೀಗೆ ವಿಪತ್ಪರಂಪರೆ ಬರುತ್ತಿರಲಿಲ್ಲ. ಪ್ರಾಣದ ಮೇಲೆ ಬಂದಿತ್ತು; ಧನ ಹೋಯಿತು. ಇನ್ನೂ ಏನೇನು ಕಾದಿದೆಯೋ? ವಿಧಿಯೇ ವಿಪರೀತವಾಗಿರುವಾಗ ಮನುಷ್ಯ ತಡೆಯುವುದಾದರೂ ಹೇಗೆ? ರಮೇಶನು ಬದುಕಿ ಬಂದರೂ ಅವನು ಮತ್ತೆ ಪ್ರಾಕ್ಟೀಸ್‌ಗೆ ಬರುವುದಕ್ಕೆ ಎಷ್ಟು ದಿನ ಹಿಡಿದೀತೋ? ಆದರೂ ಉಪವಾಸದಿಂದ ಸಾಯಬೇಕಾಗಿಲ್ಲ. ಈಗ ಕನ್ಯಾ ಮಂದಿರಕ್ಕೆ ಕೊಟ್ಟರೋ ಬಂಗಲೆ ಬಿಟ್ಟೂ ಇನ್ನೂ ಒಂದು ಬಂಗಲೆ ಇದೆ. ಆದರೂ ಕಷ್ಟ! ಅವನ ವಿಚಾರ ನೋಡಿದರೆ ನಾನೇ ವಾಸಿ. ಸದ್ಯ ದೇವರು ಹಣ ಕಿತ್ತುಕೊಂಡರೂ ಗಟ್ಟಿಯಾಗಿಯಾದರೂ ಇದ್ದೇನೆ. ಸಂಪಾದನೆ ಇದೆ. ಹೇಗೋ ಮಾಡಿಕೊಂಡು ಹೋಗಬಹುದು. ರಮೇಶನಿಗೆ ಹೀಗಾಗಬಹುದೇ? ಅದೂ ಎಪ್ಪತ್ತು ಎಂಭತ್ತು ಸಾವಿರ ಧರ್ಮ ಮಾಡಿರುವಾಗ? ಇನ್ನು ಅವನು ಕನ್ಯಾ ಮಂದಿರ ನಡಸುವುದೂ ನಿಜವೇ?........" ಎಂದು ಇನ್ನೂ ಏನೇನೋ ಯೋಚನೆಗಳು. ತಲೆ ಸಿಡಿದುಹೋಗುವಷ್ಟು. ಆದರೂ ತನ್ನ ಚಿಂತೆಗಿಂತ ಗೆಳೆಯನ ಚಿಂತೆಯೇ ಅವನಿಗೆ ಮಿಗಿಲಾಗಿಹೋಗಿದೆ.

ಆ ರಾತ್ರಿಯೆಲ್ಲ ಹೀಗೆಯೇ ಯೋಚನೆ. ತಾನು ಯಾರೊಡನೆಯೂ ಹೇಳುವಂತಿಲ್ಲ. ಸುಮಾರು ಒಂಭತ್ತು ಗಂಟೆಯಿರಬಹುದು. ಪ್ರಾಣೇಶನ ಹೆಂಡಿತಿ ಬಂದು ಮಂಚದ ಮೇಲೆ ಗಂಡನ ಮಗ್ಗುಲಲ್ಲಿ ಕುಳಿತುಕೊಂಡಳು. ಆ ದಿನ ಅವನಿಗೆ ಎರಡು ಹೊತ್ತೂ ಊಟವು ಸರಿಯಾಗಿಲ್ಲ.

ತಿಂಡಿ ತಿನ್ನಲಿಲ್ಲ. ಆದರಿಂದ ಅವನಿಗೆ ಬಹಳ ಪ್ರಿಯವಾದ ಮೊಸರು ಬಾಳೇಹಣ್ಣು ತಂದಿದ್ದಾಳೆ. ಅದೂ ಅವನಿಗೆ ಬೇಡ. ಆದರೂ ಅವಳ ಬಲವಂತಕ್ಕೆ ಅಷ್ಟು ತೆಗೆದುಕೊಂಡಿದ್ದಾನೆ. ಅವಳಿಗೂ ಬ್ಯಾಂಕಿನ ವಿಷಯ ಗೊತ್ತು. ಆದರೆ ಆ ವಿಚಾರ ಗಂಡನ ಹತ್ತಿರ ಎತ್ತುವುದಾದರೂ ಹೇಗೆ? ಈಗ ಪ್ರಸ್ತಾಪ ಮಾಡಬೇಕು ಎಂದು ಮನಸ್ಸು. ಆದರೂ ಹಿಂದಲೇಟು.

ಧೈರ್ಯ ಮಾಡಿ ಅವಳೇ ಮಾತೆತ್ತಿದಳು. "ಈ ದಿನ ನಾನೂ ಪೇಪರ್ ಓದಿದೆ."

"ಹುಂ"

"ಆಗಲೇ ನಿಮ್ಮನ್ನು ಕೇಳಬೇಕು ಎನ್ನಿಸಿತು."

"ಹುಂ."

"ಬಹಳ ನಷ್ಟವಾಯಿತೇನು?"

"ಹೋದರೆ ಒಂದು ಐವತ್ತು. ಆದರೆ, ನಮಗಿಂತಲೂ ರಮೇಶನಿಗೆ ಭಾರಿ ಏಟು."

ಹಾಗೆನ್ನುತ್ತಿದ್ದ ಹಾಗೆಯೇ ಮಗ ಒಂದು ಟೆಲಿಗ್ರಾಂ ತಂದುಕೊಟ್ಟ. ಮಧುರೆಯಿಂದ ನಟೇಶನು ಕಳುಹಿಸಿದ್ದು.

"ರಾಯರಿಗೆ ವರ್ತಮಾನ ತಿಳಿಯಿತು. ಮಂಚದಿಂದ ಬಿದ್ದು ಪ್ರಜ್ಞೆ ಹೋಗಿದೆ. ಉಪಚಾರ ನಡೆಯುತ್ತಿದೆ. ಕಾಗದ ಬರುತ್ತದೆ."

"ನೋಡಿದೆಯಾ? ಮುದುಕ ಉಳಿಯುತ್ತಾನೋ ಇಲ್ಲವೋ? ಈಗಿರುವ ಸ್ಥಿತಿಯಲ್ಲಿ ರಮೇಶನಿಗೆ ಈ ಸುದ್ದಿ ತಿಳಿದರೆ ಅವನು ಉಳಿಯುತ್ತಾನೋ ಇಲ್ಲವೋ? ಏನೋ ಎಂತೋ? ನಮಗೆ ಹೋದರೆ ಹೋಗುವುದು ಹಣ ಮಾತ್ರ. ರಮೇಶನಿಗೆ ಎಲ್ಲಾ ಸರ್ವವೂ ನಾಶ."

ಒಂದು ಭಾರಿಯ ನಿಟ್ಟುಸಿರು ಅವನು ಹೇಳಿದುದೆಲ್ಲ ನಿಜನಿಜ ಎಂದು ನಂಬಿಕೆ ಕೊಟ್ಟಿತು.

ಅದನ್ನು ಕೇಳಿ ನರಸಮ್ಮನಿಗೂ ಸಂಕಟವಾಯಿತು: "ನಿಜ, ನೀವು ಮದರಾಸಿನಿಂದ ಬಂದು ಹೇಳಿದಾಗಲೇ ನನಗೆ ಇನ್ನು ಆ ಪುಣ್ಯಾತ್ಮ ಬದುಕಿ ಬರುತ್ತಾನೆಯೇ ಎನ್ನಿಸಿತು. ಈಗಂತೂ ಧೈರ್ಯವೇ ತಪ್ಪಿಹೋಯಿತು. ನಿಮಗೆ ಹೇಗೆ?"

"ನಮಗೇನು ಮಹಾ! ಅದೃಷ್ಟ ಇತ್ತು ಐವತ್ತು ಸಾವಿರಕ್ಕೆ ಇನ್ನೊಂದು ಬಂಗಲೆ ತೆಗೆದುಕೊಂಡೆವು. ಇಲ್ಲದೇ ಅದೂ ಬ್ಯಾಂಕಿನಲ್ಲೇ ಇದ್ದಿದ್ದರೆ ಅದೂ ಇದೇ ಗತಿಯಾಗುತ್ತಿತ್ತು. ನನಗೆ ಪ್ರಾಕ್ಟೀಸ್ ಇದ್ದೇ ಇದೆ. ನಮಗೇನು? ಇರುವುದೆಲ್ಲ ರಮೇಶನಿಗೆ? ಈಗ ಬಿದ್ದಿರುವ ಏಟು ವಾಸಿಯಾಗಿ ಅವನು ಮತ್ತೆ ಮನುಷ್ಯನಾಗುವುದಕ್ಕೇ ಆರು ತಿಂಗಳು ಬೇಕು. ಆದಾದ ಮೇಲೆ ಅವನು ಕುದುರಿಕೊಳ್ಳುವುದಕ್ಕೆ ಇನ್ನು ಆರು ತಿಂಗಳು. ಅಂತೂ ಒಂದು ವರ್ಷ. ಈಗ ಈ ಬ್ಯಾಂಕಿನೇಟು. ಅಂತೂ ಅವನನ್ನು ಈಗ ನೋಡಿಕೋಬೇಕು."

"ಏಕೆ ಅವರಿಗೇನು ಆಸ್ತಿ ಇಲ್ಲವೆ?"

"ಇದೆ ಎರಡು ಬಂಗ್ಲೆ ಇದೆ. ಮೂರನೆಯದು ಆ ಕನ್ಯಾ ಮಂದಿರಕ್ಕೆಂದು ಬಿಟ್ಟಿದ್ದಾನೆ. ಚಿನ್ನ ಬೆಳ್ಳಿ ಏನಿಲ್ಲ ಎಂದರೂ ಹತ್ತು ಹದಿನೈದು ಸಾವಿರ ಇದೆ. ಆದರೂ ಒಂದು ವರ್ಷ ಕೂತು ತಿನ್ನುವುದು ಎಂದರೆ ಸುಮ್ಮನಾಯಿತೆ?"

"ಅವರದು ಹೋದದ್ದು ಎಷ್ಟು?"

"ಒಂದೂವರೆ ಲಕ್ಷ ರೂ. ಎರಡು ಲಕ್ಷ ಇತ್ತು. ಐವತ್ತು ಸಾವಿರ ಮೊನ್ನೆ ಸರಕಾರಕ್ಕೆ ಕೊಟ್ಟ."

"ಅದಷ್ಟು ಬ್ಯಾಂಕಿನಲ್ಲಿ ಏಕೆ ಇಡಬೇಕು ಎಂದರೆ?"

"ಆ ಮುದುಕನ ಹುಚ್ಚು. ಅವನಿಗೆ ದಿನಕ್ಕೊಂದು ಸಲ ಬ್ಯಾಂಕಿನ ಸರ್ಟಿಫಿಕೇಟ್ ನೋಡಿಕೊಳ್ಳುವ ಹುಚ್ಚು. ಭೂಮಿ–ಕಾಣಿ, ಮನೆ–ಮಠ ಮಾಡು ಎಂದರೆ ಆಗದು. ಎಲ್ಲಾ ನಾನು ಹೋದಮೇಲೆ. ನಾನು

ಇರುವ ವರೆಗೂ ನಾನು ಸಂಪಾದಿಸಿದ್ದು ಎಂದು ಎದುರಿಗೆ ನಗದಾಗಿ ಇರಬೇಕು ಎನ್ನುತ್ತಿದ್ದ. ಈಗ ಎಲ್ಲವೂ ಸ್ವರ್ಗಕ್ಕೆ ನೇರವಾಗಿ ಹೊರಟು ಹೋಯಿತು. ಮುದುಕನೂ ಅದರ ಹಿಂದೆಯೇ ಹೊರಟುಬಿಟ್ಟರೆ, ಎಲ್ಲಾ ಸರಿಹೋಯಿತು. ಈಗ, ಟೆಲಿಗ್ರಾಮೂ ಬಂದಿದೆ. ಇನ್ನು ನಾಳೆ ಅಲ್ಲಿಗೆ ಹೋಗಿ ಬರಬೇಕು. ಹೋಗಲಿ ಬಿಡು. ಆ ಸನ್ಯಾಸಿ ಹೇಳಿದ ಹಾಗೆ ಮಾಡಬೇಕಾಗಿತ್ತೋ ಏನೋ. ಇನ್ನು ನನಗೆ ಏನೇನು ಕಾದಿದೆಯೋ?"

"ಬಿಡತೂ ಅನ್ನಿ. ನಾಳೆಯಿಂದ ಬೇಕಾದ್ದು ಆಗಲಿ, ನಾನು ದೇವರ ಪೂಜೆ ಮಾಡಿಸುತ್ತೇನೆ."

"ಮಾಡಿಸು. ಇನ್ನೂ ನಮ್ಮ ಭಾಗ್ಯ ಉಳಿದೀರೋದು ಹೆಂಗುಸ ರಿಂದ. ಅವರಿಗೂ ಇಷ್ಟೋ ಅಷ್ಟೋ ಈ ಕಾಲೇಜ್ ಹಚ್ಚ್ಕೊ ಹಿಡಿದು, ದೇವರು ದಿಂಡರು ಅನ್ನೋದು ತಪ್ಪಿದರೆ ಆಗ ಇಂಡಿಯದ ಹಣೇಬರಹ ಮುಗೀತು. ಇರಲಿ ಬಿಡು. ಈಗ ಯಾವ ಮಾತು ಆಡಿದರೂ ವಕ್ರ ವಾಗುತ್ತಿದೆ. ನಿನಗೆ ತೋರಿದ ಹಾಗೆ ಮಾಡು. ನಾಳೆ ಕಾಗದ ನೋಡಿ ಕೊಂಡು ನಾನು ಮತ್ತೆ ಮಧುರೆಗೆ ಹೋಗಿಬರಬೇಕು."

ಮರುದಿನ ಬೆಳಗ್ಗೆ ಕಾಫಿ ಕುಡಿಯುತ್ತಿದ್ದ ಹಾಗೆಯೇ ಎಕ್ಸ್‌ಪ್ರೆಸ್ ಡಿಲಿವರಿ ಕಾಗದವು ಬಂದಿತು. "ದೊಡ್ಡ ರಾಯರಿಗೆ ಇದುವರೆಗೆ-- ಎರಡು ಗಂಟೆ ಪ್ರಜ್ಞೆ ಬಂದಿಲ್ಲ. ಡಾಕ್ಟರುಗಳು ಬಾಯಲ್ಲಿ ಹೇಳದಿದ್ದರೂ ಮುಖದಲ್ಲಿ ಗಾಬರಿ ತೋರಿಸುತ್ತಿದ್ದಾರೆ. ಸಾಧ್ಯವಾಡಿಕೊಂಡು ಪ್ಲೇನ್ ನಲ್ಲಿಯೇ ಬಂದುಬಿಡಿ. ನಟೇಶ್."

ಪ್ರಾಣೇಶನು ಮಧುರೆಗೆ ಪ್ಲೇನಿನಲ್ಲಿ ಹೋದನು. ಮುರಳೀಧರ ರಾಯನ ಶವ ಡೆಡ್‌ಹೌಸಿಗೆ ಬಂದು ಎರಡು ಗಂಟೆಯಾಗಿತ್ತು. ಅಲ್ಲಿ ನಡಸಬೇಕಾದ ವಿಧಿಗಳನ್ನೆಲ್ಲ ನಡಸಿ, ದೇಹಕ್ಕೆ ಅಂತ್ಯಕ್ರಿಯೆಯನ್ನು ಸಲ್ಲಿಸುವ ವೇಳೆಗೆ ಸುಮಾರು ನಾಲ್ಕು ಗಂಟೆಯಾಗಿತ್ತು. ಆಸ್ಪತ್ರೆಯ ಬಿಲ್ಲುಗಳನ್ನೆಲ್ಲಾ ಕೊಟ್ಟು ಇಬ್ಬರೂ ಮದರಾಸಿಗೆ ಹೋದರು.

ಮದರಾಸಿನಲ್ಲಿ ಆ ದಿನ ರಮೇಶನಿಗೆ ಮೈಮೇಲೆ ಜ್ಞಾನ ಚೆನ್ನಾಗಿ ಬಂದಿದೆ. ಎಡಭಾಗದ ಮುಖವೆಲ್ಲ ಬ್ಯಾಂಡೇಜ್‌ನಲ್ಲಿ ಮುಳುಗಿದೆ. ಬಲಗಡೆಯ ಕಣ್ಣೊಂದು ಬಿಟ್ಟು ಹೆಂಡತಿ ಮಗಳ ಮುಖ ನೋಡಿ ನಕ್ಕಿದ್ದಾನೆ. ಆದರೆ ಇನ್ನೂ ಬಹಳ ನಿಶ್ಶಕ್ತಿ. ಬಾಯಿ ಬಿಟ್ಟು ಮಾತನಾಡಲಾರ. ಮೋಹನೆಯು ಇಂದು ಎದ್ದು ಕುಳಿತಿದ್ದಾಳೆ. ಆದರೂ ಇನ್ನೂ ಹೊಲಿಗೆಯು ಭದ್ರವಾಗಿಲ್ಲ ಎಂದು ಎದ್ದು ಓಡಾಡುವಂತಿಲ್ಲ. ವೀಣಾ ಕೂಡ ಏಕೋ ಮಂಕಾಗಿಹೋಗಿದ್ದಾಳೆ. ಅವಳಿಗೆ ದಿನವೂ ಸಂಜೆ ಗಾಳಿ ಸವಾರಿ ಉಂಟು. ಅಕ್ಕಪಕ್ಕದ ವಾರ್ಡಿನವರಿಗೆಲ್ಲ ಅವಳು ಅಚ್ಚುಮೆಚ್ಚಾಗಿ, ಅಲ್ಲೆಲ್ಲ ಸಂಗಾತಿಯರನ್ನು ಸಂಪಾದಿಸಿಕೊಂಡಿದ್ದಾಳೆ. ಆದರೂ ಮುಖದಲ್ಲಿ ಗೆಲುವಿಲ್ಲ.

ರಮೇಶನಿಗೆ ಅದುವರೆಗೆ ಬಾಹ್ಯಪ್ರಜ್ಞೆಯೇ ಅಷ್ಟಾಗಿರಲಿಲ್ಲ. ಆ ದಿನ ಏನೇನು ನಡೆಯಿತು ಎಂಬುದನ್ನು ಹೇಳಲೋ ಬೇಡವೋ ಎನ್ನುವ ಹಾಗೆ ಮೋಹನೆಯೇ ಸೂಕ್ಷ್ಮವಾಗಿ ತಿಳಿಸಿದ್ದಾಳೆ. ಅವಳಿಗೂ ಮಾವನವರು ಮಧುರೆಯಲ್ಲಿದ್ದಾರೆಯೋ ಬೆಂಗಳೂರಿನಲ್ಲಿದ್ದಾರೆಯೋ ಅಷ್ಟು ಚೆನ್ನಾಗಿ ತಿಳಿಯದು.

ನಟೇಶ್ ಪ್ರಾಣೇಶ್ ಇಬ್ಬರೂ ಮದರಾಸಿಗೆ ಬಂದವರು ನೇರವಾಗಿ ಆಸ್ಪತ್ರೆಗೆ ಹೋದರು. ನರಸಿಂಹಯ್ಯನು ವೀಣೆಯನ್ನು ಕರೆದುಕೊಂಡು ಸಮುದ್ರದ ಕಡೆ ಹೊರಡುವುದರಲ್ಲಿದ್ದಾನೆ. ಪ್ರಾಣೇಶನು ಅವನನ್ನು ಸಂಧಿಸಿದನು.

ನರಸಿಂಹಯ್ಯನು ಒಬ್ಬನೇ ಬಂದು ಪ್ರಾಣೇಶನನ್ನು ನೋಡಿದನು. ಪ್ರಾಣೇಶನು ಉಸಿರು ಮೊಗಚದೆ ಕೇಳಿದನು: "ಬ್ಯಾಂಕ್ ವಿಚಾರ ರಮೇಶನಿಗೆ ತಿಳಿದಿದೆಯೇನು?"

"ಎಲ್ಲಿ? ಇವೊತ್ತೇ ಅವರಿಗೆ ಚೆನ್ನಾಗಿ ಜ್ಞಾನ ಬಂದಿರುವುದು. ಆಕ್ಸಿಡೆಂಟ್ ವಿಚಾರ ಕೂಡ ಇವೊತ್ತು ಅಮ್ಮಾ ಅವರೇ ಸೂಕ್ಷ್ಮವಾಗಿ ಹೇಳಿದರು. ನಾನು ಕೂಡ ಬೆಳಗಿಂದ ಮೊಕ ಸರಿಯಾಗಿ ತೋರಿಸಿಲ್ಲ. ಅಲ್ಲಿ ದೊಡ್ಡ ತಾಯರು ಹೇಗಿದ್ದಾರೆ?"

"ಹೇಗೇನು ಇರುವುದು? ಎಲ್ಲಾ ಮುಗಿಯಿತು."

"ಹಾಗಂದರೆ?"

"ಅಗೋ, ನಟೇಶ್ ಬಂದಿದ್ದಾನೆ, ಕೇಳಿ."

ನಟೇಶ್ ಎಲ್ಲವನ್ನೂ ಮೂರೇ ಮಾತಿನಲ್ಲಿ ಮುಗಿಸಿದನು. "ಬ್ಯಾಂಕ್ ವಿಚಾರ ಕೇಳಿದರು. ಅಯ್ಯೋ ಎಂದು ಕಣ್ಮುಚ್ಚಿ ಹೊರಳಿದರು. ಮಂಚದಿಂದ ಕೆಳಗೆ ಬಿದ್ದರು. ಜ್ಞಾನ ತಪ್ಪಿತು. ತಿರುಗಿ ಜ್ಞಾನ ಬರಲಿಲ್ಲ. ಎಲ್ಲವೂ ಮುಗಿಯಿತು."

ನರಸಿಂಹಯ್ಯನು ಸುಮ್ಮನೆ ನೆಲವನ್ನು ನೋಡುತ್ತ ನಿಂತುಕೊಂಡನು. ಅಷ್ಟು ಹೊತ್ತಾದಮೇಲೆ ಪ್ರಾಣೇಶನೇ ಮಾತನಾಡಿಸಿದನು:

"ಈಗ ರಮೇಶ್ ಹೇಗಿದ್ದಾನೆ?"

"ಈಗ ಕೊಂಚ ನಿದ್ದೆ ಬಂದಂತಿದೆ."

"ನಡೆಯಿರಿ, ಹೋಗಿ ನೋಡಿಕೊಂಡು ಬರೋಣ. ನಟೇಶ್, ರಾಯರು ಬೆಂಗಳೂರಲ್ಲಿ ಸೌಖ್ಯವಾಗಿದ್ದಾರೆಯೆಂದು ಹೇಳು. ತಿಳೀತೆ?"

"ಸರಿ ಸಾರ್."

ಮೂವರೂ ರಮೇಶನಿದ್ದ ವಾರ್ಡಿಗೆ ಹೋದರು. ಅವನಿಗೆ ಆಗ ತಾನೇ ನಿದ್ದೆ ಬಂದ ಹಾಗಿದೆ. ಮೋಹನೆಯು ಸುಮ್ಮನೆ ಬಿದ್ದುಕೊಂಡಿದ್ದಾಳೆ. ಇಬ್ಬರೂ ತೊಲೆಯ ತುಂಡಿನಂತಿದ್ದವರು ಒಣಗಿದ ಕಡ್ಡಿಗಳ ಹಾಗೆ ಆಗಿದ್ದಾರೆ. ಪ್ರಾಣೇಶನು ನೋಡಲಾರದೆ ತಲೆ ತಿರುಗಿಸಿಕೊಂಡನು. ನಟೇಶನು ಗೋಡೆಯ ಕಡೆ ತಿರುಗಿಕೊಂಡು ಅಳುತ್ತಾ ನಿಂತಿದ್ದನು. ನರಸಿಂಹಯ್ಯನು ಬಾಗಿಲಲ್ಲಿ ನಿಂತಿದ್ದನು.

ಇವರು ಅಷ್ಟು ಹೊತ್ತು ಹಾಗೆ ನಿಂತಿರುವಾಗ ವೀಣಾ ಓಡಿ ಬಂದಳು. "ಏನು ನರಸಿಂಹಯ್ಯನವರೇ, ಎಲ್ಲಿ ಹೊರಟುಹೋದಿರಿ? ನಾನು ಆಸ್ಪತ್ರೆಯೆಲ್ಲಾ ಒಂದು ಸುತ್ತು ಹಾಕಿಬಿಟ್ಟೆ."

ನರಸಿಂಹಯ್ಯನು ಬರದಿದ್ದ ನಗುವನ್ನು ಬಲವಂತವಾಗಿ ಹಿಂದಿ

ಹಿಂಡಿ ತರುತ್ತ, "ನೀನು ಅತ್ತಕಡೆ ಎಲ್ಲೋ ಹೋದೆ. ನಾನು ಇಲ್ಲಿ ಬಂದು ಕಾದಿದ್ದೇನೆ. ಅಷ್ಟರಲ್ಲೇ ನಿಮ್ಮ ಮಾವ ಬಂದರು" ಎಂದು ಪ್ರಾಣೇಶನನ್ನು ತೋರಿಸಿದನು.

ವೀಣೆಯು "ಮಾವ" ಎಂದು ಸಣ್ಣಗೆ ಕೂಗಿ ಹಗುರವಾಗಿ ಬಂದು ಅವನ ಕೈ ಹಿಡಿದುಕೊಂಡಳು. ಅವಳು ಕೂಗಿದುದು ಕೇಳಿ ಮೋಹನೆಯೂ ಮುಸುಕು ತೆಗೆದು ಎದ್ದು ಕೂತುಕೊಂಡಳು. ಪ್ರಾಣೇಶನು ವೀಣೆಯನ್ನು ವಿಶ್ವಾಸದಿಂದ ಎಳೆದುಕೊಂಡು "ಚೆನ್ನಾಗಿದ್ದೀಯಾ? ಅಪ್ಪಾ ಅಮ್ಮಾ ಹೇಗಿದ್ದಾರೆ?" ಎಂದು ಕೇಳಿದನು.

ವೀಣೆಯು "ಅಪ್ಪಾ ಮಲಗಿದ್ದಾರೆ. ಅಮ್ಮಾ ಅದೋ!" ಎಂದು ತೋರಿಸಿದಳು.

ಪ್ರಾಣೇಶನು ಬಂದು ಮೋಹನೆಯನ್ನು ಮಾತನಾಡಿಸಿದನು. ತನ್ನವರು ಎಂದು ಬಂದು ಮಾತನಾಡಿಸಿಯಾರೇ ಎಂದು ಹಂಬಲಿಸುತ್ತಿದ್ದ ಮೋಹನೆಗೆ ಪ್ರಾಣೇಶನ ಮುಖವನ್ನು ಕಂಡು ಅಳು ಬಂದುಬಿಟ್ಟಿತು. ಕಣ್ಣೀರನ್ನು ಹಾಗೇ ವರಸಿಕೊಳ್ಳುತ್ತಾ "ಯಾವಾಗ ಬಂದಿರಿ? ಮಾವ ಹೇಗಿದ್ದಾರೆ? ಎಲ್ಲಿದ್ದಾರೆ?" ಎಂದು ಕೇಳಿದಳು.

"ಮಾವ ಊರಿಗೆ ಬಂದರು, ಚೆನ್ನಾಗಿದ್ದಾರೆ. ಇನ್ನೂ ಸುಸ್ತು. ಇಲ್ಲದಿದ್ದರೆ ಅವರನ್ನೂ ಕರೆದುಕೊಂಡು ಬರುತ್ತಿದ್ದೆ. ನೀನು ಹೇಗಿದ್ದೀಯಮ್ಮಾ?"

"ಸುಸ್ತು. ಮಾತನಾಡಲು ಆಗುವುದಿಲ್ಲ. ಬಾರದು ಅಂತ ಡಾಕ್ಟರು ಹೇಳಿದ್ದಾರೆ."

"ಈ ಸಲಕ್ಕೆ ನೀನೇ ಪುಣ್ಯವಂತೆ! ಗಂಡನ್ನ ಉಳಿಸಿಕೊಂಡೆ. ಆ ದಿನ ನೋಡಿದಾಗ ಇವನು ಉಳಿದಾನೇ ಎನ್ನಿಸಿ ನನಗೆ ದೊಡ್ಡ ಪ್ರಾಣ ಹಾರಿಹೋಗಿತ್ತು."

"ನೋಡಿ, ಆ ಬ್ಯಾಂಡೇಜ್ ಯಾವೊತ್ತು ತೆಗೆಯುತ್ತಾರೋ

ಪುಣ್ಯಾತ್ಮರೆ! ನನಗೆ ಜೀವ ಬೇಡಾಗದೆ. ಈ ಮಗೂಗೋಸ್ಕರ ಬದುಕಿರ ಬೇಕು, ಅಷ್ಟೇ!"

"ಹಾಗೆಲ್ಲ ಅನ್ನಬಾರದು ಮೋಹನಾಬಾಯಿ. ಇನ್ನೂ ನೀನು ಸಣ್ಣಪುಟ್ಟವಳು. ಮನುಷ್ಯನಿಗೆ ಬರದೆ ಮರಕ್ಕೆ ಬರುತ್ತದೆಯೇ ವಿಪತ್ತು ಅನ್ನೋದು? ರಮೇಶ ಮಲಗಿದ್ದಾನೇನು?"

"ಹೌದು. ನಿದ್ದೆಯಿಲ್ಲ, ಮಂಪರ."

"ಆಗಲಿ. ನಾವು ಹಾಗೇ ಸುತ್ತಿ ಬರುತ್ತೇವೆ, ಆ ವೇಳೆಗೆ."

ನಟೇಶ್ ಬಂದು ನಿಂತುಕೊಂಡನು. ಮೋಹನೆಯೇ ಮಾತನಾಡಿಸಿದಳು: "ಚೆನ್ನಾಗಿದ್ದೀಯಾ? ಅವೊತ್ತು ನಿನಗೇನೂ ಆಗಲಿಲ್ಲವಲ್ಲ?"

ನಟೇಶನಿಗೂ ಎಡಗೈಗೆ ಏಟು ಬಿದ್ದಿತ್ತು. ದೊಡ್ಡ ಗಾಯವಾಗಿತ್ತು. ಅದೆಲ್ಲ ಗುಣವಾಗಿತ್ತು. ಆದರೂ ಇನ್ನೂ ಕೆಂಪಗೆ ಕಲೆ ಒಂದು ಗೇಣುದ್ದವಿತ್ತು. ನಟೇಶ್ ಅದನ್ನು ತೋರಿಸಿದನು. ಮೋಹನೆಯು "ಅಯ್ಯೋ ಪಾಪ, ನಮ್ಮ ಜೊತೆಯಲ್ಲಿ ನಿನಗೂ ವಿಪತ್ತು ಬಂತು. ಹೋಗಲಿ, ಗುಣವಾಯಿತಲ್ಲ!" ಎಂದಳು.

ನಟೇಶನು "ತಮ್ಮ ವಿಪತ್ತಿನ ಮುಂದೆ ನಮ್ಮದೇನಲ್ಲ ತಾಯಿ. ತಮಗೆ ರಾಯರಿಗೆ ಹೇಳಿ" ಎಂದು ತನ್ನ ಕಷ್ಟವನ್ನು ತೇಲಿಸಿಕೊಂಡನು.

"ನಿನ್ನ ಹೆಂಡತಿ ಮಕ್ಕಳು ಚೆನ್ನಾಗಿದ್ದಾರಾ?"

"ಹೂ, ತಾಯಿ—ಚೆನ್ನಾಗಿದ್ದಾರೆ."

"ಎಲ್ಲಿಂದ ಬಂದೆ?"

"ಮಧುರೆ—ಅಲ್ಲ—ಬೆಂಗಳೂರಿಂದ. ದೊಡ್ಡರಾಯರನ್ನು ಅಲ್ಲಿ ಬಿಟ್ಟು ಬಂದೊ"

"ಎಲ್ಲಿ?"

"ಬೆಂಗಳೂರಲ್ಲಿ"

"ಅವರನ್ನು ಯಾರು ನೋಡಿಕೊಳ್ಳುತ್ತಿದ್ದಾರೆ?"

ನಟೇಶನು ಅದಕ್ಕೆ ಸಿದ್ಧನಾಗಿರಲಿಲ್ಲ. ಪ್ರಾಣೇಶನ ಕಡೆ ನೋಡಿದನು. ಪ್ರಾಣೇಶನು "ನಮ್ಮ ಜೂನಿಯರ್‌ಗೆ ಒಪ್ಪಿಸಿದ್ದೇವೆ. ಏನೂ ದಿಗಿಲಿಲ್ಲ. ನಟೇಶ್ ಅಲ್ಲಿ ಇರುವವರೆಗೂ ನೈಯೆಲ್ಲ ಕಣ್ಣಾಗಿ ನೋಡಿಕೊಳ್ಳುತ್ತಿದ್ದ. ಈಗ ಅವರು ನೋಡಿಕೊಳ್ಳುತ್ತಾರೆ, ನಾವೂ ನಾಳೆ ನಾಡಿದ್ದು ಹೋಗುತ್ತೇವಲ್ಲ."

ಆ ವೇಳೆಗೆ ಡಾಕ್ಟರ್ ಬಂದರು. ಪ್ರಾಣೇಶನೂ ಡಾಕ್ಟರೂ ಮಾತನಾಡಿಕೊಂಡರು. ಡಾಕ್ಟರು ಹೇಳಿದರು: "ಆ ಹೆಂಗುಸು ಬದುಕಿಕೊಂಡರು. ಇನ್ನು ಹದಿನೈದು ದಿನದಲ್ಲಿ ಅವರು ಎದ್ದು ತಿರುಗುತ್ತಾರೆ. ಆದರೆ ಆ ಗಂಡುಸು, ಅವರಿಗೆ ಇನ್ನು ಎರಡು ತಿಂಗಳಾದರೂ ಬೇಕು. ಎಡಗಣ್ಣಿನದು ಖಾತರಿ ಇಲ್ಲ. ಮುಖ ವಿಕಾರವಾಗದ ಹಾಗೆ ನಾವೂ ಏನೇನೋ ಮಾಡಿದ್ದೇವೆ. ಆದರೂ ಮೊದಲಿನ ಹಾಗೆ ಇರುವುದಿಲ್ಲ. ಬ್ರೈನ್‌ಗೆ ಏನಾದರೂ ಏಟು ತಗಲಿದ್ದರೆ ಹೇಳುವಂತಿಲ್ಲ. ಇವೊತ್ತು ಚೆನ್ನಾಗಿ ಜ್ಞಾನ ಬಂದಿತ್ತು ಎನ್ನುತ್ತಾರೆ. ನನಗೆ ನಂಬಿಕೆಯಿಲ್ಲ. ನಾಳೆ ನೋಡಿ ಹೇಳುತ್ತೇನೆ."

"ಹಾಗಾದರೆ ನಿಮಗೆ ಏನೋ ಸಂದೇಹವಿದೆ?"

"ಹೌದು."

"ನನ್ನ ಕೈಯಲ್ಲಿ ಹೇಳಬಹುದಲ್ಲ."

"ಬಹುಶಃ ಬ್ರೇನ್‌ಗೆ ಏಟು ಬಿದ್ದಿದೆ. ಹೆಂಡತಿ ಮಕ್ಕಳ ಗುರುತು ಹಿಡಿಯುವುದೂ ಕಷ್ಟವಾದೀತು. ಈ ಪೇಷೆಂಟು ಬದುಕಿದರೂ ಅವನಿಗೆ ಸುಖವಿಲ್ಲ."

ಪ್ರಾಣೇಶನಿಗೆ ಕಣ್ಣು ಕತ್ತಲೆ ಕಟ್ಟಿಕೊಂಡು ಬಂತು. ಆದರೆ ಏನು ಮಾಡಬೇಕು? ಕಣ್ಣಲ್ಲಿ ನೀರು ಬಂತು. ಡಾಕ್ಟರ ಕೈಹಿಡಿದುಕೊಂಡು ಹೇಳಿದನು; "ಡಾಕ್ಟರ್, ಇವನು ಮೊದಲಿನಂತಾದರೆ ಹೈಕೋರ್ಟ್

ಬೆಂಚಿಗೆ ಹೋಗುತ್ತಾನೆ. ಏನಾದರೂ ಮಾಡಿ ಬದುಕಿಸಿ. ಏನು ಖರ್ಚಾದರೂ ಚಿಂತೆಯಿಲ್ಲ."

"ನಿಮ್ಮ ಹೆಸರೇನು ?"

ಪ್ರಾಣೇಶನು ಕಾರ್ಡು ತೆಗೆದುಕೊಟ್ಟನು. ಡಾಕ್ಟರ್ ನೋಡಿಕೊಂಡು, ಹೇಳಿದನು: "ಮಿಸ್ಟರ್ ಪ್ರಾಣೇಶ್ ನಾನು ಇದುವರೆಗೆ ಏನೇನು ಮಾಡಬಹುದೋ ಎಲ್ಲ ಮಾಡಿದ್ದೇನೆ. ಆದರೆ ನಾನೇ ಕೊನೆಯಲ್ಲ. ಆಗಲಿ, ನಾವು ಡಾಕ್ಟರು. ನಿಮ್ಮ ಹಾಗೇ ಜಡ್ಜಮೆಂಟ್ ಆಗುವ ವರೆಗೂ ನಂಬಿಕೆ ಬಿಡುವುದಿಲ್ಲ. ಬದುಕಿದರೂ ಹಿಂದಿನಂತೆ ಇರುತ್ತಾನೆ ಎನ್ನುವ ಆಶೆ ಮಾತ್ರ ಬಿಡಿ."

ಡಾಕ್ಟರು ಪೆಚ್ಚು ನಗೆ ನಕ್ಕು ಮುಂದೆ ಹೋದರು.

ಪ್ರಾಣೇಶನು ವೀಣೆಯನ್ನು ಕರೆದುಕೊಂಡು ಹೋಗುವಂತೆ ನಟೇಶನಿಗೊಪ್ಪಿಸಿ, ನರಸಿಂಹಯ್ಯನನ್ನು ಕರೆದುಕೊಂಡು ತಾವು ಎತ್ತಲೋ ಹೋದರು.

ಡಾಕ್ಟರು ಹೇಳಿದ್ದಂತೆಯೇ ರಮೇಶನು ಎದ್ದು ಕುಳಿತುಕೊಳ್ಳುವ ವೇಳೆಗೆ ಎರಡು ತಿಂಗಳು ಹಿಡಿಯಿತು. ಆಗಲೂ ಇನ್ನೂ ಆಯಾಸ. ಎದುರಿನವರನ್ನು ಸುಮ್ಮನೆ ದುರುಗುಟ್ಟಿಕೊಂಡು ನೋಡುವನು. ಹತ್ತು ಮಾತಿಗೆ ಯಾವದಾದರೊಂದು ಮಾತು ಉತ್ತರಕೊಡುವನು. ಆಗ ನೋಡಿದ್ದು ಈಗ ನೋಡಿದವರಿಗೆ "ರಮೇಶನ ದೇಹದಲ್ಲಿ ಇನ್ನು ಯಾವುದೋ ಮುದಿಯನ ಆತ್ಮ ಬಂದು ಸೇರಿಕೊಂಡಿದೆ." ಎನ್ನಿಸುವುದು. ಮೋಹನೆಯು ಪ್ರಕೃತಿಸ್ಥಳಾದಳು. ಈಗ ವೀಣೆಗೆ ಬೇರೆ ಇನ್ನೇನೂ ಬೇಕಾಗಿಲ್ಲ. ತಂದೆಯ ಜೊತೆಯಲ್ಲಿದ್ದು ಆತನಿಗೆ ಪ್ರಿಯವಾಗುವಂತೆ ಏನಾದರೂ ಮಾಡಿಕೊಂಡಿರುವುದು. ದಿನಕ್ಕೆ ಒಂದೆರಡು ಸಲವಾದರೂ ತಾತನನ್ನು ನೆನೆಸಿಕೊಳ್ಳುವಳು. 'ತಾತನಿಂದ ಕಾಗದವೂ ಬರಲಿಲ್ಲವಲ್ಲ' ಎನ್ನುವಳು. ಒಂದು ದಿನ ಅವಳ ಬಲವಂತಕ್ಕೆ ಒಂದು ಟೆಲಿಗ್ರಾಂ ಕೂಡ ಬೆಂಗಳೂರಿಗೆ ಹೋಯಿತು. ಇನ್ನೊಂದು ಸಲ "ತನ್ನೊಡನೆ

ಮಾತನಾಡಲು ಟೆಲಿಫೋನ್ ಬಳಿಗಾದರೂ ಬರಲಿ, ಕರೆಯಿಸಿ ಮಾವ" ಎಂದು ಹಟ ಹಿಡಿದಳು. ಆದರೂ ಏನೂ ಫಲವಾಗಲಿಲ್ಲ.

ಇಲ್ಲಿ ಪ್ರಾಣೇಶನಿಗೆ ಪ್ರಾಣಸಂಕಟ. ಮುರಳೀಧರರಾಯನು ಹೋಗಿಬಿಟ್ಟನೆಂದು ರಮೇಶನಿಗೆ ತಿಳಿಸುವುದು ಹೇಗೆ? ಅಬ್ಬಬ್ಬಾ ಎಂದರೆ ಇನ್ನೊಂದು ಹದಿನೈದು ದಿನ ತಪ್ಪಿದರೆ ತಿಂಗಳೊಳಗೆ ರಮೇಶನು ಬೆಂಗಳೂರಿಗೆ ಬರುವನು. ಆಗಲಾದರೂ ತಿಳಿಯದಿರುವುದು ಹೇಗೆ?

ಅದಕ್ಕಿಂತಲೂ ಹೆಚ್ಚಾದ ಕಷ್ಟ ಬ್ಯಾಂಕಿನ ಸುದ್ದಿ. ಅದು ತಿಳಿದರೆ ಅಪ್ಪನ ಹಾಗೆ ಮಗನೂ ಎದೆ ಒಡೆದು ಸತ್ತುಹೋದರೆ?

ಪ್ರಾಣೇಶನು ನಿಜವಾಗಿಯೂ ಬುದ್ಧಿವಂತನಾದ ಲಾಯರು. ಆದರೂ ಏನು ಮಾಡಬೇಕೋ ಅವನಿಗೆ ತಿಳಿಯುಲಿಲ್ಲ.

ಕೊನೆಗೆ ಬೇಕಾದುದು ಆಗಲಿ, ಎಂದು ಒಂದು ಕಾಗದವನ್ನು ಮೋಹನೆಯ ಹೆಸರಿಗೆ ಬರೆದು ಹಾಕಿದನು.

"ತಂಗಿ, ಈ ಕಾಗದವನ್ನು ಏಕಾಂತವಾಗಿದ್ದಾಗ ಓದಿಕೊ. ಮುಂದೆ ಹೇಗೆ ನಡೆಯಬೇಕೋ ಅದನ್ನು ನೀನೇ ನಿರ್ಧರಿಸಿಕೊ. ಗಂಡಸರಿಗಿಂತ ಹೆಂಗಸರ ಬುದ್ಧಿ ಚುರುಕು ಎಂದು ಕೇಳಿದ್ದೇನೆ. ಅದು ನಿಜವಾಗಲಿ. ನೀನೀಗ ಎಷ್ಟು ಜಾಗರೂಕತೆಯಿಂದ ವರ್ತಿಸಿದರೆ ಅಷ್ಟು ಒಳ್ಳೆಯದು.

ನಿಮ್ಮ ಮಾವನವರು ಮುರಳೀಧರರಾಯರು ಸ್ವರ್ಗಸ್ಥರಾಗಿ ಇಂದಿಗೆ ಮೂರು ತಿಂಗಳಾಯಿತು. ಅವರು ಮಧುರೆಯಲ್ಲಿಯೇ ಹೋಗಿಬಿಟ್ಟರು. ಆವಾಗ ನಟೇಶ್ ಅವರ ಬಳಿಯಲ್ಲಿಯೇ ಇದ್ದ. ನಾನು ಅವರ ಪ್ರಾಣ ಹೋದ ಎರಡು ಮೂರು ಗಂಟೆಗಳೊಳಗಾಗಿ ಅಲ್ಲಿಗೆ ಹೋದೆ. ಇಬ್ಬರೂ ಅವರಿಗೆ ಆಗಬೇಕಾದ ಕಾರ್ಯಗಳನ್ನೆಲ್ಲಾ ಮಾಡಿಸಿದೆವು. ಉಳಿದ ಕರ್ಮಗಳೂ ಸಾಂಗವಾಗಿ ಈ ಊರಿನಲ್ಲಿಯೇ ನೆರವೇರಿತು. ಇದನ್ನು ನಿಮಗೆ ಆಗಲೇ ತಿಳಿಸುವುದಕ್ಕೆ ಸಾಧ್ಯವಿರಲಿಲ್ಲ. ಅದರಿಂದ ತಿಳಿಸಲಿಲ್ಲ. ಈೀಗಾಗ ಹೇಳದಿದ್ದರೆ ಸರಿಯುಲ್ಲ. ಅದರಿಂದ ಹೇಳಲೇ ಹೇಳು. ನಿನ್ನ

ಗಂಡನಿಗೆ ಹೇಗೆ ತಿಳಿಸುವುದೋ ನಾನು ಕಾಣೆ. ಸಮಯ ನೋಡಿ ಹೇಳು. ಅನರ್ಥವಾಗುವಹಾಗಿದ್ದರೆ ತಿಳಿಸಬೇಡ. ಇದುವರೆಗೆ ತಿಳಿಸದಿದ್ದ ತಪ್ಪು ಕ್ಷಮಿಸು, ಯಾವೊತ್ತು ಬರುವಿರೋ ಬರೆ ನಾನೇ ಬಂದು ಕರೆದುಕೊಂಡು ಬರುತ್ತೇನೆ.

ಇತಿ, ನಿನ್ನ ಸೋದರ
ಪ್ರಾಣೇಶ."

ಮೋಹನೆಯು ಕಾಗದವನ್ನು ಓದಿಕೊಂಡಳು. ಅವಳಿಗೆ ಆಗಲೇ ಮನಸ್ಸಿನಲ್ಲಿ ಹೀಗಾಗಿರಬೇಕೆಂದು ಒಂದು ನೆರಳಿನ ಹಾಗೆ ಒಂದು ಭಾವ ಸುಳಿದಿತ್ತು. ತಮಗೋಸ್ಕರವಲ್ಲದಿದ್ದರು ಮುದುಕ ಮೊಮ್ಮಗಳಿಗೋಸ್ಕರವಾದರೂ ಬರಬೇಕಾಗಿತ್ತು. ಅಥವಾ ಒಂದು ಸಲವಾದರೂ ಕರೆಸಿಕೊಳ್ಳಬೇಕಾಗಿತ್ತು—ಎರಡೂ ಇಲ್ಲದಿರುವುದನ್ನು ನೋಡಿ, ಅವಳ ಮನಸ್ಸಿನಲ್ಲಿ ಸಂಶಯ ಮೂಡಿತ್ತು.

ಕಾಗದವನ್ನು ಓದಿ ಅತ್ತಳು. ಗಟ್ಟಿಯಾಗಿ ಅಳುವಂತಿಲ್ಲ. ನೀರವವಾಗಿ ಆಸ್ಪತ್ರೆಯ ಒಂದು ಮೂಲೆಯಲ್ಲಿ ನಿಂತು ಅತ್ತಳು. ಬಂದು ಹೋಗುವ ಜನ ಬೇಕಾದಹಾಗಿದ್ದರೂ ಇವಳನ್ನು ಕೇಳಲಿಲ್ಲ. "ನೋಡಿದೆಯಾ? ನನ್ನ ಗತಿ ಹೇಗಾಯಿತು? ತವರಿನಲ್ಲಿ ನೀನೇ ಎನ್ನುವರಿಲ್ಲ. ಏನೋ ಮುತ್ತಿನಂಥ ಗಂಡ ಸಿಕ್ಕಿದ ಎಂದುಕೊಂಡು ಹಾಯಾಗಿದ್ದರೆ, ಈ ತೀರ್ಥಯಾತ್ರೆಯ ನೆಪದಲ್ಲಿ ಮೃತ್ಯು ಬಂದು ಹೀಗಾಯಿತು. ಮಾವ ಹೋದರು. ಗಂಡ ಹೀಗಾದರು ಇನ್ನು ಈ ಮಗು ಕಟ್ಟಿಕೊಂಡು ನಾನು ಕಾಲಹಾಕಬೇಕೆಂದರೆ, ನನ್ನ ಹಣೆಯ ಬರೆಹ ಎಂಥದು." ಎಂದು ಬಹಳ ಸಂಕಟಪಟ್ಟಳು. ಆದರೂ ತಾನು ಏನು ಮಾಡಬಹುದು? ಬಂದುದು ಬರಲಿ ಎಂದು ಧೈರ್ಯಮಾಡಲಾರಳು. ಬಂದುದನ್ನು ಅನುಭವಿಸಲಾರಳು. ಅವಳಿಗೆ ಏನೋ ಅಧೈರ್ಯ ತಟ್ಟಿ ಗಡಗಡನೆ ನಡುಗಿದಳು. ಬೆಳಗಿನ ಹತ್ತು ಗಂಟೆ. ಬಿಸಿಲಿನಲ್ಲಿಯೇ ನಿಂತಿದ್ದಾಳೆ. ಆದರೂ ಚಳಿಬಂದಹಾಗೆ ನಡುಗುತ್ತಿದ್ದಾಳೆ. ವೀಣಾ ಬಂದು ಮಗ್ಗುಲಲ್ಲಿ ನಿಂತಿರುವುದೂ ಅವಳಿಗೆ ತಿಳಿಯದು. ಕಣ್ಣಲ್ಲಿ ನೀರು ಉದುರುತ್ತಿದೆ. ಕೈಕಾಲು ಕೂಡ ಗಡಗಡ

ನಡುಗುತ್ತಿದೆ. ಕೈಯಲ್ಲಿದ್ದ ಕಾಗದ ಕೆಳಕ್ಕೆ ಬಿದ್ದುಹೋಯಿತು. ಅದೂ ಕೂಡ ಅವಳಿಗೆ ತಿಳಿಯದು.

ವೀಣಾ ತಾಯಿಯ ಸ್ಥಿತಿಯನ್ನು ಕಂಡು ಗಾಬರಿಯಾದಳು. ಏಕೋ ಮಾತಾಡಿಸಲಿಲ್ಲ. ಕೈಯಿಂದ ಬಿದ್ದ ಕಾಗದವನ್ನು ತೆಗೆದು ಕೊಂಡಳು, ತೆಗೆದಳು; ಓದಿದಳು. ಅವಳಿಗೂ ಅಳು ಬಂತು. ಬಿದ್ದು ಬಿದ್ದು ಹೊರಳಿಹೊರಳಿ ಅಳಬೇಕು ಎನ್ನಿಸಿತು. ತನ್ನನ್ನು ಮುದ್ದಿಸು ತ್ತಿದ್ದ ತಾತ ಮತ್ತೊಮ್ಮೆ ಬಂದು ಎದುರು ನಿಂತು "ಏನು, ವೀಣಾ, ಮುದುಕ ಸತ್ತ ಅಂದರೂ ಅಳಬೇಡವೋ?" ಎಂದು ಕೇಳಿದ ಹಾಗಾ ಯಿತು. ಹಾಗೆಯೇ ಆ ಕೈಪಿಡಿಯ ಗೋಡೆಯ ಅಂಚಿನಲ್ಲಿಯೇ ಲಂಗದ ಮರೆಯಲ್ಲಿಯೇ ಅತ್ತು, ಕಣ್ಣೀರು ಒರೆಸಿಕೊಂಡು "ಅಮ್ಮ" ಎಂದಳು.

ಮೋಹನೆಯು ಬೆಚ್ಚಿಬಿದ್ದಳು. ತನ್ನ ಕೈಯಲ್ಲಿರಬೇಕಾಗಿದ್ದ ಕಾಗದ ಪತ್ರ ಅವಳ ಕೈಯಲ್ಲಿರುವುದನ್ನು ಕಂಡಳು. ಅವಳು ಓದಿಯೂ ಇರ ಬೇಕೆಂದೂ ತಿಳಿಯಿತು. ನೀರು ತುಂಬಿದ ಕಣ್ಣನ್ನು ಅಗಲವಾಗಿ ತೆರೆದು ಮಗಳ ಕಡೆ ನೋಡಿದಳು.

ಮಗಳು ನೀರವವಾಗಿ ಅಳುತ್ತ, ಅಳುವನ್ನೆಲ್ಲ ನುಂಗುತ್ತ, ತುಟಿಗಳನ್ನು ಭದ್ರವಾಗಿ ಕಚ್ಚಿಕೊಳ್ಳುತ್ತ, ಕಷ್ಟದಿಂದ ನುಡಿಯುತ್ತ, "ಅಮ್ಮ, ಇದನ್ನು ಅಣ್ಣನಿಗೆ ಹೇಳಬೇಡ." ಎಂದು ತಾಯಿಯ ಕೈಗೆ ಕಾಗದವನ್ನು ಕೊಟ್ಟು, ಅಲ್ಲಿ ನಿಲ್ಲದೆ ಹೊರಟುಹೋದಳು.

ಕಾಗದ ಬಂದು ಹದಿನೈದು ದಿನವಾಯಿತು. ಈಗ ಎಂಟು ದಿನ ದಿಂದ ರಮೇಶನಿಗೆ ಮತ್ತೆ ದೇಹಸ್ವಾಸ್ಥ್ಯ ತಪ್ಪಿದೆ. ದಿನದಿನಕ್ಕೆ ಇಳಿದು ಹೋಗುತ್ತಿದ್ದಾನೆ. ಇಳಿದು ಹೋಗುತ್ತಿರುವುದು ಬರಿಯ ಕಣ್ಣಿಗೇ ಕಾಣಿ ಸುತ್ತಿದೆ. ಡಾಕ್ಟರು ತೂಕಮಾಡಿ ನೋಡಿದರು. ದಿನಕ್ಕೆ ಸುಮಾರು ಐದಾರು ಪೌಂಡು ಇಳಿದು ಹೋಗುತ್ತಿರುವಂತಿದೆ. ಸಂಜೆಯ ಹೊತ್ತು ಬಂದು ಎರಡುಮೂರು ಸಲ ಪರೀಕ್ಷೆಮಾಡಿ ನೋಡಿದರು. ಮೋಹನೆ ಯನ್ನು ಕರೆದು "ನಿಮ್ಮವರನ್ನು ಕರೆಸಿ. ಇನ್ನೊಂದು ಸಲ ಎಗ್ಸಾಮಿನ್ ಮಾಡಬೇಕು." ಎಂದರು.

ಪ್ರಾಣೇಶನು ಮರುದಿನ ಪ್ಲೇನಿನಲ್ಲಿ ಬಂದನು. ಅಂದಿನ ಸಾಯಂಕಾಲ ಡಾಕ್ಟರು ಅವನನ್ನು ಪ್ರತ್ಯೇಕವಾಗಿ ಕರೆದು "ಟಿ.ಬಿ. ಅನ್ನುವಹಾಗಿದೆ. ನಾಳೆ ಪರೀಕ್ಷೆಮಾಡಿಸಿ. ಅದೂ ಕೆಟ್ಟ ಜಾತಿಯದು. ಗ್ಯಾಲಪ್ಪಿಂಗ್ ಸಾರ್ಟ್ ಎನ್ನುವಂತಿದೆ" ಎಂದರು.

ಪ್ರಾಣೇಶನು ಭೂಮಿಗಿಳಿದು ಹೋದನು. ಮರುದಿನ ಪರೀಕ್ಷೆ ಯಾಯಿತು. ಡಾಕ್ಟರ ಸಂಶಯವೇ ನಿಜವಾಯಿತು. "ಇನ್ನೊಂದು ವಾರ ಬದುಕಿದರೆ ಹೆಚ್ಚು. ಆಸ್ಪತ್ರೆಯಿಂದ ಕರೆದುಕೊಂಡು ಹೋಗ ಬೇಕು." ಎಂದಾಯಿತು.

ಪ್ರಾಣೇಶನು ತಾಂಬರಂನಲ್ಲಿ ಒಂದು ವಿಶಾಲವಾದ ಬಂಗಲೆಯನ್ನು ಮಾಡಿ ಅಲ್ಲಿಗೆ ಎಲ್ಲರನ್ನೂ ಕರೆದುಕೊಂಡು ಹೋದನು. ಬೆಂಗಳೂರಿಂದ ನರಸಿಂಹಯ್ಯ, ನಟೇಶ್ ಇಬ್ಬರೂ ಬಂದರು.

ಅಲ್ಲಿ ರಮೇಶನು ಹೆಂಡಿತಿ, ಮಗಳು, ಗೆಳೆಯ, ತನ್ನ ಕ್ಲಾರ್ಕ್, ಡ್ರೈವರು, ಎಲ್ಲರ ಜೊತೆಯಲ್ಲಿ ಎಂಟು ದಿನವಿದ್ದು, ಒಂಭತ್ತನೆಯ ದಿನ ಈ ಲೋಕವನ್ನು ಬಿಟ್ಟು ಹೊರಟುಹೋದನು. ಎಲ್ಲರೂ ಎರಡು ದಿನ ಇದ್ದು ಮಾಡಬೇಕಾದ್ದು ಮಾಡಿ ಬೆಂಗಳೂರಿಗೆ ಬಂದರು.

## ೬

ಪ್ರಾಣೇಶನಿಗೆ ದೊಡ್ಡ ಯೋಚನೆಯಾಗಿದೆ: "ರಮೇಶನು ಬುದ್ಧಿವಂತ, ವಿದ್ಯಾವಂತ, ಚೆನ್ನಾಗಿ ಸಂಪಾದಿಸಿದ ಶ್ರೀಮಂತ. ಯಾರಿಗೂ ಕೆಟ್ಟುದು ಮಾಡಿದವನಲ್ಲ; ಮಾಡಬೇಕೆಂದುಕೊಂಡವನೂ ಅಲ್ಲ. ಆದರೂ ಅವನಿ ಗೇಕೆ ಇಷ್ಟು ಭಯಂಕರವಾದ ಸಾವು ಬಂತು?"

"ಜೀವನವೆನ್ನುವುದು ಇಷ್ಟೇ ಏನು? ಎಲ್ಲಿಂದಲೋ ಬರುವುದು, ಬಂದ ಕೆಲವು ವರುಷ ಅಸಹಾಯವಾಗಿ, ಕೇವಲ ಇನ್ನೊಬ್ಬರ ದಯೆಯಿಂದ ಬದುಕಿರುವುದು. ಅನಂತರ ತಾನು ಸ್ವತಂತ್ರನೆಂದುಕೊಂಡಾಗಲೂ ರೈಲ್ವೆ ವ್ಯಾಗನ್ನುಗಳಂತೆ ಅಲ್ಲಿಂದ ಇಲ್ಲಿಗೆ ಇಲ್ಲಿಂದಲ್ಲಿಗೆ ಹಾರಾಡಿ, ಕೊನೆಗೆ ಯಾವೊತ್ತೋ ಒಂದು ದಿನ ಕೆಳಗೆ ಬಿದ್ದು ಪುಡಿಪುಡಿಯಾಗುವುದು. ಇಷ್ಟೇನೇನು ಜೀವನವೆನ್ನುವುದು?

"ಹಾಗಾದರೆ ಜೀವನಕ್ಕೆ ಒಂದು ಗುರಿಯಿಲ್ಲವೆ? ಸುಮ್ಮನೆ ತಿಂದು ಕುಡಿದು ಉರುಳುವುದು ಅಷ್ಟೇ ಏನು ಜೀವನ? ಹಾಗೆ ಜೀವನವಿದೆಯೆನ್ನುವುದಾದರೆ, ಈಗ ರಮೇಶನು ಬದುಕಿದ್ದ ಮೂವತ್ತೆರಡು ವರ್ಷವಲ್ಲಿ ಅವನು ಏನು ಸಾಧಿಸಿದಂತಾಯಿತು? ಅಷ್ಟು ಹಣ ಸಂಪಾದಿಸಿದ; ಅದು ಬ್ಯಾಂಕಿನಲ್ಲಿ ಹೋಯಿತು. ಕೀರ್ತಿ ಸಂಪಾದಿಸಿದ; ಅದು ಅಷ್ಟು ದಿನವಿದ್ದು ಎಲ್ಲಿಯೋ ಯಾವಾಗಲೋ ಮಂಜಿನಂತೆ ಕರಗಿಹೋಗುವುದು. ಇಲ್ಲವೆನ್ನದೆ, ಮೋಹನೆಯೊಬ್ಬಳು ಅವನಿಗಾಗಿ ಅಳುತ್ತಾಳೆ. ಮೇರಿಯೂ ಅಷ್ಟು ದಿನ ಅತ್ತಾಳು. ಅವನ ಸ್ನೇಹಿತರೂ ಅಷ್ಟಷ್ಟು ದಿನ ಅಳುತ್ತಾರೆ. ಇಷ್ಟೇ ಏನು? ನಾವು ಹೋದಮೇಲೆ ಇತರರು ಅಳುವುದಕ್ಕಾಗಿ. ಅವರು ಅಳಲಿ ಎಂದು ನಾವು ನಾವು ಇಷ್ಟು ಒದ್ದಾಡಬೇಕೇ?

"ನಿಜವಾಗಿ ಜೀವನಕ್ಕೆ ಒಂದು ಗುರಿಯಿಲ್ಲವೇ? ಜೀವನದ ಗುರಿ ಎನ್ನುವುದು ಕೇವಲ ಕಲ್ಪಿತವೇ? ಮಾಡುವುದಕ್ಕೆ ಕೆಲಸವಿಲ್ಲದವರು ಕಲ್ಪಿಸಿಟ್ಟಿರುವ ಒಂದು ಕಥೆಯೋ ಈ ಗುರಿ ಎನ್ನುವುದು?

"ಹಾಗೆ ಗುರಿಯಿಲ್ಲದ ಕುರುಡು ಜೀವನವಾದರೆ ಪ್ರತಿಯೊಬ್ಬರೂ ಬದುಕಬೇಕು, ಬದುಕಬೇಕು, ಎಂದೇಕೆ ಒದ್ದಾಡಬೇಕು? ಅಷ್ಟೇ ಅಲ್ಲ. ಬರಿಯ ಬದುಕುವುದು ಮಾತ್ರವೇನು? ಬದುಕಿದಷ್ಟು ದಿನವೂ ಸಂಪಾದಿಸಬೇಕು, ಸಂಪಾದಿಸಬೇಕು, ಎನ್ನುತ್ತಾನಲ್ಲ! ಅದೇಕೆ ಸಂಪಾದನೆ? ಈಗ ರಮೇಶನದು ಭಾರಿಯ ಸಂಪಾದನೆಯಿತ್ತು. ಈಗಲೂ ಅವನ ಇನ್‌ಷ್ಯೂರೆನ್ಸ್ ಒಂದು ಲಕ್ಷ ಬರುತ್ತದೆ. ಅವನು ಹೋದನಲ್ಲ, ಅವನ

ಸುದ್ದಿ ಇರಲಿ. ಈಗ ಅವನ ಹೆಂಡತಿಮಕ್ಕಳಿಗೆ ಅಲ್ಲೊಂದು ಲಕ್ಷ ಹೋಯಿತು; ಇಲ್ಲೊಂದು ಲಕ್ಷ ಬಂತು. ಹಾಗೆಂದು ಅವನಿಲ್ಲದಿದ್ದರೆ ಹೋಗಲಿ ಎಂದಿದ್ದಾರೆ? ಅವರೇಕೆ ಅವನಿಗಾಗಿ ಬಡಿದುಕೊಳ್ಳಬೇಕು?

"ಆಯಿತು ಅವನೇನಾದ? ಆ ಯೋಚನೆ ನಮಗೇನಾದರೂ ಇದೆಯೆ? ಸತ್ತವನು ಎತ್ತ ಹೋದನೆಂಬ ಯೋಚನೆಯೇ ನಮಗೆ ಬರುವುದಿಲ್ಲ. ಅಥವಾ ಬಂದು ತಾನೇ ಏನು ಮಾಡುವುದು? ಜೀವ, ಲೋಕಗಳು, ಪಾಪ, ಪುಣ್ಯ, ಎಲ್ಲಾ ಕೇಳಿದ್ದೇವೆ. ನಮಗೆ ಅರ್ಥವಾಗಿದೆಯೇ? ಏನೋ ಕನಸಿನ ಅನುಭವದಂತೆ ಮಸಕು ಮಸಕಾದ ಈ ಮಾತುಗಳ ಮೇಲೆ ನಮ್ಮ ಈಗಿನ ಬುದ್ಧಿ ನಂಬಿಕೆಯಿಟ್ಟುಕೊಂಡಿದೆಯೆ? ನಮ್ಮ ಜೀವನದಲ್ಲಿ ಈ ಮಾತುಗಳೂ ಈಗ ಬರುವಂತಿಲ್ಲವಲ್ಲ? ನಮ್ಮ ನಿತ್ಯ ಜೀವನದಲ್ಲಿ ಇವಕ್ಕೆ ಸ್ಥಾನ ಕೊಟ್ಟಿದ್ದೇವೇನು? ಉಹುಂ, ಇದ್ದಂತಿಲ್ಲ. ನಮ್ಮ ಕಣ್ಣು ಕಾಣುವುದು ಈ ಲೋಕವನ್ನು. ನಮ್ಮ ಮನಸ್ಸು ಚಿಂತಿಸುವುದು ಈ ಲೋಕವನ್ನು. 'ಇಲ್ಲಿಂದಾಚೆಗೆ ನಮಗೆ ಬೇಕಿಲ್ಲ; ನಮ್ಮ ಮನಸ್ಸು ಹೋಗುವುದಿಲ್ಲ. ಹೋಗುವುದಿಲ್ಲ ಏನು ಹೋಗಲಾರದು.

"ಹಾಗೆಂದು ಬಿಟ್ಟಿರುವುದೇನು? ನೋಡಿದೆಯೋ ಇಲ್ಲವೋ? ಕಾಫಿತೋಟದ ಅನುಭವ ಇಷ್ಟು ಬೇಗ ಮರೆತುಹೋಯಿತೆ? ನಮ್ಮ ತಂದೆಯ ಪಾಪ ನನಗೂ ವಕ್ರಿಸಿತ್ತು; ನನ್ನನ್ನು ಬಲಿ ತೆಗೆದುಕೊಳ್ಳುವುದರಲ್ಲಿತ್ತು; ಅಷ್ಟರಲ್ಲಿ ನಮ್ಮ ತಾಯಿಯ ಪುಣ್ಯ ಕಾಪಾಡಿತು ಎಂದು ಕಣ್ಣಾರ ಕಾಣಲಿಲ್ಲವೇ? ಹಾಗಾದರೆ ಈಗ ರಮೇಶನನ್ನು ಕೊಂದ ಪಾಪ ಯಾವುದು? ಮೋಹನೆ, ವೀಣೆಯರನ್ನು ಉಳಿಸಿದ ಪುಣ್ಯ ಯಾವುದು?"

ಹೀಗೆ ಅಗೋಚರವಾದ ಭಾವಗಳು ಬಂದು ಪ್ರಾಣೇಶನನ್ನು ಬೆಲ್ಲಕ್ಕೆ ಮುತ್ತುವ ಇರುವೆಗಳಂತೆ ಮುತ್ತಿಬಿಡುವುವು. ಆ ಯೋಚನೆಯಲ್ಲಿ ಅವನು ಮುಳುಗುವನು. "ಇನ್ನು ಒಂದು ಸಲ ಆ ಸನ್ಯಾಸಿಗಳನ್ನು ಕಂಡರೆ, ಅವರ ಬಳಿ ಇದೆಲ್ಲ ಕೇಳಬೇಕು" ಎಂದುಕೊಳ್ಳುವನು

ಹೀಗೆ ರಮೇಶನ ಯೋಚನೆಯೇ ಯೋಚನೆಯಾಗಿದ್ದ ಪ್ರಾಣೇಶ

ನಿಗೆ ಅವನಿಗೆ ಗೊತ್ತಿಲ್ಲದೆಯೇ ಮನಸ್ಸು ಮೋಹನೆಯ ಕಡೆಗೆ ಹೊರಳು ವುದು. "ಮೋಹನೆಗೆ ಒಳ್ಳೆಯ ವಯಸ್ಸು. ಪಾಪ, ಹೀಗಾದಳು. ಅವಳು ಹಿಂದಿನವರಂತೆ ಸನ್ಯಾಸಿಯ ಹಾಗೆ ಇರುವುದು ಸಾಧ್ಯವೆ? ಭೋಗಪರಾಯಣನಾದ ಗಂಡನಿಗೆ ಮೋಹದ ಮಡದಿಯಾಗಿ ಸೂಳೆಗಿಂತ ಹೆಚ್ಚಾಗಿದ್ದಳು. ಇಂದು ಥಟ್ಟನೆ ಎಲ್ಲವನ್ನೂ ಬಿಟ್ಟು ವೈರಾಗ್ಯಸಂಪನ್ನ ಳಾಗಿ ಮೂಲೆಯಲ್ಲಿ ಕುಳಿತಿರಲು ಸಾಧ್ಯವೆ? ರೂಪವಿದೆ; ಯೌವನವಿದೆ; ಹಣವಿದೆ. ಇಂತಹ ಹೆಣ್ಣು ಸುಮ್ಮನಿರುವುದು ಎಂದರೆ ಒಪ್ಪುವ ಮಾತೆ? ಬೀದಿಯಲ್ಲಿ ಹೋಗುವ ಹೆಣ್ಣುನಾಯಿಯನ್ನಾದರೂ ನಾಯಿಗಳು ಬಿಟ್ಟಾವು, ರಕ್ಷಣವಿಲ್ಲದೆ, ನೀನೇ ಎನ್ನುವರಿಲ್ಲದೆ, ಒಂಟಿಯಾಗಿ ಇರುವ ರೂಪ ಐಶ್ವರ್ಯಸಂಪನ್ನೆಯನ್ನು ಲೋಕವು ಬಿಟ್ಟೀತೆ? ಯಾವನಾದರೊಬ್ಬ ಹಾರಿಸಲು ಬಂದೇ ಬರುವನು. ಹಾಗೇನಾದರೂ ಆದರೆ? ಮೋಹನೆಯು ತಿಪ್ಪೆಗೆ ಬಿದ್ದ ಹಣ್ಣಿನಂತೆ ಭಿಕಾರಿಗಳ ಪಾಲಾಗುವಳು. ಆಗ ತಾನು ಅದನ್ನು ಸಹಿಸುವುದೆಂತು?

"ಹಾಗಾದರೆ ಏನು ಮಾಡಬೇಕು? ತಾನೂ ರಮೇಶನೂ ಏಕ ಜೀವವೆನ್ನುವಂತೆ ಇದ್ದುದು ನಿಜ. ಹಾಗೆಂದು ಈಗ ತಾನೇ ಬೇಲಿ ಯಾಗಿ ನಿಲ್ಲುವುದೇ? ಲೋಕವೇನೆಂದೀತು? ಲೋಕಕ್ಕೆ ಹೆದರಿದರೆ ಮೋಹನೆಯ ಗತಿಯೇನು? ಒಂದು ವೇಳೆ ತಾನೇ ಕೈಗೆ ಹಾಕಿಕೊಂಡರೆ? ಅವಳನ್ನು ಕದ್ದಹಾಗೆ ಆಗುವುದು. ಈಗಿರುವ ಹೆಂಡಿತಿಯ ಜೊತೆಗೆ ಇನ್ನೊಬ್ಬಳನ್ನು ಮಾಡಿಕೊಳ್ಳುವ ಹಾಗಿಲ್ಲ. ಸರಕಾರ ತಾನು ಸೆಕ್ಯುಲರ್ ಅಂತು. ಯಾರಿಗೋಸ್ಕರಲೋ ಬೈಗಮಿ ಆಕ್ಟ್ ತಂತು. ಆದರೆ ಮಹಮ್ಮದೀಯರಿಗೆ ಮಾತ್ರ ಇದು ಅನ್ವಯಿಸುವುದಿಲ್ಲ ಅಂತು. ಅಲ್ಲಿ ಗೇನು ಹಿಂದೂ ಆಗಿದ್ದರೆ ಕೂಡದು; ಮಹಮ್ಮದೀಯನಾದರೆ ಆಗ ಬಹುದು ಅಂತಲೋ? ನಾನೇ ಏಕೆ ಎರಡನೆಯ ಮದುವೆ ಮಾಡಿಕೊಂಡು ಹೊಡೆದಾಡಬಾರದು?

"ಊಹುಂ. ನಾನು ಅಷ್ಟು ಧೀರನಲ್ಲ. ಒಂದು ವೇಳೆ ರಮೇಶ ಮಾಡಿದ್ದರೂ ಮಾಡಬಹುದಾಗಿತ್ತು. ನನ್ನಿಂದ ಸಾಧ್ಯವಿಲ್ಲ. ಹಾಗೆಂದು

ಸುಮ್ಮನಿರುವುದು ತಾನೇ ಹೇಗೆ? ನನ್ನ ಸ್ನೇಹಿತ, ನನ್ನ ಪ್ರಾಣಕ್ಕೆ ಪ್ರಾಣವಾಗಿದ್ದವನ ಹೆಂಡತಿ ನಾಯಿ ಮುಟ್ಟಿದ ಮಡಿಕೆಯಾಗುವುದನ್ನು ನೋಡಿಕೊಂಡಿರಲೆ? ವೀಣಾ ಕಾಡುಪಾಲಾಗಲು ಅವಕಾಶ ಕೊಡಲಿ? ಕೊಡದು. ಆಗದು; ಆಗುವುದಿಲ್ಲ.

"ಹಾಗಾದರೇನು ಮಾಡಬೇಕು? ಮಾಡುವುದೇನು? ಗೊತ್ತೇ ಇದೆ. ವೀಣಾ ಯೋಗಕ್ಷೇಮಕ್ಕೋಸ್ಕರ ತಾನು ಮೋಹನೆಯ ಯೋಗಕ್ಷೇಮವನ್ನು ವಹಿಸಲೇಬೇಕು.

"ಅನರ್ಥವಾದರೆ?

"ಈಗಲಿಂದ ಅದೇ ಯೋಚನೆಯೇ ಯಾಕೆ? ಮದುವೆಗೆ ಬಂದವರು ಅನರ್ಥವಾದರೆ ಅವಲಕ್ಕಿ ಮೊಸರಿಗಾದರೂ ಅನುಕೂಲವಿರಲಿ ಎಂದ ಹಾಗೆ, ಈಗಿನಿಂದ ಅನರ್ಥ ಅನರ್ಥ ಎಂದು ಹೆದರಿ ಒದ್ದಾಡಲೇಕೆ? ನಾನು ಲಾಯರ್. ಸಮಯಕ್ಕೆ ಸರಿಯಾಗಿ ಏನೋ ಒಂದು ಮಾಡಿ ಅಭ್ಯಾಸವಿಲ್ಲವೆ? ನೋಡಿಕೊಳ್ಳೋಣ."

* * * *

ತಂದೆಯನ್ನು ಕಳೆದುಕೊಂಡ ವೀಣಾ ಪ್ರಾಣೇಶನಿಗೆ ಬಹಳ ಒಗ್ಗಿಹೋದಳು. ಮಾವ, ಮಾವ ಎಂದು ಅವಕಾಶವಿದ್ದಾಗಲೆಲ್ಲ ಸಾಕಿದ ನಾಯಿಮರಿಯಂತೆ ಅವನ ಹಿಂದೆ ಓಡಾಡುವಳು. ಮೊದಲಿನಿಂದ ಗಂಡುಸರ ಜೊತೆಯಲ್ಲಿ ಬೆಳೆದ ಮಗು, ತಾತ ಇಲ್ಲದಿದ್ದರೆ ತಂದೆ. ಅವಳಿಗೆ ತಾಯಿಯ ಹತ್ತಿರ ಬಹಳ ಹೊತ್ತು ಇರುವುದು ಸಾಧ್ಯವಿಲ್ಲ. ಏನು ಮಾಡಬೇಕು?

ಅಂತೂ ವೀಣಾ, ಮಾವ ಮಾವ ಎನ್ನುತ್ತಿದ್ದ ಹಾಗೆಲ್ಲ ಪ್ರಾಣೇಶನಿಗೆ "ಅದು ನಿಜವೇ ಆಗಬಾರದೇಕೆ?" ಎನ್ನಿಸುವುದು. "ಏನಾದರೂ ಮಾಡಿ ಈ ಹೆಣ್ಣು ಮಾಡಿಕೊಂಡರೆ ಒಂದೂವರೆ ಎರಡು ಲಕ್ಷ ರೂಪಾ

ಯನ ಆಸ್ತಿ ಸಿಕ್ಕುವುದು. ಬಿಡುವುದಿಲ್ಲ, ಮಾಡಿಕೊಳ್ಳಬೇಕು” ಎಂದು ಒಂದು ಮನಸ್ಸು.

“ಆದರೆ ವೀಣಾ ಕೊಂಚ ಗಂಡುಬೀರಿಯ ಜಾತಿಯವಳು. ಗಂಡ ಸೇನಾದರೂ ‘ಪ್ಯಾಲಪಿಂಡಿ’ಯಾದರೆ, ಗೂಡೆಯಲ್ಲಿಟ್ಟು ಮಾರುವವಳು. ಮಗ ಮೆತ್ತನೆಯ ಜಾತಿಯೇ ಹೊರತು, ‘ಗಂಡು’ ಅನ್ನಿಸಿಕೊಳ್ಳುವ ದಿಟ್ಟ ಜಾತಿಯಲ್ಲ. ಏನು ಮಾಡುವುದು ?”

ಆಗಲೂ ಪ್ರಾಣೇಶನಿಗೆ “ಆ ಸಮಯ ಬರಲಿ. ಅದುವರೆಗೇನು ಅವಸರ?” ಎಂಬುದೇ ಶರಣು. “ಆಗಲಿ, ನೋಡಿಕೊಳ್ಳೋಣ” ಅವನಿಗೆ ಅಭ್ಯಾಸವಾಗಿಹೋಗಿತ್ತು.

* * * * *

ರಮೇಶನ ಸಂಸಾರ ಯತ್ನವಿಲ್ಲದೆ ಪ್ರಾಣೇಶನಿಗೆ ಗಂಟು ಬಿತ್ತು. ಅವನ ಆಫೀಸೂ ತಾನೇ ವಹಿಸಿಕೊಂಡಂತೆ, ಅವನ ಸಂಸಾರದ ಯೋಗಕ್ಷೇಮವನ್ನು ನೋಡಿಕೊಳ್ಳುವ ಭಾರವನ್ನೂ ವಹಿಸಿಕೊಳ್ಳಬೇಕಾಗಿ ಬಂತು. ಸರ್ವವಿಧದಲ್ಲೂ ಸಂಸಾರ ಭಾರವನ್ನು ಸಂಪೂರ್ಣವಾಗಿ ವಹಿಸಿಕೊಳ್ಳದಿದ್ದರೆ ಆಗುವುದಿಲ್ಲ. ಅದೂ ಒಂದು ದಿನ ಆಗಬೇಕಾಗುತ್ತೆ ಎಂದು ಅವನಿಗೆ ಗೊತ್ತು. ಅದನ್ನು ಅವನು ಬೇಡವೆನ್ನುವುದಕ್ಕೂ ಸಿದ್ಧನಾಗಿರಲಿಲ್ಲ: ಒಪ್ಪಿಕೊಳ್ಳುವುದಕ್ಕೂ ಸಿದ್ಧನಾಗಿರಲಿಲ್ಲ.

* * * *

ಕನ್ಯಾಮಂದಿರದ ವಿಚಾರ ಇತ್ಯರ್ಥವಾಗಬೇಕಾಯಿತು. ಸರ್ಕಾರದಲ್ಲಿ ಐವತ್ತು ಸಾವಿರ ರೂಪಾಯಿ ಕಟ್ಟಿಯಾಗಿದೆ; ಬಸವನಗುಡಿಯಲ್ಲಿ ಒಂದು ಮನೆಯನ್ನೂ ಅದಕ್ಕಾಗಿ ಬಿಟ್ಟುಕೊಡಲಾಗಿದೆ. ಆದರಿನ್ನೂ ಆರಂಭವಾಗಿಲ್ಲ.

ಪ್ರಾಣೇಶನು ಆ ವಿಚಾರವಾಗಿ ಮೊದಲು ಮೋಹನೆಯ ಬಳಿ ಮಾತನಾಡಿ ಅವಳ ಮನಸ್ಸು ತಿಳಿದುಕೊಂಡು ಅನಂತರ ಇತರ ಮೆಂಬರುಗಳ ಬಳಿ ಮಾತನಾಡುವುದು ಎಂದುಕೊಂಡನು. ರಮೇಶನಿಗಾದ ದುರಂತ ಮರಣ ಎಲ್ಲರ ಮನಸ್ಸನ್ನೂ ಕಲಕಿಬಿಟ್ಟಿತ್ತು. ಯಾರಿಗೂ ಕನ್ಯಾಮಂದಿರದ ವಿಚಾರ ಎತ್ತುವುದಕ್ಕೆ ಮನಸ್ಸಿಲ್ಲ.

ಕೊನೆಗೆ ಪ್ರಾಣೇಶನೇ ಒಂದು ದಿನ ಆ ವಿಚಾರ ಪ್ರಸ್ತಾಪ ಮಾಡಿದನು. ಮೋಹನೆಯು "ಮಾವನವರ ಹೆಸರು ಉಳಿಯಲೆಂದು ಯಜಮಾನರು ಮಾಡಿದ ಧರ್ಮ. ಅದಕ್ಕೆ ನಾನು ಅಡ್ಡಿ ಬರುವುದಿಲ್ಲ. ಇನ್ಷ್ಯೂರೆನ್ಸ್ ಹಣ, ಬಂಗಲೆ ಬಾಡಿಗೆಗಳಿಂದ ಹೇಗೋ ನಮ್ಮ ಜೀವನವಾಗುತ್ತದೆ. ಇಷ್ಟಕ್ಕೂ ಎಷ್ಟು ಜನ? ನಾನು ವೀಣಾ, ಇಬ್ಬರು ತಾನೇ? ನಾನೇ ಅಡಿಗೆ ಮಾಡಿಕೊಂಡರೆ ಆಯಿತು. ನನಗೆ ಒಬ್ಬ ಹೆಣ್ಣಾಳು ಇದ್ದರೆ ಸಾಕು. ನೀವು ದೊಡ್ಡ ಮನಸ್ಸು ಮಾಡಿ ಆಗಾಗ ವಿಚಾರಿಸಿಕೊಳ್ಳುತ್ತೀರಿ. ನಮ್ಮ ವೀಣಾಗೆ ಆಗಲೆ ಆರು ವರ್ಷವಾಯಿತು. ಇನ್ನೊಂದು ಎಂಟು ಹತ್ತು ವರುಷ. ಅವಳನ್ನು ಒಬ್ಬ ಒಳ್ಳೆಯವನ ಕೈಯಲ್ಲಿಟ್ಟು ಮನೆಯನ್ನೂ ವಹಿಸಿಕೊಟ್ಟರೆ ನನ್ನ ಕಾರ್ಯ ಮುಗಿಯಿತು. ಇದಕ್ಕಾಗಿ ಕನ್ಯಾಮಂದಿರ ನಿಲ್ಲುವುದೇಕೆ? ಏನೂ ಬೇಡ. ನಿಲ್ಲಿಸ ಬೇಡಿ" ಎಂದಳು.

ಮೋಹನೆಯು ಸಮಾಜದ ಮೇಲಿನ ಅಂತಸ್ತಿನಲ್ಲಿ ಓಡಾಡಿದ ಹೆಣ್ಣು, ವಿದ್ಯಾವಂತಳಲ್ಲದಿದ್ದರೂ ವ್ಯವಹಾರದಿಂದ ವಿನಯವನ್ನು ಕಲಿತಿದ್ದವಳು. ಸಾಣೆ ಪಡೆದ ವಜ್ರದಂತೆ ತನ್ನ ಒಳಗಿದ್ದ ಪ್ರಕಾಶವನ್ನು ಹರಡಿ ಕಣ್ಣು ಕೋರೈಸುವ ಜಾತಿಯಲ್ಲ ಅವಳು. ಆದರೂ ನೀರಿನಲ್ಲಿ ಬಹು ದಿನದಿಂದ ಇದ್ದು ಪ್ರವಾಹದ ಬಲದಿಂದ ನುಣ್ಣಗಾಗಿರುವ ಬೆಣಚುಕಲ್ಲಿನಂತೆ ಒಂದಿಷ್ಟು ವ್ಯವಹಾರ ಚಾತುರ್ಯವನ್ನು ಸಂಪಾದಿಸಿ ಕೊಂಡು ಹತ್ತು ಜನರಲ್ಲಿ ಮಾತನಾಡಬಲ್ಲವಳಾಗಿದ್ದಳು. ಮಹಿಳಾ ಸಮಾಜದ ಮೆಂಬರು. ಅದೂ ದುಡಿಯುವ ಮೆಂಬರಾಗಿದ್ದವಳು. ಅವಳು ಹೀಗೆ ಹೇಳಿದ್ದರಲ್ಲಿ ಪ್ರಾಣೇಶನಿಗೆ ವಿಚಿತ್ರವೆನಿಸಲಿಲ್ಲ.

ಆ ಮಾತುಕತೆ ನಡೆದು ಇತ್ಯರ್ಥವಾಗುವುದಕ್ಕೆ ಸುಮಾರು ಒಂದು ಗಂಟೆಯಾಯಿತು. ಅಷ್ಟು ಹೊತ್ತೂ ಪ್ರಾಣೇಶನು ಎದುರಿಗೆ ಕುಳಿತು ಅವಳ ಮೊಕ ನೋಡಿ, ಅವಳೊಡನೆ ಮಾತಿಗೆ ಮಾತು ಆಡುತ್ತ ಕುಳಿತಿದ್ದನು. ಅವನಿಗೆ ಒಂದು ಸಂದೇಹ. ಗಂಡನು ಹೋಗಿ ಇನ್ನೂ ಒಂದೂವರೆ ತಿಂಗಳು. ಈಗಾಗಲೇ ಇವಳು ಆ ದುಃಖವನ್ನು ಮರೆತು ಬಿಟ್ಟಳೆ? ತನಗೆ ಬಂದಿರುವ ಮುಂಡೆತನದ ಭಾರ, ದುಃಖ ಇವಳಿಗೆ ಅರಿವಾಗಿದೆಯೆ? ಅರಿವಾಗಿದ್ದರೆ ಇವಳು ಇಷ್ಟು ಹಗುರವಾಗಿ, ದುಗುಡ ವಿಲ್ಲದೆ, ಮಾತನಾಡಲು ಸಾಧ್ಯವೆ? ಅವಳು ಎಂದಿನಂತೆ ಮಾತನಾಡು ತ್ತಿದ್ದಾಳಲ್ಲ? ಏನೂ ಆಗದಿರುವಂತೆ ಮಾತನಾಡುತ್ತಿದ್ದಾಳಲ್ಲ? ಹಾಗಾದರೆ ಇವಳಿಗೆ ಗಂಡನ ಮೇಲೆ ವಿಶ್ವಾಸವಿರಲಿಲ್ಲವೆ? ಅಥವಾ ಹೊಸ ಬಾಳಿಗೆ ಇಷ್ಟು ಬೇಗ ಒಗ್ಗಿಕೊಂಡಿದ್ದಾಳೆಯೇ?" ಎಂದು ಏನೇನೋ ಯೋಚನೆ.

ಮೋಹನೆಗೆ ತನ್ನ ಮೋಹಕ ಸೌಂದರ್ಯವನ್ನು ಮೆರೆದು ಮೆರೆದು ಅಭ್ಯಾಸ. ಇಂದು ಸಾಮಾನ್ಯವಾದ ಒಂದು ಸಿಲ್ಕ್ ಸೀರೆ ಯನ್ನು ಉಟ್ಟಿದ್ದಾಳೆ. ತೊಟ್ಟಿರುವ ಆ ಜಂಪರ್ ರವಕೆ ಒಳಗಿರುವ ಬಾಡಿಯು ಎದೆಯನ್ನು ಮುಂದಕ್ಕೆ ಚಾಚಿ ಒಂದು ವಿಚಿತ್ರವಾದ ರಮ್ಯತೆಯನ್ನು ಕೊಟ್ಟಿದೆ. ಕುಂಕುಮವಿಲ್ಲದಿರುವುದೂ ಆ ಬಿಳಿಯ ಮುಖದ ಬಿಳುಪನ್ನು ಇನ್ನು ಅಷ್ಟು ಹೆಚ್ಚು ಮಾಡಿ ಒಪ್ಪವಿಕ್ಕಿದ ಬೆಳ್ಳಿಯಂತೆ ಮಾಡಿದೆ. ಏನೋ ತಿರಸ್ಕಾರದಿಂದ ಅಷ್ಟಾಗಿ ಬಾಚಿ ಕೊಳ್ಳದೆ ಇರುವುದರಿಂದ ಕೊಂಚ ಕೊಂಚ ಕೆದರಿರುವ ಕೂದಲು ನೋಡುವವನ ಮನಸ್ಸನ್ನೂ ಕೆದರುವಂತಿದೆ. ಆ ಕಣ್ಣ ನೋಟದಲ್ಲಿ ಏನೋ ಒಂದು ಮಾಧುರ್ಯವಿದ್ದು, ಪಕ್ವವಾಗಿ ರಸಪೂರ್ಣವಾದ ಹಣ್ಣು ಮನೋಹರವಾಗಿರುವಂತೆ ಇದೆ. ನುಡಿಯುವಾಗ ನುಡಿಗನು ಗುಣವಾಗಿ ವ್ಯಾಪಾರ ಮಾಡುವ ಕೈಗಳೂ ದುಂಡುದುಂಡಾಗಿ, ಆ ರತ್ನದ ಬಳೆಗಳ ಕಾಂತಿಯನ್ನೂ ಒಳಗೈಯ ಹೊಳಪನ್ನೂ ತೋರುತ್ತ ಕಣ್ಣ ಕೋರೈಸುತ್ತವೆ. ಆ ಎತ್ತರವಾಗಿ ದುಂಡಾದ

ಕತ್ತು ತಲೆಯ ಭಾರಕ್ಕೆ ಬಳುಕುತ್ತ ಏನೋ ವೈಯಾರವಾಡುವಂತಿದೆ. ಮುಗ್ಗುಲಲ್ಲಿ ಇರುವ ಮಗಳನ್ನು ತಬ್ಬಿಕೊಳ್ಳುವಾಗ, ಅವಳ ತಲೆಯನ್ನು ಸವರುವಾಗ, ತಾನೂ ಅಂತಹ ಉಪಚಾರಗಳನ್ನು ಬಯಸುತ್ತಿರುವಳೋ ಎಂಬಂತಿದೆ.

ರಮೇಶನು ಇದ್ದಾಗ ಪ್ರಾಣೇಶನು ಈ ರಮಣೀಮಣಿಯನ್ನು ನೋಡದೆ ಇರಲಿಲ್ಲ. ಆಗಲೂ ಅವನಿಗೆ ಅವಳ ರಮಣೀಯತೆ ಮನಸ್ಸಿಗೆ ಹಿಡಿಯದೆ ಇರಲಿಲ್ಲ. ಆದರೂ ಆಗ ಅವನ ಮನಸ್ಸು ತಿಳಿಯಾಗಿತ್ತು. ಮಾರ್ಗಶಿರ ಮಾಸದ ನದಿಯ ಜಲದಂತೆ ಪ್ರಸನ್ನವಾಗಿ, ಆ ಗಂಡಹೆಂಡಿರ ಆನಂದದಲ್ಲಿ ತಾನೂ ಭಾಗಿಯಾಗುತ್ತಿತ್ತು. ಆದರೆ ಆ ತಿಳಿತನವಿಂದು ಇದ್ದಂತಿಲ್ಲ. ಅಂದು ಮದರಾಸಿನಲ್ಲಿ ರಮೇಶನು ಮರಣಶಯ್ಯೆಯಲ್ಲಿ ಮಲಗಿದ್ದಾಗ ಬಹು ದುಃಖದಿಂದ ಸೊರಗಿ ಮೋಹನೆಯು ಬಿದ್ದುಹೋಗುವುದರಲ್ಲಿದ್ದಳು. ಆಗ ಹಠಾತ್ತಾಗಿ ಮುಂದೆ ಹೋಗಿ ಅವಳನ್ನು ಹಿಡಿದುಕೊಂಡು ಸೋಫಾದ ಮೇಲೆ ಕೂರಿಸಿದ್ದನು. ಆಗ ಅವನಿಗೆ ವಿದ್ಯುತ್ತಿನ ಛಾರ್ಜು ಇರುವ ಬ್ಯಾಟರಿಯನ್ನು ಮುಟ್ಟಿದಂತೆ, ದೇಹಾದ್ಯಂತವೂ ಒಂದು ಝೋಕು ಹೊಡೆದಿತ್ತು. ಅದನ್ನು ಅವನು ಮರೆಯುವುದಕ್ಕೆ ಬಹಳ ಪ್ರಯತ್ನ ಪಟ್ಟಿದ್ದರೂ ಸಾಧ್ಯವಾಗಿರಲಿಲ್ಲ. ಈಗಂತೂ ಅಡ್ಡಿಯಿಲ್ಲದಿರುವಾಗ, ತನ್ನ ದೇಹವನ್ನು ಹಿಡಿದು ಅಲ್ಲಾಡಿಸಿದ ಆ ವಿದ್ಯುತ್ತನ್ನು ಇನ್ನೊಮ್ಮೆ ಅನುಭವಿಸಬೇಕೆಂದು ಮನಸ್ಸು ಹಂಬಲಿಸಿದರೆ, ಆ ಹಂಬಲವನ್ನು ತುಳಿಯಬೇಕು ತುಳಿಯಬೇಕು ಎನ್ನುತ್ತ ಎನ್ನುತ್ತಲೇ ಪ್ರಾಣೇಶನು ಅದಕ್ಕೆ ಒಂದೊಂದು ಡಿಗ್ರಿಯಾಗಿ ಸೋಲುತ್ತಿದ್ದರೆ ವಿಶೇಷವೇನು?

ಮೋಹನೆಯೂ ಅವನನ್ನು ಆದಷ್ಟು ಬೇಗ ಕಳುಹಿಸೋಣ ಎನ್ನುವ ಭಾವದಲ್ಲಿ ಇದ್ದಂತೆ ಇರಲಿಲ್ಲ. ಹರಟೆ ಹೊಡೆದು ಅಭ್ಯಾಸವಾಗಿ ಹೋಗಿದೆ. ತನ್ನ ಅಭಾವದ ದುಃಖವನ್ನು, ನಿವಾರಿಸಿಕೊಳ್ಳಲು ಒಂದು ಅವಲಂಬನವನ್ನು ಅಪೇಕ್ಷಿಸುವವಳಂತೆ, ವೈಧವ್ಯದ ಭಾರವನ್ನು ಇಳುಹಲು ಪರಸಹಾಯವನ್ನು ಬಯಸುವಳಂತೆ, ಆದಷ್ಟು ಮಾತು

ವಿಲಂಬ ಮಾಡಲು ಪ್ರಯತ್ನ ಮಾಡುತ್ತಿರುವಂತೆ ಪ್ರಾಣೇಶನಿಗೆ ತೋರು ತ್ತಿದೆ. ಪ್ರಾಣೇಶನಿಗೆ ಮೋಹನೆಯ ಜೊತೆಯಲ್ಲಿ ಕುಳಿತು ಹರಟೆ ಹೊಡೆಯುವುದು ಹೊಸದಲ್ಲವಾದರೂ ಇವೊತ್ತು ಏಕೋ ಸಂಕೋಚ. ಪ್ರಯತ್ನಪಟ್ಟು ಆ ಸಂಕೋಚವನ್ನು ತುಳಿದು ಇನ್ನೂ ಅಷ್ಟು ಹೊತ್ತು ಹರಟೆ ಹೊಡೆಯಲು ಕುಳಿತಿರಬೇಕು ಎನ್ನಿಸುತ್ತಿದೆ.

"ಸಮಾಜಕ್ಕೆ ಹೋಗಿದ್ದಿರಾ ?"

"ಯಾವ ಮೊಕ ಇಟ್ಟುಕೊಂಡು ಹೋಗಲಿ ? ನಮ್ಮ ಪ್ರೆಸಿಡೆಂಟರೂ ಸೆಕ್ರೆಟರಿ ಬಂದಿದ್ದರು. ನೀವು ಬರದಿದ್ದರೆ ಸಮಾಜದಲ್ಲಿ ಲೈಫೇ ಇಲ್ಲ. ಬನ್ನಿ. ಎಷ್ಟು ದಿವಸ ಹೀಗೆ ಇರುತ್ತೀರಿ! ಹತ್ತು ಜನದಲ್ಲಿ ಸೇರಿ ದುಃಖ ಮರೆಯಬೇಕು ಎಂದರು. ನನಗೂ ಹಾಗೇ ಎನ್ನಿಸುತ್ತದೆ. ನುಂಗಿದ ತುತ್ತು ರುಚಿ ಹಂಬಲಿಸುತ್ತಾ ಕುಳಿತೇನು ಮಾಡುವುದು ? ಬದುಕಿರು ವವರೆಗೂ, ಇನ್ನು ಎಷ್ಟು ದಿನ ಬದುಕಬೇಕೋ, ಏನೂ ಮಾಡದೆ ಸುಮ್ಮನೆ ಕುಳಿತಿರುವುದು ಯಾವ ನ್ಯಾಯ ? ಎನ್ನಿಸುತ್ತದೆ. ಆದರೂ ಜನರ ಬಾಯಿಗೆ ಅಂಜಬೇಕಲ್ಲ? ನಮ್ಮ ಅನ್ನ ತಿಂದು, ನಮ್ಮ ಬಟ್ಟೆ ಉಟ್ಟರೂ ನೋಡೋರ ಕಣ್ಣಿಗೆ ನಾಣ್ಯವಾಗಿರಬೇಕಲ್ಲ? ಅದರಿಂದ ಸುಮ್ಮನೆ ಇರಬೇಕು. ಇನ್ನು ಒಂದು ತಿಂಗಳು ಎಲ್ಲೂ ಹೋಗೋಲ್ಲ ಅಂತಿದ್ದೀನಿ. ಅಲ್ಲದೆ, ಸಮಾಜದವರಿಗೂ ಮೋಹನೆ ಎಷ್ಟು ದುಡೀತಾಳೆ, ಅವಳು ಇಲ್ಲ ದಿದ್ದರೆ ತಮ್ಮ ಸಮಾಜಕ್ಕೆ ಗತಿಯಿಲ್ಲ ಎನ್ನುವುದು ಗೊತ್ತಾಗಲಿ ಅಂತ ಈ ಸಮಯದಲ್ಲಿ ಒಳಗೇ ಸೇರಿಕೊಂಡಿದ್ದೇನೆ."

"ನೀವು ಅಷ್ಟು ಬಿಜಿಯಾಗಿದ್ದೋರು ಈಗ ಹೀಗೆ ಐಡಲ್ ಆಗಿ ಕುಳಿತಿರೋದು ನನಗೆ ಆಶ್ಚರ್ಯವಾಗಿದೆ."

"ಅಯ್ಯೋ, ಆ ಬೇಜಾರು ಏಕೆ ಹೇಳುತ್ತೀರಿ ? ಅವರು ಇದ್ದಾಗ ಒಂದು ಗಳಿಗೆ ರೆಸ್ಟ್ ಸಿಕ್ಕುವುದು ಕಷ್ಟವಾಗಿತ್ತು. ಮನೆಗೆ ಬಂದರು ಅಂದರೆ, ಗಳಿಗೆಗೊಂದು ಸಲವಾದರೂ ಮೋಹನ, ಮೋಹನ, ಅಂತಿರ ಬೇಕು. ಯಾವುದಾದರೂ ಒಂದು ನೆಪಮಾಡಿಕೊಂಡು ಮಾತನಾಡಿಸು

ತ್ತಿರಬೇಕು. ಈಗ ಹೇಗಿದೆ ಗೊತ್ತೆ? ನಾನು ಕೂತಿದ್ದರೆ, ಆಗಾಗ ಅವರು ಕೂಗಿದ ಹಾಗಾಗಿ ತಲೆ ತಿರುಗಿನೋಡುತ್ತೆ. ಅವರು ಬಂದರು ಅನ್ನುವ ಹಾಗಾಗಿ ತಟ್ಟನೆ ಏಳುವ ಹಾಗಾಗುತ್ತೆ, ಕಣ್ಣು ಮುಚ್ಚಿದರೆ ಆ ರೂಪವೇ? ಅವರು ಮಾತನಾಡಿದ ದನಿ ಇನ್ನೂ ಕಿವಿ ಕೇಳುತ್ತಲೇ ಇದೆ. ಏಕೆ? ಕಾಣಿರಾ? ನನ್ನ ದೇಹ ಎಷ್ಟು ಸೊರಗುತ್ತಿದೆ?

"ಏನೋ ನಿಮಗೆ ಬರಬಾರದ ಕಷ್ಟ ಬಂತು."

"ನಿಜ. ಕಷ್ಟವೇನೋ ಬಂದಿದೆ. ಆದರೆ ಇನ್ನೊಂದು ಮಾತು. ಅದೇನೋ? ಗಂಡಕಳೆದುಕೊಂಡವರನ್ನು ಕಂಡಕಂಡಾಗಲೆಲ್ಲ, ನನಗೂ ಹೀಗಾದರೋ ಅನ್ನಿಸುತ್ತಿತ್ತು, ಆಗ ಏನೇನೋ ಅಂದುಕೊಳ್ಳುತ್ತಿದ್ದೆ. ಕೊನೆಗೆ ಆಗಿಯೂ ಹೋಯಿತು. ಈಗ ಅದೆಲ್ಲ ನೆನೆಸಿಕೊಂಡರೆ ಮೈ ಜುಮ್ಮೆನ್ನುತ್ತೆ?"

"ಅದೇನು ಅಂದುಕೊಳ್ಳುತ್ತಿದ್ದಿರಿ ಹಾಗಾದರೆ?"

"ಈಗ ಬೇಡಿ. ಇನ್ನು ಯಾವಾಗಲಾದರೂ ಹೇಳುತ್ತೇನೆ. ಒಂದು ಮಾತು. ನೀವು ನಮ್ಮ ಯಜಮಾನರ ಆಪ್ತ ಸ್ನೇಹಿತರು, ಅವರನ್ನು ಬಾ, ಹೋಗು, ಎನ್ನುತ್ತಿದ್ದವರು. ನನ್ನನ್ನೂ ಇನ್ನು ಮೇಲೆ ಬಾ ಹೋಗು ಎಂದೇ ಮಾತನಾಡಿಸಿ."

ಪ್ರಾಣೇಶನಿಗೆ ಆ ಮಾತು ಕೇಳಿ ಸಂತೋಷವೂ ಆಯಿತು : ನಾಚಿಕೆಯೂ ಆಯಿತು. "ಇವಳೇನಾದರೂ ತನ್ನ ಮನಸ್ಸು ಅರಿತು ಹೀಗೆ ಹೇಳುತ್ತಿದ್ದಾಳೋ?" ಎಂದು ಸಂಶಯವೂ ಬಂತು. ಏನು ಮಾತನಾಡಬೇಕೋ ತಿಳಿಯದೆ ಅವನು ಸಂಕೋಚಪಡುತ್ತಿದ್ದ ಹಾಗೆಯೇ ವೀಣಾ ಥಟ್ಟನೆ ಮಾತನಾಡಿ ಅವನಿಗೆ ನೆರವಾದಳು: "ಹಾಗೆಂದರೆ, ಏನಮ್ಮಾ, ನಿನ್ನ ಮಾವ ಮೋಹನಾ ಎನ್ನಬೇಕೋ ಮೋಹನ ಬಾಯಿ ಅನ್ನಬೇಕೊ?" ಎಂದು ಕೇಳಿದಳು.

ಮೋಹನೆಯು ನಕ್ಕು "ಬಾಯಿ ಅಂದರೆ ಕೊಂಬು ಬಂದದ್ದೇನು?" ಎಂದಳು. ಎಲ್ಲರೂ ನಕ್ಕರು.

* * * *

ಪ್ರಾಣೇಶನು ಸಾಮಾನ್ಯವಾಗಿ ಭಾನುವಾರ ಮನೆಗೆ ಅಷ್ಟು ಬೇಗ ಬರುವ ವಾಡಿಕೆಯಿಲ್ಲ. ಅದರಿಂದ ಅವನ ಹೆಂಡಿತಿ ಇನ್ನೂ ದೇವರ ಮನೆಯಲ್ಲಿಯೇ ಇದ್ದಳು. ಪ್ರಾಣೇಶನು ಮನೆಗೆ ಬರುತ್ತಿದ್ದ ಹಾಗೇ ಹೆಂಡಿತಿಯ ದರ್ಶನವಾಗಬೇಕು. ಅವಳು ಬಂದು ಒಂದು ಸಲ ಮೊಕ ತೋರಿಸಬೇಕು. ಇಲ್ಲದಿದ್ದರೆ ಅವನಿಗೆ ಏನೋ ಗಂಟು ಹೋದಂತೆ ಭಾಸವಾಗುವುದು. ಹೆಂಡಿತಿಗೂ ಅದು ಇಷ್ಟವಲ್ಲದ ಕೆಲಸವಲ್ಲ. ಏನೇ ಕೆಲಸವಿರಲಿ ಬಿಟ್ಟು ಬಂದು ಗಂಡನ ಮೊಕವನ್ನು ನೋಡಿಕೊಂಡು ಹೋಗದಿದ್ದರೆ ಅವಳಿಗೂ ಆಗುತ್ತಿರಲಿಲ್ಲ.

ಈ ದಿನ ದೇವರ ಮನೆಯಲ್ಲಿದ್ದ ಯಜಮಾನಿತಿ ಬರುವುದು ಕೊಂಚ ತಡವಾಯಿತು. ಅವನು ಅಂಗಿಗಿಂಗಿ ಬಿಚ್ಚಿ ಹಾಗೆಯೇ ಈಜಿ ಛೇರ್ ಮೇಲೆ ಹಾಗೆ ಬಿದ್ದುಕೊಂಡಿದ್ದಾನೆ. ಮೋಹನೆಯ ಮಾತು ಕಿವಿಯಲ್ಲಿ ಇನ್ನೂ ಗುಂಯ್‌ಗುಟ್ಟುತ್ತಾ ಇದೆ. ಅವಳೇ ಬಂದು ಮಗ್ಗುಲಲ್ಲಿ ಕುಳಿತಿದ್ದಾಳೆ ಎನ್ನುವಂತಿದೆ. ಆ ಸುಖಸ್ವಪ್ನ ಮನಸ್ಸಿಗಲ್ಲದೆ ದೇಹಕ್ಕೂ ಅಷ್ಟು ಸುಖವನ್ನು ಕೊಟ್ಟಿದೆ. ಮುಖವು ಕೊಂಚ ಅಡಕೆಲೆ ಮೇದಾಗ ಆಗುವ ಹಾಗೆ ಸಣ್ಣ ಕೆಂಪೇರಿದೆ. ಧ್ಯಾನದಲ್ಲಿ ಕಣ್ಣುಮುಚ್ಚಿದೆ.

ಅವನು ಅಷ್ಟು ಹೊತ್ತು ಹಾಗಿರುವಾಗ ಯಜಮಾನಿಯು ತೀರ್ಥ ಪ್ರಸಾದ ತಂದಳು. ಗಂಡನು ಕಣ್ಣುಮುಚ್ಚಿರುವುದೂ ಮುಖವು ಕೆಂಪಗಿರುವುದೂ ನೋಡಿ ಅವಳಿಗೆ ಏನೇನೋ ಅನ್ನಿಸಿತು. ಆದರೂ ಮನಸ್ಸು ನುಡಿಯಬೇಕೆಂದುಕೊಂಡುದನ್ನು ಬಾಯಿ ನುಡಿಯಲು ಅವಕಾಶಕೊಡದೆ ಹಾಗೆಯೇ ತಡೆದುಕೊಂಡು, ಸಣ್ಣಗೆ, "ನಿದ್ದೆಯೇನು ?" ಎಂದಳು.

ಅವನ ಮನಸ್ಸು ನಿದ್ದೆಯ ಹಾದಿ ಹಿಡಿದಿತ್ತು; ಮಾತಿನ ಸದ್ದು ಕೇಳಿ ಕಣ್ಣು ಹಠಾತ್ತಾಗಿ ತೆರೆಯಿತು. ಯಾವುದೋ ಹೆಣ್ಣಿನ ಧ್ಯಾನದಲ್ಲಿದ್ದ ಮನಸ್ಸು ಈಗ ಕಣ್ಣೆದುರಿಗೆ ಇನ್ನೊಂದು ಹೆಣ್ಣು ಬಂದು ನಿಂತಿರುವುದನ್ನು ಕಂಡರೂ ಅದರಿಂದ ಅಸಂತುಷ್ಟವಾಗದೆ ಅವಳ ಸೊಬಗನ್ನು ನೋಡಿತು. ಆ ಸೊಬಗನ್ನು ಸವಿಯಲು ಸಿದ್ಧವಾಯಿತು. ಮುಖ ನಕ್ಕು

ಮನಸ್ಸಿನ ಭಾವವನ್ನು ಸೂಚಿಸಿತು. ಕಣ್ಣು ಬಾಗಿಲು ಹಾಕು ಎಂದು ಸೂಚಿಸಿತು. ಅವಳಿಗೂ ಅದು ಬೇಡ ಎನ್ನುವಂತಿರಲಿಲ್ಲವಾದರೂ "ತೀರ್ಥ ಪ್ರಸಾದ ತಂದಿದ್ದೀನಿ" ಎಂದಳು.

"ನೀನು ಭಕ್ತಿಯಿಂದ ಪೂಜೆಮಾಡಿಸಿ, ಮಾಡಿ, ತಂದಿರುವ ತೀರ್ಥ ಪ್ರಸಾದ. ನನಗೆ ಅದೂ ಬೇಕು. ತಂದವರೂ ಬೇಕು. ಅದರಿಂದ ಬಾಗಿಲು ಹಾಕು, ಅಂದೆ."

ತೀರ್ಥಪ್ರಸಾದದ ತಟ್ಟೆ ಸಣ್ಣ ಮೇಜಿನಮೇಲೆ ಕುಳಿತಿತು. ಬಾಗಿಲು ಮುಚ್ಚಿತು. ಗಂಡು ಥಟ್ಟನೆದ್ದು ಹೆಣ್ಣನ್ನು ಬಾಚಿ ತಬ್ಬಿಕೊಂಡು ದೃಢವಾಗಿ ಚುಂಬಿಸಿತು. ಹೆಣ್ಣು ಆ ಉಪಚಾರವನ್ನು ಒಪ್ಪಿಸಿಕೊಂಡು ಕಪಟ ಕೋಪವನ್ನು ಬೀರುತ್ತ, "ನಾನು ಮಡಿಯಲ್ಲಿದ್ದೆ" ಎಂದು ಏನೋ ಗಂಟು ಕಳೆದುಕೊಂಡಂತೆ ಗೊಣಗಿತು.

"ಇವೊತ್ತು ನಾವೂ ಏನೋ ಮೈಲಿಗೆಯಾಗೋ ಕೆಲಸ ಮಾಡಿಲ್ಲ. ಅದರಿಂದಲೇ ತಮಗೆ ಈ ಉಪಚಾರ."

ಹೆಣ್ಣು ನಾಚಿ ಗಂಡಿನ ತೆಕ್ಕೆಯಲ್ಲಿ ಅಡಗಿತು.

"ನಾನು ಹಾಗೇ ಹೊರಟುಹೋಗಬೇಕಾಗಿತ್ತು. ಏನೋ ತೀರ್ಥ ಪ್ರಸಾದ ಕೊಡೋಣ ಅಂದುಕೊಂಡರೆ, ಹೀಗೆ ಮಾಡಿದಿರಿ?"

"ಈಗೇನು ಗಂಟು ಹೋದ್ದು ?"

"ಸಮಯ ಸಂದರ್ಭ ಬೇಡವೆ ?"

"ಸರಕಾರ ಇನ್ನೂ ಲೈಸೆನ್ಸ್ ತಕ್ಕೊಳ್ಳಿ ಅಂದಿಲ್ಲ; ವರ್ಕಿಂಗ್ ಅವರ್ಸ್ ಗೊತ್ತು ಮಾಡಿಲ್ಲ. ಇರಲಿ. ಇವೊತ್ತು ಅದೇನು ವಿಶೇಷ ಪ್ರಸಾದದಲ್ಲಿ ?"

"ನೀವು ಏನೂ ಅಂದುಕೊಳ್ಳೊಲ್ಲ ಅಂದರೆ ಹೇಳುತ್ತೀನಿ."

"ಅಂದುಕೊಳ್ಳುತೀನಿ. ಹೇಳು."

"ಅಲ್ಲಿಗೆ ನೀವೂ ನಮ್ಮ ಗ್ರೇಡಿಗೇ ಬಂದಹಾಗಾಯ್ತು."

"ಹಾಗಂದರೆ ?"

"ನೀವು ಮಾಡೋ ಎಷ್ಟೋ ಕೆಲಸ ನೋಡಿ ನನಗೆ ಹೇಗೆ ಹೇಗೋ ಆಗುತ್ತೆ. ಮನಸ್ಸಿನಲ್ಲಿ ಏನೇನೋ ಅಂದುಕೊಳ್ಳುತೀವಿ. ಆದರೂ ನಿಮ್ಮ ತಾಳಕ್ಕೆ ಕುಣೀಲೇ ಕುಣೀತೀವಿ. ಹಾಗೇ ನೀವೂ ಮಾಡತೀರೇನು ?"

"ಏನೋ ಪಾಪ! ನಿನಗೆ ಕಡಿಮೆಯಾಗಿರೋದು ? ನೀನು ನನ್ನ ಬಯ್ಯೋಂಥಾದ್ದು ಏನು ಮಹಾ ಮಾಡಿರೋದು ?"

"ಅಯ್ಯೋ ಏನಾದರೂ ಮಾಡಿದ್ದೀರಾ ?"

"ಏನು ನೀನು ಹಾರಾಡೋದು ಆ ಮೇರಿದೊಂದಕ್ಕೆ. ಅದರಿಂದ ನಿನಗಾಗಿರೋ ನಷ್ಟವಾದರೂ ಏನು? ಹೋಟೆಲ್ ತಿಂಡಿ ತಿಂದೇ ಬರುತೀನಿ ನಿಜ. ಹಾಗಂತ ಮನೆ ಊಟ ಏನೂ ಬಿಟ್ಟಿಲ್ಲವಲ್ಲ?"

"ಅದಕ್ಕೇ ಇವೊತ್ತು ವಿಶೇಷ ಪೂಜೆ ಮಾಡಿಸಿದ್ದು ಮಾಡಿದ್ದು ?"

"ಏನು ಮೇರಿ ಜೊತೆಗೆ ನನ್ನ ಗಂಡನಿಗೆ ಇನ್ನೊಂದು ಮಾರಿ ಗಂಟು ಬೀಳಲಿ ಅಂತಲೇನು ?"

"ಇನ್ನೊಂದು ಬರೋ ಯೋಗಯಿದ್ದರೆ ತಪ್ಪಿಸೋರು ಯಾರು? ಆದರೆ ಅದು ಮಾರಿ ಆಗದೇ ಇರಲಿ, ಅಂತ."

ಗಂಡು ತನ್ನ ಹಿಡಿತವನ್ನು ಇನ್ನೂ ಅಷ್ಟು ದೃಢ ಮಾಡಿ ಮುತ್ತು ಕೊಟ್ಟು ಇನ್ನೂ ಸ್ವಲ್ಪ ಆರಾಧಿಸಿ, "ನೀನು ಯಾವಾಗಲೂ ಒಗಟು ಬಿಟ್ಟು ಮಾತೇ ಆಡುವುದಿಲ್ಲವಲ್ಲ?" ಎಂದಿತು.

"ಕಾಫಿ ತೋಟದ ವಿಚಾರವೇ ಮರೆತಿರೇನು ?"

"ಅದಕ್ಕೂ ಇದಕ್ಕೂ ಏನು ಸಂಬಂಧ ?"

"ನಿಮ್ಮಿಬ್ಬರಿಗೂ ಅವರು ದೇವರ ಪೂಜೆ ಮಾಡಿಸಿ ಅಂತ ಹೇಳಿದ್ದರು ಎಂದಿರಿ ಅಲ್ಲವೆ?"

"ಹೌದು ?"

"ನೀವು ಮಾಡುತ್ತಾ ಇದ್ದೀರಲ್ಲಾ ?"

"ಮಂಜುನಾಥನಿಗೆ ಪೂಜೆ ಒಪ್ಪಿಸಿದ ರಮೇಶನ ಗತಿ ಏನಾಯ್ತು ?"

"ಏನೋ ನಿಮ್ಮ ಗಂಡುಸರ ಸೊಟ್ಟ ಬುದ್ಧಿ ನಮಗೆ ಅರ್ಥವಾಗೋಲ್ಲ. ಅವರ ಮನೆಯಲ್ಲಿ ಆದಹಾಗೆ ನಮ್ಮ ಮನೆಯಲ್ಲೂ ಆಗದಿರಲಿ ಅಂತ ದೇವರಿಗಷ್ಟು ವಿಶೇಷ ಪೂಜೆ ಮಾಡಿಸಿದೆ, ಮಾಡಿದೆ, ಅದು ಇವೊತ್ತಿಗೆ ಮುಗಿಯಿತು."

"ನನಗೆ ಹೇಳಲೇ ಇಲ್ಲ?"

"ನನ್ನ ಹತ್ತಿರ ದುಡ್ಡು ಕಾಸೂ ಇರದಿದ್ದರೆ, ನಿಮ್ಮನ್ನು ಕೇಳಬೇಕಾಗಿದ್ದರೆ, ಹೇಳಬೇಕಾಗಿತ್ತು. ಅಲ್ಲದೆ, ಇದೆಲ್ಲ ನನ್ನ ಸ್ವಂತ ತಾನೇ ?"

"ಹಾಗಂದರೆ ?"

"ಏನೋ ಅಲ್ಲಿಗೇ ಬಿಡಿ."

"ಇಲ್ಲ. ಹೇಳಲೇಬೇಕು."

"ನೀವು ಸಾವಿರ ಹೇಳಿ ನನಗೆ ದಿಗಿಲು. ನಿಮಗೇನಾದರೂ ಕೆಟ್ಟದ್ದಾದರೆ ನಾನು ಮೋಹನಾಬಾಯಿ ಹಾಗೆ ಬದುಕಿರೊಲ್ಲ. ಅದಕ್ಕಾಗಿ, ಏನಾದರೂ ಕೆಟ್ಟದ್ದು ಆಗುವುದಿದ್ದರೆ ಅದು ನನಗಾಗಲಿ, ಅವರಿಗೆ ಏನೂ ಆಗಕೂಡದು ಅಂತ ಹರಕೆ ಹೊತ್ತೆ! ಆ ಹರಕೆ ದೇವರು ಒಪ್ಪಿಕೊಂಡಿದೆ ಅನ್ನುವುದೂ ಮನಸ್ಸಿಗೆ ಬಂತು."

"ಅದು ಹೇಗೆ?"

"ತೀರ್ಥ ಪ್ರಸಾದ ತಂದರೆ ಈ ದೇವರೂ ತನ್ನ ಅನುಗ್ರಹ ತೋರಿಸಿತಲ್ಲ. ಅದರರ್ಥ ಏನು ?"

"ನೀನೇನು ಏಸುಕ್ರಿಸ್ತನಾಗಿಬಿಟ್ಟೆಯೋ? ಹಾಗಾದರೆ ನಿನ್ನ ಮಗನ ಬುದ್ಧಿ ಅಷ್ಟು ತೀವ್ರವಾಗೋ ಹಾಗೆ ಏನಾದರೂ ಮಾತು."

"ಮಗನ ಮಾತು ಬೇರೆ. ಗಂಡನ ಮಾತು ಬೇರೆ. ನನ್ನ ತಾಳೀ ಭಾಗ್ಯ ಉಳಿಸಿಕೊಳ್ಳೋ ಯತ್ನ ನಂದು."

"ಹಾಗಾದರೆ ಯಾವ ಕಂಪೆನೀಲಿ ಇನ್ಷ್ಯೂರ್ ಮಾಡಿದೆ?"

"ನಿಮ್ಮ ತಮಾಷೆ ಬಿಡಿ. ಬಾಬರ್ ಮಾತ್ರ ಮಗನ್ನ ಉಳಿಸಿಕೊಳ್ಳೋಕೆ ಆಯ್ತು. ನನಗೆ ನನ್ನ ಗಂಡನ್ನ ಉಳಿಸಿಕೊಳ್ಳೋಕೆ ಆಗೋದಿಲ್ವೋ?"

"ಹಾಗಾದರೆ ನನಗೂ ಏನಾದರೂ ಆಪತ್ತು ಬಂದಿತ್ತೇನು?"

"ಬರುತ್ತೆ ಅನ್ನೋ ಭಯ ಬಂದಿತ್ತು. ಅದರ ನಿವಾರಣೆಗೆ ಯತ್ನ ಮಾಡಿದೆ."

"ಏನು ಮಾಡಿದೆ?"

ಹೆಣ್ಣು ಜಪ್ಪಯ್ಯ ಅಂದರೂ ಹೇಳಲೊಲ್ಲದು; ಗಂಡು ಬಿಡಲೊಲ್ಲದು. ಕೊನೆಗೆ ಗಂಡು ಹೇಳಿಸಿತು: "ನಿಮಗೆ ಏನಾದರೂ ಕೆಟ್ಟದ್ದು ಆಗುವುದಿದ್ದರೆ ಅದು ನನಗಾಗಬೇಕು. ನಾನು ಇರುವ ವರೆಗೂ ನನ್ನ ಕಣ್ಣು ಮುಂದೆ ನಿಮಗೆ ತಲೆ ಕೂದಲೂ ಚುಳ್ಳೆನ್ನಬಾರದು."

ಆ ಮಾತನ್ನು ಕೇಳಿ ಅವನು ಅವಾಕ್ಕಾಗಿ ಹೋದನು. ತಾನು ಅವಳ ವಿಷಯದಲ್ಲಿ ತಪ್ಪಿ ನಡೆದಿರುವುದು ಅವಳಿಗೂ ಗೊತ್ತು ಆದರೂ ಅವಳ ಅಭಿಮಾನ ಇಷ್ಟೆ? ಅದಕ್ಕೆ ತಾನು ಯೋಗ್ಯನೇ? ಎನ್ನಿಸಿ ಕಣ್ಣು ಒದ್ದೆಯಾಯಿತು. ಶಿಥಿಲವಾಗಿದ್ದ ಬಂಧನವನ್ನು ಬಿಗಿಯುತ್ತ "ಏನು ಮಾಡಲೇ? ಎಷ್ಟು ಒದ್ದಾಡಿದರೂ ನನ್ನ ಎಂಜಲು ಬುದ್ಧಿ ಬಿಡೊಲ್ಲವಲ್ಲೇ?" ಎಂದು ಬಲವಾಗಿ ಕಚ್ಚಿದನು.

"ಇಕೋ! ಇದಕ್ಕೆ ಪ್ರಾರಬ್ಧ ಅನ್ನೋದು. ಹೀಗೆ ಕೆನ್ನೆ ಮೇಲೆ

ಮುದ್ರೆ ಒತ್ತಿಬಿಟ್ಟಿರಿ. ನಾನು ಹೊರಗೆ ಹೋಗೋದು ಹೇಗೆ? ಎಲ್ಲರೂ ನೋಡಿ ನಗೋಲ್ಲವೆ?"

"ಆನೆ ನೀರಾಟದೊಳು ಮೀನ ಕಂಡಂಜುವುದೇ? ಅಂದ ಸರ್ವಜ್ಞ. ಹೋಗಲಿ, ಬೇಡ ಅನ್ನು; ಬಿಟ್ಟುಬಿಡುತ್ತೇನೆ."

"ಹೂ. ಅಂತಾರೆ! ಕಾಯಿಕೊಂಡಿರಿ."

"ಇದು ಡೈವೋರ್ಸ್ ಕಾಲ! ದೇವರು!"

"ಅದು ನಮಗೆ ಅಪ್ಲೈ ಆಗೊಲ್ಲ ಸಾರ್!"

ಇಬ್ಬರೂ ಊಟಕ್ಕೆದ್ದಾಗ ಸುಮಾರು ಮೂರು ಗಂಟೆಯಾಗಿತ್ತು. ಅಡುಗೆಯವಳು ಚಿಕ್ಕ ಯಜಮಾನರಿಗೆ ಬಡಿಸಿ ತಾನೂ ಊಟ ಮಾಡಿ ಅಡುಗೆಯೆಲ್ಲಾ ಮುಚ್ಚಿಟ್ಟು ಹೊರಟುಹೋಗಿದ್ದಳು.

ಗಂಡ ಊಟ ಮಾಡುತ್ತಾ "ನಿನ್ನ ಮೊಕ ನೋಡಿಕೊಂಡೆ ಯೇನು?" ಎಂದು ನಗುನಗುತ್ತಾ ಕೇಳಿದನು. ಮಡದಿಯೂ ಗೊಣಗಿ ಕೊಂಡಳು. "ಇವೊತ್ತೇ ಮೊದಲಾಗಿದ್ದರೆ ಏನೋ ಅಂದುಕೋಬೇಕಾ ಗಿತ್ತು. ಮುಖ್ಯ ನಿಮ್ಮ ಕೈಗೆ ಸಿಕ್ಕಿದರೆ ಅವೊತ್ತು ಹೊರಗೆ ಎಲ್ಲೂ ಹೋಗುವಹಾಗಿಲ್ಲ. ಇವೊತ್ತು ಸಮಾಜಕ್ಕೆ ಹೋಗಬೇಕಾಗಿತ್ತು. ಅಲ್ಲೊಂದು ಲೆಕ್ಚರ್. ಇನ್ನೇನು ಸಮಾಜಗಿಮಾಜ ಎಲ್ಲಾ ಮನೆಯೇ ಅನ್ನೋಹಾಗಿದೆ. ಹೋಗಲಿ ಬಿಡಿ."

"ಪೂಜೆ ಮಾಡಿಕೊಂಡು, ಮಾಡಿಸಿಕೊಂಡು, ಸುಖವಾಗಿರೋದು ಅಂತಲೋ?"

"ಏನು ಮಾಡಲಿ? ನೀವು ಮಾಡಿದ ಹಾಗೆ ನಾನೂ ಮಾಡಿ ಒಂದು ಉಂಡಿಗೆ ಹಾಕಿದರೆ ಅವೊತ್ತು ರಾಯರಿಗೆ ತಿಳಿದೀತು ಆ ಸೌಖ್ಯ! ಮುಖ್ಯ ನನ್ನ ಕೈಯಲ್ಲಾಗೋಲ್ಲ. ಆ ಮೇರಿಗಾದರೂ ಹೇಳಿಕಳುಹಿಸುತ್ತೇನೆ. ತಡೆಯಿರಿ."

"ಏಕೆ?"

"ಒಂದು ಮುಂದಿಗೆ ಒತ್ತು ಮಾಹರಾಯಿತಿ ಅಂತ. ಆ ಗಂಡು ಬೀರಿಯಿಂದ ಅದಾವರೂ ಒಂದು ಉಪಕಾರ ಆಗಲಿ."

"ಅವಳನ್ನು ಬಿಟ್ಟರೆ ನಿನಗೆ ಸಂತೋಷವಾಗುವಹಾಗಿದ್ದರೆ ಹೇಳು ಬಿಟ್ಟುಬಿಡುತ್ತೇನೆ."

"ಅವಳನ್ನು ಬಿಟ್ಟೀರಿ. ಆದರೆ ಆ ಬುದ್ಧಿ ಬಿಟ್ಟೀರಾ? ಅದು ಹೋದರೆ ಇನ್ನೊಂದು ವಕ್ರಿಸುತ್ತೆ. ಅದೆಲ್ಲಾ ನನಗೇಕೆ? ಎಲೆ ಎತ್ತೋ ಗುಂಡಾ ಅಂದ್ರೆ ಉಂಡೋರೆಷ್ಟು ಮಂದಿ ಅಂದಹಾಗೆ! ನಾವು ತೂಬಿನೋರು! ಕೋಡಿ ಯೋಚನೆ ನಮಗಿಲ್ಲಾ!"

"ನೀನು ಲಾಯರಾಗಿದ್ದರೆ, ನಾನು ನಿಜವಾಗಿ ಪಲ್ಟಿ ಹೊಡೀತಿದ್ದೆ ಕಾಣೆ."

"ನೀವು ಲಾಯರಾಗಿರೋಲ್ಲ ಅಂತ ಅವರು ಹೇಳಿದ್ದಾರಲ್ಲ. ಅದರಿಂದ ನೀವೇನೂ ಪಲ್ಟಿ ಹೊಡೆಯೋಹಾಗಿಲ್ಲ."

ಅಷ್ಟರಲ್ಲಿ ಮಗ ಬಂದು "ನರಸಿಂಹಯ್ಯನೋರು ಬಂದಿದ್ದಾರೆ." ಅಂದುಹೋದ. "ಕೂತುಕೊಳ್ಳಿ ಅನ್ನು" ಎಂದು ಪ್ರಾಣೇಶನೂ ಎದ್ದುಹೋದ. ಇನ್ನೊಂದು ಗಳಿಗೆ ಹೆಂಡಿತಿ ಜೊತೆಯಲ್ಲಿ ಹರಟೆ ನಡೆಯಬಾರದಾಗಿತ್ತೇ ಎಂದು ಮನಸ್ಸು ಎಲ್ಲೋ ಕೊಂಚ ನೊಂದಿತ್ತು.

ನರಸಿಂಹಯ್ಯ ಸೋಫಾದ ಮೇಲೆ ಕುಳಿತಿದ್ದ. ಪ್ರಾಣೇಶನಿಗೆ ಅವನ ಮೇಲೆ ಅಭಿಮಾನ. ಅವನೂ ಮನೆಯ ಜನದಲ್ಲಿ ಒಂದು ಅನ್ನುವ ಭಾವನೆಯೇ ಹೊರತು ಅವನು ಗುಮಾಸ್ತೆ ತಾನು ಲಾಯರು ಎನ್ನುವ ಭಾವ ಕಿಂಚಿತ್ತೂ ಇಲ್ಲ. ಅದರಲ್ಲೂ ರಮೇಶನಿಗೆ ಆತ ಸೇವೆ ಮಾಡಿದ್ದು ನೋಡಿ ಆತನ ಮೇಲಿನ ಗೌರವ ಬೇಕಾದ ಹಾಗೆ ಬೆಳೆದು ಹೋಗಿತ್ತು.

"ಕಾರ್ ತಕೊಳ್ಳೋಕೆ ಬಂದಿದ್ದಾರೆ. ಅಮ್ಮಾಅವರು ತಮಗೆ ತಿಳಿಸಿಬಿಟ್ಟು ಬನ್ನಿ ಅಂದರು."

"ಎಷ್ಟೂಂತ ?"

"ಹದಿನಾಲ್ಕೂವರೆ"

"ನಾವು ಕೊಟ್ಟದ್ದು ಹದಿನೆಂಟಲ್ವೆ ?"

"ಹೌದು"

"ನಟೇಶ್ ಬಂದುಬಿಡಲಿ. ಇವೊತ್ತೋ ನಾಳೆಯೋ ಬರುತ್ತಾನೆ."

"ಆಗಬಹುದು. ಹಾಗಂತ ಅವರಿಗೆ ಹೇಳ್ತೀನೆ."

"ಯಾರು ಕೊನೆಗೆ ?"

"ಜೀವಣ್ಣನವರೇ ತೆಗೆದುಕೊಳ್ಳುತ್ತಾರೆ. ಇನ್ನೊಂದು ಸಮಾಚಾರ ಕೇಳಿದೆ."

"ಅವರ ಕಂಪೆನಿಗೆ ನೀವೇ ಅಂತೆ ಛೇರ್ಮನ್."

"ನೋಡಿ. ನರಸಿಂಹಯ್ಯ, ಅದನ್ನು ಒಪ್ಪಿಕೊಂಡರೆ ಪ್ರಾಕ್ಟೀಸ್ ಮಾಡುವುದಕ್ಕೆ ಆಗುತ್ತದೆಯೋ ಇಲ್ಲವೋ ಅಂತ ಸಂದೇಹ. ಆದರಿಂದ ಹಿಂತೆಗೀತಾ ಇದೇನೆ ಅಷ್ಟೆ!"

"ಕೈತುಂಬಾ ರೆಮ್ಯೂನರೇಷನ್ ಬಂದರೆ ಏಕೆ ಒಪ್ಪಿಕೋ ಬಾರದು ?"

"ರೆಮ್ಯೂನರೇಷನ್ ಚೆನ್ನಾಗಿದೆ. ತಿಂಗಳಿಗೆ ೧೨೦೦ ರೂ. ೨೦೦ ಕಾರ್ ಅಲೋಯನ್ಸ್, ೧೦೦ ಪರ್ಸನಲ್ ಅಲೋಯನ್ಸ್. ಇದರ ಮೇಲೆ ಎಲ್ಲರಿಗೂ ಬರುವಂತೆ ನಮಗೂ ಬೋನಸ್. ಎಲ್ಲಾ ಉಂಟು. ಆದರೂ"

"ನನ್ನ ಮಾತು ಕೇಳಿ ಸ್ವಾಮಿ. ಅಕ್ಸೆಪ್ಟ್ ಮಾಡಿಕೊಳ್ಳಿ."

"ನೀವು ನನ್ನ ಅಸಿಸ್ಟೆಂಟ್ ಆಗಿ ಬರುತ್ತೀರೋ ?"

"ನಿಮಗೆ ಗ್ರಾಜುಯೇಟ್ ಬೇಕೇನೋ ?"

"ಬರೆಯೋಕೆ ಬರದಿದ್ದ ಗ್ರಾಜುಯೇಟ್‌ಗಿಂತ ಕೆಲಸ ತಿಳಿದಿರೋ ನಾನ್ ಗ್ರಾಜುಯೇಟ್ ಉತ್ತಮ ಅಲ್ಲವೆ ?"

"ನಾನೂ ಯೋಚನೆಮಾಡಿ ಹೇಳ್ತೀನೆ ಸ್ವಾಮಿ"

"ತಿಂಗಳಿಗೆ ೨೫೦ ಸಂಬಳ. ೭೫ ಅಲೋಯರ್ನ್ಸ್. ಬೋನಸ್. ಏಕರೀ ಒಪ್ಪಬಾರದು."

"ನಮ್ಮ ಶ್ರೀನಿವಾಸ ಈಗ ವಿಚಿತ್ರವಾಗಿದ್ದಾನೆ. ಅವನ್ನ ಒಂದು ಮಾತು ಕೇಳಿ ಹೇಳುತ್ತೇನೆ."

"ವಿಚಿತ್ರ ಅಂದರೆ ಹೇಗೆ?"

ಆಗಾಗ ಅವನಿಗೆ ಮೈಮೇಲೆ ಜ್ಞಾನ ತಪ್ಪಿ ಹೋಗುತ್ತೆ. ಆಗ ಆ ಸ್ವಾಮಿಗಳು ಮಾತಾಡಿದ ಹಾಗೇ ಮಾತನಾಡುತ್ತಾನೆ. ಮೊನ್ನೆ ಪ್ರೊಫೆಸರಿಗೆ ತಗಲಿಬಿಟ್ಟಿದ್ದ. ಇನ್ನೊಂದು ದಿನ ನಾನು ರುದ್ರ ಹೇಳಿ ಅಭಿಷೇಕ ಮಾಡುತ್ತಿದ್ದರೆ, ಏನು ನರಸಿಂಹಯ್ಯ ನೀನೂ ಹೀಗೆ ಮಾಡು ತ್ತಿದ್ದೀಯಾ? ಮಂತ್ರ ಹೇಳುವಾಗ ಭಾವ **ಇರಬೇಡವೆ**? ಎಂದ. ನಾನು ಹಿಂತಿರುಗಿ ನೋಡಿದರೆ, ಪದ್ಮಾಸನ ಹಾಕಿಕೊಂಡು ಕೂತಿದ್ದಾನೆ. ಆ ಸ್ವಾಮಿಗಳ ಹಾಗೇ! ನನಗೆ ವಿಚಿತ್ರ ಅನ್ನಿಸಿ, ಹೇಗೆ ಅಪ್ಪಣೆಯಾಗಲಿ ಎಂದೆ. ನೋಡಿ, ದೊಡ್ಡವರು ಯಾರಾದರೂ ಬಂದರೆ ಮೈಕೈಯೆಲ್ಲ ಕಣ್ಣಾಗಿರುತ್ತೀರೋ ಇಲ್ಲವೋ? ಅದೇ ಭಾವ ಮಹಾದೇವನ ಸನ್ನಿಧಿ ಯಲ್ಲಿ ಇರಬೇಡವೇ? ಎಂದ. ತಿರುಗಿನೋಡಿದೆ. ನನಗೆ ಅರ್ಥವಾಗಲಿಲ್ಲ. "ಆ ಎದುರಿಗೆ ಇರುವದು ಏನು ಅಂತ ಭಾವಿಸಿದ್ದೀರಿ?" ಅಂದ. "ಶಿವಲಿಂಗ" ಅಂದೆ. "ಶಿವನಸ್ವರೂಪವೇನು? ನೋಡಿ. ಶಿವ ಎಂದರೆ ಮಂಗಳನಲ್ಲವೇ? ಮಂಗಳವೇ ಮೂರ್ತಿಯಾಗಿ ಬಂದರೆ ನೀವು ಎಲ್ಲೋ ಏನೋ ನೋಡಿಕೊಂಡು ಇರುತ್ತೀರಾ? "ನಾ ರುದ್ರೋ ರುದ್ರಪೂಜಕಃ" ನೀವೂ ಶಿವನಾಗಿ ಎದುರಿಗೆ ಲಿಂಗವನ್ನೂ ಶಿವಮಯವಾಗಿ ನೋಡುತ್ತ ಪೂಜೆಮಾಡಿ ಎಂದು ಎದ್ದು ಹೊರಟುಹೋದ. ಈಗ ಅದನ್ನು ನಾನು ಅಭ್ಯಾಸಮಾಡುತ್ತಿದ್ದೇನೆ.

"ಮೊನ್ನೆಯ ದಿವಸ ಅವಳು ಕೈತುತ್ತು ಹಾಕುತ್ತಿದ್ದರೆ, 'ತಿಂದನ್ನ'

ವೆಲ್ಲ ಅನೃತವಾಗಬೇಕಮ್ಮಾ! ಅದು ಹೇಗೆ ಹೇಳಕೊಡುತೀಯಾ?" ಅಂದ. ಹೀಗೇ ಅವನೇಕೋ ವಿಚಿತ್ರವಾಗುತ್ತಿದ್ದಾನೆ."

"ಪ್ರೊಫೆಸರ್‌ಗೇನೋ ಚಕ್ಕರ್ ಕೊಟ್ಟ ಅಂದರಲ್ಲ! ಅದೇನು?"

"ಈ ಸಲ ಅವನಿಗೆ ಎಸ್. ಎಸ್. ಎಲ್. ಸಿ. ಫಸ್ಟ್‌ಕ್ಲಾಸ್‌ನಲ್ಲಿ ಆಗತ್ತೆ ಅನ್ನೋ ನಂಬಿಕೆ ಇದೆ. ಮುಂದೆ ಕಾಲೇಜು ಸೇರುವಾಗ ಹೋಗಿ ಹೇಳೋಕಿಂತ ಈಗಲೇ ಹೋಗಿ ನೋಡಿರೋಣ ಅಂತ ಅವನ್ನೂ ಕರೆದುಕೊಂಡು ಹೋದೆ. ಶತಾನಂದಂ ಬಲ್ಲರಲ್ಲ! ಅವರು ಅದೂ ಇದೂ ಮಾತನಾಡುತ್ತ ಫಿಲಾಸಫಿ ತೆಗೆದರು. ಇವನು ತಾನೇನೋ ಮಹಾ ಬಲ್ಲವನ ಹಾಗೆ ಏನು ಪ್ರೊಫೆಸರ್‍ರೆ! ಮಾತು ಎಲ್ಲಿಂದ ಬರುತ್ತೆ ಏಕೆ ಬರುತ್ತೆ ಕೊಂಚ ಹೇಳುತ್ತೀರಾ? ಅಂದ. ಅವರಿದ್ದವರು ಒಂದು ದೊಡ್ಡ ಪುಸ್ತಕ ತೋರಿಸಿ, ನೀನು ಕೇಳೋ ಪ್ರಶ್ನೆಗೆ ಅದರಲ್ಲಿ ಉತ್ತರ ಅಂದರು. ಅದನ್ನು ನನಗೆ ಕೊಡಿ ಓದಿಕೊಂಡು ಬರುತ್ತೇನೆ ಅಂತ ತಂದಿದ್ದಾನೆ. ನಾನು ಗದರಿಸಿಕೊಳ್ಳೋಕೆ ಹೋದೆ. ಶತಾನಂದಂ, ನೋನೋ, ಬೇಡಿ. ಅವನ ಯೋಗ್ಯತೆ ಏನಿದೆಯೋ? ಇರಲಿ ಬಿಡಿ. ಅಂತ ತಡೆದುಬಿಟ್ಟರು."

"ಈಗ ಅವನಿಗೆ ಎಷ್ಟು ವರುಷ ವಯಸ್ಸು?"

"ಹದಿನಾರಾಯಿತು."

"ಇಷ್ಟಕ್ಕೂ ಸ್ವಾಮಿಗಳಿಗೆ ಕೊಟ್ಟು ಬಿಟ್ಟಿದ್ದೀರಂತಲ್ಲ."

"ಹೌದು. ನಮಗೆ ಇನ್ನು ಮೂರು ಮಕ್ಕಳಾದ ಮೇಲೆ ಅವನು ಅವರ ಸ್ವತ್ತು."

"ಏನು ಮಹಾ! ಆಗತ್ತೆ. ನಿಮಗೇನು ಮಕ್ಕಳಾಗದ ವಯಸ್ಸಾಗಿ ಹೋದು? ಆಯಿತು. ಈ ವಿಷಯ ಅವನನ್ನೇನು ಕೇಳುವುದು?"

"ಅವನೇ ಈಗ ಮನೆಯ ಯಜಮಾನ ಸ್ವಾಮಿ?"

"ದಟ್ ಈಸ್ ಟೂ ಮಚ್. ನರಸಿಂಹಯ್ಯ—ನನಗೆ ಅರ್ಥವಾಯಿತು. ನಿಮ್ಮ ಕುಟುಂಬ ಕೇಳುತ್ತೇನಿ ಅನ್ನಿ."

"ಏನಾದರೂ ಆಗಲಿ. ನಾಳೆನಾಡಿದ್ದರಲ್ಲಿ ಹೇಳಬಹುದಲ್ಲ?"

"ಓ, ಟೇಕ್ ಯುವರ್ ಓನ್ ಟೈಂ. ಅವಸರವೇನೂ ಇಲ್ಲ."

ಆ ವೇಳೆಗೆ ಫೋನ್ ಬಂತು. "ನಟೇಶ್ ಬಂದಿದ್ದಾನೆ. ಸಮಾಚಾರವೆಲ್ಲ ಮೂರು ಮುಕ್ಕಾಲು ಪಾಲು ಸಿಕ್ಕಿದೆ. ಯಾವಾಗ ಬರಬೇಕು?" ಉತ್ತರವೂ ಹೋಯಿತು: "ಯಾವಾಗಲೇನು?" ಈಗಲೇ ಬಂದುಬಿಡು."

ಇಬ್ಬರಿಗೂ ಕಾಫಿ ಬಂತು. ಕಾಫಿ ಕುಡಿಯುತ್ತಾ ಪ್ರಾಣೇಶ್ ಕೇಳಿದ: "ಮೋಹನಾಬಾಯಿ ನೋಡಿದ್ದಿರಾ?"

"ನಿನ್ನೆ ನೋಡಿದ್ದೆ."

"ಏನು ಹೇಳಿದರು?"

"ಏನು ಹೇಳೋದು? ಆ ಹೆಣ್ಣು ಮಗಳು ಕಣ್ಣೀರಲ್ಲಿ ಕೈತೊಳೆದು ಬಿಟ್ಟಳು. ನನಗೇನೋ ತಿಳಿಯೋಲ್ಲ ನರಸಿಂಹಯ್ಯನವರೇ? ಚಿಕ್ಕರಾಯರನ್ನು ಕೇಳಿ. ಇರೋವರೆಗೂ ನನ್ನ ಮಾನವಾಗಿ ಕಾಪಾಡಿ ಈ ಮಗೂನ ಒಂದು ಗತಿಕಾಣಿಸಿ ಅಂದು ಮೊಕದ ಮೇಲೆ ಬಟ್ಟೆ ಹಾಕಿಕೊಂಡು ಅತ್ತು ಬಿಟ್ಟರು. ನನಗಂತೂ ಹೊಟ್ಟೆಯಲ್ಲಿ ಕೈಯಿಟ್ಟು ಕಿವಿಚಿದ ಹಾಗಾಯಿತು."

ಪ್ರಾಣೇಶನು ಅವಾಕ್ಕಾದನು. "ನಿನ್ನೆ ಇಷ್ಟು ಹೇಳಿಕೊಂಡು ಅತ್ತವಳು ಇವೊತ್ತು ಬೆಳಗ್ಗೆಗೆ ಬದಲಾಯಿಸಿದ್ದಾಳೆ. ಅಥವಾ ಹೆಣ್ಣೇ ಬಲೆ ಬೀಸುತ್ತಿದೆಯೋ?" ಇನ್ನೂ ಏನೇನೋ ಯೋಚನೆ ಬಂತು. ಅವೆಲ್ಲ ಅತ್ತ ಕಡೆ ಇಟ್ಟು, "ಆಕೆ ಹೇಳೋದೂ ನಿಜ. ನೀವೇ ನಿಂತುಕೊಂಡು ಆ ಸಂಸಾರ ಒಂದು ಘಟ್ಟ ಹತ್ತಿಸಬೇಕು, ಆಯಿತು. ಅದೇನು ಸಮಾಚಾರ? ವೀಣಾ ಆಗಲೇ ಸ್ವಯಂವರ ಮಾಡಿಕೊಂಡಿದ್ದಾಳಂತೆ?"

"ಸರಿ. ಆರೇಳು ವರ್ಷದ ಮಗು. ಅದರ ಮಾತೇನು ಬಿಡಿ. ರಾಯರೇ?"

"ವೀಣಾ ಎಲ್ಲರ ಹಾಗಲ್ಲರೀ! ಒಂದೊಂದು ಸಮಯ ಅವಳಿಗೆ ಹೊಳೆಯೋ ಬುದ್ಧಿ ದೊಡ್ಡವರಿಗೂ ಹೊಳೆಯೋದಿಲ್ಲ. ಮುಂದೆ ಕನ್ಯಾ

ಮಂದಿರದಿಂದ ಮೀಟಿಂಗಿನಲ್ಲಿ ಅವಳನ್ನು ಇಟ್ಟುಕೊಳ್ಳೋಣ ಅಂತೀನಿ. ನಿಮ್ಮ ಇಷ್ಟ ಏನು ?"

"ಮಾತಿನಲ್ಲಿ ಮರೆತೇಬಿಟ್ಟಿದ್ದೆ. ಜೀವಣ್ಣನವರು ಕೇಳಿದರು ಮಂದಿರದ ಮೀಟಿಂಗ್ ಯಾವೊತ್ತು ಅಂತ. ?"

"ಗೌಡರ ಉತ್ತರ ಬರುತ್ತಲೂ ಫಿಕ್ಸ್ ಮಾಡೋಣ. ಅದೊಂದು ನಮ್ಮ ತಲೇಮೇಲಿರೋ ಭಾರ. ಅದನ್ನು ಇಳಿಸಿಕೊಳ್ಳಬೇಕು."

"ನಾನಿನ್ನು ಹೋಗಿಬರಲೇ ?"

"ಒಳ್ಳೇದು. ಮರೆಯಬೇಡಿ. ನೀವು ಒಪ್ಪಿದರೆ, ಇನ್ನು ಒಂದು ಇಪ್ಪತ್ತೈದು ಮುಂದಕ್ಕೆ ತಳ್ಳೋಣ."

"ಹತ್ತು ಜನದ ಹಣ ಮುನ್ನೂರು ಕೊಡಿಸಿಬಿಡಿ. ರಾಯರೇ!"

ನರಸಿಂಹಯ್ಯನು ಹೊರಡುತ್ತಿದ್ದ ಹಾಗೆಯೇ ನಟೇಶ್ ಬಂದನು. ಪ್ರಾಣೇಶನು ಗೌರವವಾಗಿ ಕರೆದು, "ಕಾಫಿ ಆಯಿತೋ ?" ಎಂದು ಕೇಳಿದನು. ಅವನು ಆಯಿತು ಅಂದರೂ ಬಿಡದೆ ಒಂದು ಕಪ್ಪು ಕಾಫಿ ತರಿಸಿಕೊಟ್ಟನು.

"ನೀನು ಹೋಗಿದ್ದ ಕೆಲಸ ಏನಾಯಿತು ?"

"ಬಹಳ ಕೆಲಸ ಹಿಡೀತು ಸಾರ್! ಮೈಸೂರಿನಲ್ಲಿ ನಾಲ್ಕೈದು ದಿವಸ. ಅಲ್ಲಿಂದ ಮಂಗಳೂರು—ಅಲ್ಲಿಂದ ಟ್ರಾವಂಕೂರ್. ಅಲ್ಲಿಂದ ರಿಟರ್ನ್."

"ಅದೇನು ಅಷ್ಟು ಹಿಡಿದಿದ್ದು !"

"ನೀವು ಹೇಳಿದ ನಂಜಮ್ಮ ಹೋಗಿ ಮೂವತ್ತು ವರ್ಷ ಆಗಿದೆ. ಅವಳ ಮಗಳು ಕೆಂಪಮ್ಮ ಮೈಸೂರು ಬಿಟ್ಟು ಯಾವೋನ ಜೊತೆ ಯಲ್ಲಿಯೋ ಹೊರಟುಹೋದಳು. ಅವನೊಬ್ಬ ನಾಟಕದವನು. ಅವನು ಅಲ್ಲಿಂದ ಮಂಗಳೂರಿಗೆ ಅವಳನ್ನು ಹೊತ್ತುಕೊಂಡು ಹೋದ. ಅವನೂ ಒಂದೆರಡು ವರ್ಷ ಇದ್ದು ಹೇಳದೆಕೇಳದೆ ಪರಾರಿಯಾದ. ಆಗ ಅವಳಿಗೆ

ಆರು ತಿಂಗಳು. ಅವಳು ದಿಕ್ಕು ದಿವಾಣ ಇಲ್ಲದೆ ಹೋಗಿ ಒದ್ದಾಡು ವಾಗ ಒಬ್ಬ ಪಾದರಿ ಸಿಕ್ಕಿ, ಅವಳನ್ನು ಮಿರ್ಷ ಆಸ್ಪತ್ರೆಗೆ ಕರೆದುಕೊಂಡು ಹೋದರು. ಅಲ್ಲಿ ಅವಳು ಒಂದು ಮಗು ಹೆತ್ತಳು. ಅಲ್ಲಿ ತಾಯಿ ಮಕ್ಕಳು ಇಬ್ಬರೂ ಕ್ರಿಶ್ಚಿಯನ್ ಆದರು. ಆ ಮಗಳು ಹುಟ್ಟು ಹಾದರಗಿತ್ತಿ. ಇನ್ನೂ ಸಣ್ಣ ಹುಡುಗಿಯಾಗಿದ್ದಾಗಲೇ ಅದರ ಬುದ್ಧಿ ನೇರವಾಗಿರಲಿಲ್ಲ. ತಾಯಿ ಹತೋಟಿ ತಪ್ಪಿತು. ಮಿರ್ಷನವರಿಗೂ ಈ ಪ್ರಾರಬ್ಧ ಕಳೆದು ಹೋದರೆ ಸಾಕು ಎನ್ನಿಸಿತು. ಅವಳ ಹನ್ನೆರಡನೆಯ ವರ್ಷದಲ್ಲಿಯೇ ಯಾರನ್ನೋ ಕಟ್ಟಿಕೊಂಡು ಎಲ್ಲಿಯೋ ಓಡಿಹೋಯಿತು. ಎಲ್ಲೋ ಯಾವುದೋ ಕಾಫಿ ತೋಟದಲ್ಲಿ ಇರಬಹುದು ಎಂದು ತಾಯಿ ಹಂಬಲ. ನೀಲಗಿರಿಯಲ್ಲಿ ಇದ್ದಳಂತೆ! ಅದು ಐದಾರು ವರ್ಷದ ಮಾತು. ಆ ಕೆಂಪಮ್ಮ ಈಗ ಜೋನಮ್ಮನಾಗಿದ್ದಾಳೆ. ಟ್ರಾವಣ್‌ಕೂರಿನಲ್ಲಿ ಒಂದು ಸಣ್ಣ ಆಸ್ಪತ್ರೆ ಇಟ್ಟುಕೊಂಡು ದುಡೀತಿದ್ದಾಳೆ." ಅವಳಿಗೂ ಮಗಳನ್ನ ನೋಡಬೇಕು ಅಂತ ಆಸೆ ಇದೆ."

"ಗುರುತು ಏನಾದರೂ ಇದೆಯಂತೋ ?"

"ಈ ಎಡದ ಭುಜದಮೇಲೆ ಒಂದು ದೊಡ್ಡ ಕೆಂಪು ಮಚ್ಚೆ ಇದೆಯಂತೆ ?"

"ಹೆಸರೇನಂತೆ?"

"ಮೇರಿ."

"ಏನು ಹತ್ತಿರಕ್ಕೆ ಬಂತೋ ?"

"ನನಗೂ ಹಾಗೇ ಅನ್ನಿಸಿತು. ಆದರೆ ಮಚ್ಚೆ ?"

"ಇವಳಿಗೊಂದು ಮಚ್ಚೆ ಇದೆ."

"ಹಾಂ"

"ಹೌದು"

"ಸರಿ ಮತ್ತೆ!"

"ಜೋನೆಮ್ಮನ ಅಡ್ರೆಸ್ ಏನು?''

"ಗುರ್ತು ಹಾಕಿಕೊಂಡು ಬಂದಿದ್ದೀನಿ. ತಂದುಕೊಡುತ್ತೀನಿ.''

ಪ್ರಾಣೇಶನು ಅವನ ಮಾತು ಕೇಳಿ ಸ್ತಬ್ಧನಾದನು. "ಕೆಂಪಿ ಇದ್ದಾಳೆ. ಅವಳ ಮಗಳು ಮೇರಿ. ಅವಳು ಈಗ ಇಲ್ಲಿ ತನ್ನ ................"

ನಟೇಶನ ಮುಂದೆ ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ಹೇಳುವುದಿರಲಿ, ಯೋಚಿಸುವುದಕ್ಕೂ, ತನ್ನ ಮುಖದ ಮೇಲೆ ಕೂಡ ತನ್ನ ಮನೋಭಾವದ ನೆರಳು ಕಾಣುವುದೂ ಅವನಿಗೆ ಇಷ್ಟವಿಲ್ಲ. ಆದರಿಂದ, ನಕ್ಕು, ''ನಟೇಶ್, ನೀನು ಮಾಡಿಕೊಂಡು ಬಂದ ಕೆಲಸದಿಂದ ಎರಡು ಲಾಭವಾಯಿತು. ಒಂದನೆಯದು ಈ ಜೋನಮ್ಮನ ತಾಯಿ ನಮ್ಮ ತಂದೆಯ ಬಳಿ ಒಂದಷ್ಟು ಹಣ ಇಟ್ಟಿದ್ದರು. ಅದನ್ನು ರಿಟರ್ನ್ ಮಾಡುವುದಕ್ಕೆ ಅವಕಾಶವಾಯಿತು. ಇವಳು ತನ್ನ ತಾಯಿ ಎಲ್ಲೋ ಇದ್ದಾಳೆಯಂತೆ. ಅವಳನ್ನು ಹುಡುಕಿಸಬೇಕು ಎಂದು ಹೇಳುತ್ತಿದ್ದಳು. ಅದೂ ಆಯಿತು. ನಿನಗೆ ಈಗ ಡಬ್ಬಲ್ ರಿವಾರ್ಡ್ ಬರಬೇಕು" ಎಂದನು.

ನಟೇಶನು ಸಂತೋಷದ ಮೂರ್ತಿಯಾಗಿ ಹಲ್ಲು ಕಿಸಿಯುತ್ತಾ ನಿಂತುಕೊಂಡನು.

"ಅದಿರಲಿ, ಈಗ ಇನ್ನೊಂದು ಮಾತು. ದೊಡ್ಡ ರಾಯರ ಕಾರು ಖರೀದಿಗೆ ಬಂದಿದೆ. ಹದಿನಾಲ್ಕೂವರೆ ಸಾವಿರಕ್ಕೆ ಕೇಳುತ್ತಿದ್ದಾರೆ. ನಿನ್ನ ಕೇಳುವ ವರೆಗೂ ಏನೂ ಹೇಳುವುದಿಲ್ಲ ಅಂದೆ. ನೀನು ಏನು ಅನ್ನುತ್ತೀಯೆ?"

"ಇನ್ನು ಎರಡು ದಿನ ಕಾದರೆ ಹದಿನೈದು ಬಂದೀತು. ಆದರೆ ಅಮ್ಮಾವರು ಏನೆನ್ನುತ್ತಾರೋ?"

"ಅಮ್ಮಾವರು ಆ ಕಾರು ಕಂಡರೆ ಗೋಳೋ ಅಂತ ಅಳುತ್ತಾರೆ. ನೀನೇ ಹೇಳಿದೆಯಲ್ಲ: ಅವರು ಆ ಕಾರು ಹತ್ತಿರವೂ ಸುಳಿಯುವುದಿಲ್ಲ

ಅಂತೆ. ಅದಕ್ಕೇ ಅದನ್ನು ಕೊಟ್ಟು ಆ ಸಣ್ಣ ಕಾರು ಮಾತ್ರ ಇಟ್ಟು ಕೊಳ್ಳುವುದು ಅಂತ."

ನಟೇಶನಿಗೆ ಇದುವರೆಗೆ ಒಂದು ಕಡೆ ಸುಖವಾಗಿ ಜೀವನ ನಡೆಯುವ ಅವಕಾಶವಿತ್ತು. ಈಗ ಅದು ಇಲ್ಲವಾಗುವುದು ಎಂದು ನಂಬಿಕೆಯಾಗಿ ಗಾಬರಿಯಾಯಿತು. ಆದರೂ ಕಷ್ಟಪಡುವುದಕ್ಕೆ ಸಿದ್ಧವಾಗಿರುವವರ ಧೈರ್ಯದಿಂದ ಆ ಗಾಬರಿಯನ್ನು ನುಂಗಿಕೊಂಡು ಹೇಳಿದನು:

"ಕೊಟ್ಟುಬಿಡಬಹುದು. ಕೇಳಿದವರು ಯಾರು?"

"ನಮ್ಮ ಜವಳಿ ಅಂಗಡಿಯವರು. ಅವರು ಒಂದು ಕಂಪನಿ ಮಾಡುವುದರಲ್ಲಿ ಇದ್ದಾರೆ. ಆ ಕಂಪನಿಗೆ ಒಂದು ದೊಡ್ಡ ಕಾರು ಬೇಕು. ಅವರು ನೀನೂ ಬೇಕು ಎನ್ನುತ್ತಾರೆ."

"ಅವರು ಬಹಳ ಜಿಪುಣರು ಸಾರ್. ತಮ್ಮ ಹತ್ತಿರ ಇದ್ದು ಅಲ್ಲಿಗೆ ಹೋಗುವುದು ಸರಿಯಿಲ್ಲ."

"ಒಂದು ವೇಳೆ ಕಾರು ನಮ್ಮದೇ ಆಗಿ, ನೀನು ನಮ್ಮ ಸರ್ವಿಸ್ಸಿಗೇ ಬರುವುದಾದರೆ?"

"ಹಾಗಂದರೆ?"

"ನಾನೇ ಛೇರ್‌ಮನ್ ಆಗಬಹುದು."

"ಪೇ ಸಾರ್?"

"ಭರ್ತಿ ಕೊಟ್ಟು ೨೫ ಡಿಯರ್‌ನೆಸ್ ಅಲೋಯನ್ಸ್ ಕೊಟ್ಟರೆ?"

"ಬೋನಸ್, ಪ್ರಾವಿಡೆಂಟ್ ಫಂಡ್ ಉಂಟಲ್ಲ ಸಾರ್?"

"ಬೋನಸ್ ಉಂಟು. ಫಂಡು ಎರಡು ದಿವಸ ಆದಮೇಲೆ."

"ತಾವೇ ಇದ್ದರೆ ಆಗಬಹುದು ಸಾರ್. ಆದರೂ ಈಗ ಪ್ರಾವಿಡೆಂಟ್ ಫಂಡ್ ಇಲ್ಲದಿದ್ದರೆ ಎಲ್ಲರೂ ಬೈತಾರೆ."

"ಇರಲಿ. ಡಿವಿಡೆಂಡ್ ಕೊಟ್ಟಮೇಲೆ ಕೊಡಿಸೋಣ."

“ಸರಿ ಸಾರ್.”

ಪ್ರಾಣೇಶ್ ನೂರು ರೂಪಾಯಿ ನೋಟು ಒಂದು ತರಿಸಿ ಕೊಟ್ಟು ನಟೇಶನನ್ನು ಕಳುಹಿಸಿಕೊಟ್ಟನು. ಅವನೂ ಸಂತೋಷವಾಗಿ ಹೋದನು.

ದಾರಿಯಲ್ಲಿ ಅವನಿಗೆ ಹೊಂಗನಸು. “ತಾನು ಕಂಪೆನಿ ಛೇರ್‌ಮನ್ ಡ್ರೈವರ್ ಆದರೆ, ಅಲ್ಲಿ ಸಣ್ಣಗೆ ಒಂದು ಲೇಬರ್ ಯೂನಿಯನ್ ಹುಟ್ಟಿ ಹಾಕುವುದು. ಸೆಕ್ರೆಟರಿ, ವೈಸ್-ಪ್ರೆಸಿಡೆಂಟ್, ಪ್ರೆಸಿಡೆಂಟ್ ಆಗುವುದು. ಅಲ್ಲಿಂದ ಮುಂದೆ ಸ್ಟೇಟ್ ಲೇಬರ್ ಯೂನಿಯನ್ ಪ್ರೆಸಿಡೆಂಟ್, ಎಲೆಕ್ಷನ್, ಪಾರ್ಲಿಮೆಂಟ್, ಮಿನಿಸ್ಟ್ರಿ. ಈಗಿನ ಕಾಲದಲ್ಲೇನು, ಯಾರು ಬೇಕಾದರೂ ಮಿನಿಸ್ಟರ್ ಆಗಬಹುದು. ತನ್ನ ಮಾತು ಕೇಳೋರು ಹತ್ತು ಜನ, ಆ ಹತ್ತು ಜನ ಎಲೆಕ್ಷನ್‌ನಲ್ಲಿ ಗೆಲ್ಲೋರು ಆಗಬೇಕು. ಇರಲಿ, ಇರಲಿ. ಪ್ರೆಸಿಡೆಂಟ್ ನಟೇಶ್ ಆದಮೇಲೆ—ಮಿನಿಸ್ಟ್ರಿ ಛಾನ್ಸ್—ಇರಲಿ, ಇರಲಿ” ಎಂದುಕೊಳ್ಳುತ್ತಾ ದಾರಿಯಲ್ಲಿ ಒಂದು ಸೀರೆ, ರವಕೆ ಕಣ ತೆಗೆದುಕೊಂಡು ಮನೆಗೆ ಹೋದನು.

ಅವನಿಗೆ ತನ್ನ ಮುಂದಿನ ಕನಸು ಕಾಣುವಾಗ ಪಕ್ಕದಿಂದ ಇನ್ನೊಂದು ಯೋಚನೆ ಅಡ್ಡಬರುತ್ತಿತ್ತು. “ದೊಡ್ಡರಾಯರು ಬದುಕಿದ್ದರೆ ಆಗಲೂ ಆಗಬೇಕಾದ್ದೆಲ್ಲ ಆಗುತ್ತಲೇ ಇತ್ತು. ಚಿಕ್ಕರಾಯರ ಬದಲು ದೊಡ್ಡರಾಯರೇ ಛೇರ್‌ಮನ್ ಆಗುತ್ತಿದ್ದರು. ಆಗ, ಅಯ್ಯೋ, ಆ ರೀತಿಯೇ ಬೇರೆ! ಆ ಮಹಾರಾಯ ಇದ್ದಿದ್ದರೆ, ನಟೇಶ್ ಬೇಕು ಎಂದದ್ದು ಯಾವುದು ಇಲ್ಲದೆ ಹೋಗುತ್ತಿತ್ತು? ಈ ಸೂಟ್ ತಾನೇ ನಾನು ಹೊಲಿಸುವುದಾಗುತ್ತಿತ್ತೆ? ಪುಣ್ಯಾತ್ಮ ತಾನು ಸೂಟು ಹೊಲಿಸುವಾಗ, ಯೂನಿಫಾರಂ ಕೇಳಿದರೆ, ಸೂಟೇ ಹೊಲಿಸಿಕೊಟ್ಟ!” ಎಂದು ಅಳಿದ ಯಜಮಾನನ ಚಿಂತೆ ಬಂದು ಕಣ್ಣು ಒಂದೆರಡು ಸಲ ಒದ್ದೆಯಾಗಿತ್ತು.

೭

ಮೇರಿಯು ಈ ದಿನ ಮನೆಬಿಟ್ಟು ಹೊರಗೇ ಹೋಗಿಲ್ಲ. ಮನೆಯಲ್ಲೂ
ನ್ನ ರೂಮು ಬಿಟ್ಟು ಹೊರಗೆ ಹೋಗಿಲ್ಲ. ಮನೆಯ ಮುಂದೆ ಸುತ್ತಲೂ
ಂದು ಸಣ್ಣ ಕಾಂಪೌಂಡು. ಅದರ ತುಂಬಾ ಹೂವಿನ ಗಿಡಗಳು.
ುನೆಗೆ ಎರಡು ಗೇಟುಗಳು. ಒಂದು ಸಣ್ಣ ಗೇಟು. ಇನ್ನೊಂದು
ಾರು ಬರುವುದಕ್ಕೆ ಅನುಕೂಲವಾದ ಭಾರಿಯ ಗೇಟು. ಮನೆಯ
ುಂದೆ ಒಂದು ಬೋರ್ಡ್. ಮಿಸ್. ಜೆ. ಮೇರಿ. ಕ್ವಾಲಿಫೈಡ್ ಮಿಡ್
ೈಫ್, ಎಂದು ಅದರಲ್ಲಿ ಒಂದು ಬರೆಹ. ಅದರ ಮಗ್ಗುಲಲ್ಲಿ ಇನ್ನೊಂದು
ೋರ್ಡ್. ಅದರಲ್ಲಿ 'ಪೇಯಿಂಗ್ ಗೆಸ್ಟ್ಸ್ ರಿಸೀವ್ಡ್.' ಎಂದು
ರೆಹ. ಮನೆಯ ಮುಂದೆ ಒಂದು ಸಣ್ಣ ಕೆರೆ. ಅಲ್ಲಿ ತಾವರೆಗಿಡ,
ೀನು, ಬೆಳೆಸಬೇಕು ಎಂದು ಮೇರಿಯ ಆಸೆ. ಆದರೆ ಕಾರ್ಪೊರೇಷ
ದಕ್ಕೆ ಒಪ್ಪಲಿಲ್ಲ.

ಮೇರಿ ಕ್ವಾಲಿಫೈಡ್ ಮಿಡ್ ವೈಫ್ ಆಗಿದ್ದರೂ ಅವಳು ಹೆರಿಗೆಗೆ
ಯಾವಾಗಲೂ ಹೋಗಿಲ್ಲ. ಸಂಬಂಧಪಟ್ಟ ಆಫೀಸರ್ ಕೇಳಿದರೆ,
ನ್ನನ್ನು ಯಾರೂ ಕರೆಯಲಿಲ್ಲ ಎನ್ನುವಳು. ಇತರರು ಬಂದರೆ, ನನ್ನ
ಸ್ತಗುಣ ಸರಿಯಿಲ್ಲ ಎನ್ನುವಳು. ಹಾಗೆಯೇ ಪೇಯಿಂಗ್ ಗೆಸ್ಟ್
ಂದರೆ, "ಸಾರಿ, ನೋ ವೇಕೆನ್ಸಿ" ಎನ್ನುವಳು. ಆದರೂ ಅವಳ
ಾರೆಜ್‌ನಲ್ಲಿ ಯಾವುದಾದರೂ ಒಂದು ಕಾರು ಇದ್ದೇ ಇರುವುದು.

ಅವಳು ಅಡಿಗೆ ಮಾಡಿಕೊಳ್ಳುತ್ತಿರಲಿಲ್ಲ. ಒಂದು ಫರ್ಲಾಂಗ್
ೂರದಲ್ಲಿ ಒಂದು ಮನೆ. ಅಲ್ಲಿ ಒಬ್ಬಳು ಮಲೆಯಾಳದ ಕಡೆಯ
ಂಗುಸು. ಅವಳಿಗೆ ಮಕ್ಕಳಿಲ್ಲ, ಮರಿಯಿಲ್ಲ. ಅವಳು ಇವಳಿಗೆ
ಾಯಡ್, ಬಟ್ಲರ್, ದೋಭಿ, ಎಲ್ಲಾ! ಆದರೆ, ಅವಳು ಮನೆಗೆ
ರುವುದು ದಿನಕ್ಕೆ ಎರಡು ಸಲ. ಬೆಳಿಗ್ಗೆ ಹತ್ತೂವರೆಗೆ ಸರಿಯಾಗಿ
ಂದು ಊಟ ತಂದಿಡುವಳು. ಸಂಜೆ ಏಳೂವರೆಗೆ ಒಂದು ಊಟ

ತಂದಿಡುವಳು. ಮೇರಿಗೆ ಇನ್ನೇನಾದರೂ ಹೆಚ್ಚಿಗೆ ಊಟ ಬೇಕಾದರೆ, ಅಲ್ಲಿ ಚೀಟಿ ಬರೆದಿಟ್ಟಿರುವಳು. ತಿಂಗಳ ಕೊನೆಯಲ್ಲಿ ಬಿಲ್ ಬರುವುದು. ಅಲ್ಲಿಯೇ ಆ ಸುತ್ತಮುತ್ತಲಿನಲ್ಲಿ ಒಂದು ಕೋ ಆಪರೇಟಿವ್ ಸ್ಟೋರ್ಸ್. ಅಲ್ಲಿ ಮೀನು, ಮೊಟ್ಟೆ ಮೊದಲುಗೊಂಡು ಸಾಸುವೆ, ಕೊತ್ತಂಬರಿವರೆಗೆ, ನ್ಯಾಪ್‌ಕಿನ್ ಇಂದ ಹಿಡಿದು ಜಾರ್ಜೆಟ್ ಸೀರೆವರೆಗೆ ಬೇಕಾದ್ದೆಲ್ಲ ಸಿಕ್ಕುವುದು. ಅಲ್ಲಿ ಆ ಹೆಂಗುಸು—ಅವಳನ್ನು ಎಲ್ಲರೂ ಕುಟ್ಟಿ ಎನ್ನುವರು—ಮೇರಿಯ ಲೆಕ್ಕದಲ್ಲಿ ೬೦ ರೂ. ವರೆಗೆ ಬೇಕಾದ ಸಾಮಾನು ತೆಗೆದುಕೊಳ್ಳಬಹುದು. ಅಲ್ಲಿಂದಾಚೆಗೆ ಬೇಕಾದರೆ ಮೇರಿಯು ಕ್ಯಾಷ್ ಕೊಡುವಳು. ಇದು ಇಬ್ಬರಿಗೂ ಸುಖವಾಗಿತ್ತು.

ಸುಮಾರು ನಾಲ್ಕು ಗಂಟೆ ಆಗಿದೆ. ಇನ್ನೂ ಮೇರಿ ಊಟ ಮಾಡಿಲ್ಲ, ಬಾಗಿಲು ಹಾಕಿದೆ. ಮಂಚದ ಮೇಲೆ ಬಿದ್ದುಕೊಂಡಿದ್ದಾಳೆ. ಅತ್ತತ್ತು ಕಣ್ಣು ಕೆಂಪಗಾಗಿ ಊದಿಕೊಂಡಿದೆ. ಒಂದು ಸೇಬಿನ ಹಣ್ಣು ತೆಗೆದುಕೊಂಡಿದ್ದಾಳೆ. ಒರೆದು ಸಿಪ್ಪೆ ತೆಗೆದು ಕೊಂಚ ತಿಂದಿದ್ದಾಳೆ. ಉಳಿದದ್ದು ಹಾಗೆಯೇ ಅಲ್ಲಿಯೇ ಮಗ್ಗುಲಿನ ಟೀ ಪಾಯ್ ಮೇಲೆ ಒಂದು ಸಾಸರ್‌ನಲ್ಲಿ ಬಿದ್ದಿದೆ. ಸ್ನಾನವಿಲ್ಲ; ಮಡಿಯಿಲ್ಲ; ಏನೋ ದುಃಖಕ್ಕೆ ಸಿಕ್ಕಿ ಒದ್ದಾಡುವಳಂತೆ ಬಿದ್ದಿದ್ದಾಳೆ.

ಫೋನ್ ಬಂತು. ಅವಳು ಹಾಸುಗೆಯನ್ನು ಬಿಟ್ಟು ಏಳಲಿಲ್ಲ. ಒಂದಷ್ಟು ಹೊತ್ತು ಅದೂ ಕೂಗಿ ಕೂಗಿ ಸುಮ್ಮನಾಯಿತು.

ನಡುಮನೆಯಲ್ಲಿದ್ದ ಗಡಿಯಾರ ಒಡೆತಿಗೆ ಆಯಾಸವಾಯಿತು ಎಂಬ ಭೀತಿಯಿಂದಲೋ ಎಂಬಂತೆ ಮೆತ್ತಗೆ ಮೃದುವಾಗಿ ಐದು ಗಂಟೆ ಹೊಡೆಯಿತು. ಅವಳು ಇನ್ನೂ ಎದ್ದಿಲ್ಲ.

ಸುಮಾರು ಐದೂವರೆಯಾಯಿತು. ಇನ್ನೊಂದು ಸಲ ಫೋನ್ ಬಂತು. ಎಲ್ಲೋ ಅರ್ಧಜ್ಞಾನದಲ್ಲಿ ಎದ್ದು ಹೋಗಿ ಫೋನ್ ತೆಗೆದುಕೊಂಡಳು. ಪ್ರಾಣೇಶನ ಫೋನ್.

"ಎಲ್ಲಿ ಹೋಗಿದ್ದೆ ?"

"ಇಲ್ಲೇ ಬಿದ್ದುಕೊಂಡಿದ್ದೆ"

"ಮತ್ತೆ ಫೋನಿಗೆ ರೆಸ್ಪಾನ್ಸೇ ಇರಲಿಲ್ಲ."

"ಹೌದು"

"ಇದೇನು ಕ್ರೈಯಿಂಗ್ ?"

"ಹೌದು"

"ಸೋ ಯು ಮಸ್ಟ್ ಹ್ಯಾವ್ ಕಂಪೆನಿ?"

"ನಾಟ್ ಅನ್‌ವೆಲ್‌ಕಂ"

"ಹಾಫ್ ಅನವರ್."

ಮೇರಿಯು ಅದಕ್ಕೆ ಏನೂ ಹೇಳದೆ ರಿಸೀವರ್ ಕೆಳಗಿಟ್ಟು ಬಂದು ಕುಳಿತುಕೊಂಡಳು. ಬರಬೇಡ ಎಂದು ಫೋನ್‌ಮಾಡಿ ಬಿಡಲೇ ಎಂದು ಒಂದು ಮನಸ್ಸು. ಬಂದು ಹೋಗಲಿ, ಎಂದು ಇನ್ನೊಂದು ಮನಸ್ಸು, ಆ ವೇಳೆಗೆ ನಾಯಿ ಬಂತು. ಎಲ್ಲಿಯೋ ಹೋಗಿ ಚೆನ್ನಾಗಿ ಜಗಳವಾಡಿ ಮೈಯೆಲ್ಲ ಗಾಯಮಾಡಿಕೊಂಡು, ರಕ್ತಸುರಿಸಿಕೊಂಡು ಮನೆಗೆ ಬಂದಿದೆ. ಮೊದಲು ಅವಳ ಸ್ಥಿತಿಯಲ್ಲಿ ಅದರ ಸ್ಥಿತಿ ಕಣ್ಣಿಗೆ ಬೀಳಲಿಲ್ಲ. ಮತ್ತೆ ಕೈಗೆ ರಕ್ತ ತಗುಲಿ, ನೋಡಿದರೆ ಅದರ ಭಯಂಕರ ಸ್ಥಿತಿ ಕಾಣಿಸಿತು. "ಘೂ ಪ್ರಾರಬ್ಧವೇ! ನನ್ನ ಮನಸ್ಸು ಹೀಗಾಗಿದೆ. ನಿನ್ನ ಮೈ ಹೀಗಾಗಿದೆ." ಎಂದು ಬಯ್ದುಕೊಂಡು ಅದನ್ನು ತೆಗೆದುಕೊಂಡು ಹೋಗಿ ತೊಳೆದಳು. ತನಗೂ ಬೆಳಗಿಂದ ಸ್ನಾನವಿಲ್ಲದ್ದು ನೆನೆಪಾಗಿ ತಾನೂ ಸ್ನಾನಮಾಡಿದಳು. ಮೈಯಿನ ಕೊಳೆ ಹೋಗಿ ಮನಸ್ಸಿಗೂ ಕೊಂಚ ಮೋಡ ಕಳೆದಂತಾಯಿತು. ಕೆದರಿದ ತಲೆಯನ್ನು ಹಾಗೆಯೇ ಅಷ್ಟು ರಿಪೇರಿಮಾಡಿ, ಊದಿದ್ದ ಕಣ್ಣಿಗೆ ಅಷ್ಟು ತಣ್ಣೀರು ತಳೆದು ಒಂದು ಮಡಿಸೀರೆ ಉಟ್ಟುಕೊಂಡು ಬಂದು ಈಜಿಛೇರ್‌ಮೇಲೆ ಬಿದ್ದುಕೊಂಡಳು.

ಇನ್ನು ಒಂದು ಗಳಿಗೆಯೊಳಗಾಗಿ ಕಾಂಪೌಂಡಿನೊಳಕ್ಕೆ ಸ್ಕೂಟರ್ ಒಂದು ಬಂದದ್ದು ತಿಳಿಯಿತು. ಇನ್ನೊಂದು ಗಳಿಗೆಯೊಳಗಾಗಿ ಪ್ರಾಣೇಶನು ಬಂದು ಎದುರು ನಿಂತನು.

ಅವನು ಆ ಚಿಕ್ಕ ಮನೆಯೊಳಕ್ಕೆ ಬಂದುದು ಅವಳಿಗೆ ಸರಿಬೀಳಲಿಲ್ಲ. "ಇಲ್ಲಿಗೇಕೋ ಬಂದೆ? ನಾನೇ ನಿನ್ನ ರೂಮಿಗೆ ಬರುತ್ತಿದ್ದೆ" ಎಂದಳು. ಅವಳ ಗದರಿಕೆಗೆ ಹೆದರದೆ ಒಂದು ಕುರ್ಚಿ ಎಳೆದುಕೊಂಡು ಅವಳ ಹತ್ತಿರ ಕೂತುಕೊಂಡು ತಲೆಯನ್ನು ಸವರುತ್ತ, "ಯೂ ಲಿಟಲ್ ಫೂಲ್, ನೀನು ಯಾರನ್ನು ಕೇಳಿ ಉಪವಾಸ ಮಾಡಿದೀಯೆ ?" ಎಂದು ಕೇಳಿದ.

"ನಿನಗೆ ಯಾರು ಹೇಳಿದರು ನಾನು ಉಪವಾಸ ಮಾಡಿದೆ ಅಂತ ?"

"ಅಲ್ಲಿ ನೋಡು ಹಣ್ಣು ಕೂಡ ಹಾಗೇ ನಿಂತಿದೆ."

"ಅದು ಉಪವಾಸದ ಗುರುತೋ ?"

"ನಿನ್ನ ಮೊಕ ಕೇಳು. ಗುಳಿ ಬಿದ್ದ ಕಣ್ಣೂ ಕೇಳು. ಒಣಗಿರೋ ತುಟಿ ಕೇಳು. ಒಳಗೆ ಕೂತು ಇಣಿಕಿ ನೋಡುತಿರೋ ಅಳೂ ಕೇಳು. ಸಾಕ್ಷಿ ಸಾಕೊ."

"ಲೋ, ಪನ್ನು, ನಾನು ಬದುಕಿರಲಾರೆ ಕಣೋ"

"ಏನು ಮತ್ತೆ ಷುರುವಾಯಿತೋ ?"

"ಅಗೋ ನೋಡು" ಎಂದು ಮಂಚದ ಮೇಲೆ ಇಟ್ಟಿದ್ದ ದೊಡ್ಡ ಫೋಟೋ ಒಂದು ತೋರಿಸಿ ಮೊಕ ಮುಚ್ಚಿಕೊಂಡು ಅತ್ತಳು.

ಫೋಟೋ ರಮೇಶನದು. ಅದರ ಮಗ್ಗುಲಲ್ಲಿಯೇ ಒಂದು ಇನ್ಷ್ಯೂರ್ ಕವರ್ ಬಿದ್ದಿದೆ. ಅದನ್ನೂ ತೆಗೆದು ನೋಡದೆಯೇ ಅದು ಇನ್ಷ್ಯೂರೆನ್ಸ್ ಆಫೀಸಿನಿಂದ ಬಂದಿರುವ ಚೆಕ್ ಎನ್ನುವುದು ಅವನಿಗೆ ತಿಳಿಯಿತು. ಆ ಫೋಟೋ ನೋಡಿ ಅವನಿಗೂ ಕೊಂಚ ಮನಸ್ಸು ಕಲಕಿತು. ಹಾಗೆಯೇ ಅಂದಿನ ಬೆಳಗ್ಗೆ ಮೋಹನೆಯೊಡನೆ ಮಾತನಾಡಿದ್ದುದು ನೆನಪಾಗಿ, ಅವಳು ಕೈ ಹಿಡಿದ ಹೆಂಡತಿ, ಇವಳು ಆಗಂತುಕವಾಗಿ ಸಿಕ್ಕಿದ ಸೂಳೆ. ಇಬ್ಬರಿಗೂ ಇಷ್ಟು ವ್ಯತ್ಯಾಸವೇ? ಎನ್ನಿಸಿತು.

ಒಬ್ಬಳು ಅತ್ತತ್ತು ಸಾಯುತ್ತಿದ್ದಾಳೆ. ಇನ್ನೊಬ್ಬಳು ಅಳುವನ್ನು ಮುಗಿಸಿ ಹೊಸ ಜೀವನದ ಹೊಸಲ ಬಳಿ ಬಂದಿದ್ದಾಳೆ. "ಹೆಣ್ಣಿನ ಮನಸ್ಸು ನಮಗೆ ಗೊತ್ತೇನು? ಏನು ಮಾಡಿದರೆ ಅದನ್ನು ಹಿಡಿಯ ಬಹುದು ತಿಳಿಯುವುದೇನು?" ಎಂದು ಯೋಚನೆ ಅಲೆಅಲೆಯಾಗಿ ಬಂತು.

ಆದರೆ ಪ್ರಾಣೇಶನೂ ಘಾಟಿ. ಕಳೆದವನ ಹಂಬಲಿನಲ್ಲಿ ಕೊರಗುತ್ತ ಬಂದವನನ್ನು ನೂಕುವುದು ಸುಲಭವಲ್ಲ ಎನ್ನುವುದನ್ನು ಬಲ್ಲ. ಅಲ್ಲದೆ, ಆಟಕ್ಕೆ ಬಂದು ಅಳುವನ್ನು ಕಾಣುವುದು ತನಗೆ ಇಷ್ಟವಿಲ್ಲದಿದ್ದರೂ, ತನ್ನ ಮಿತ್ರನಿಗಾಗಿ ಸುರಿಯುತ್ತಿರುವ ಕಂಬನಿಗಳಿಂದ ತಾನೂ ಅವನಿಗೆ ಅಷ್ಟು ಜಲಾಂಜಲಿ ಕೊಟ್ಟು ಋಣ ತೀರಿಸಿಕೊಳ್ಳಬೇಕು ಎಂದಿರುವ ನಂತೆ, ಅಷ್ಟು ಹೊತ್ತು ಸುಮ್ಮನಿದ್ದ.

ಅನಂತರ ಮೆತ್ತಗೆದ್ದು ಹೋಗಿ, ತಣ್ಣೀರಿನಲ್ಲಿ ಅದ್ದಿದ ಟವಲು ತಂದು, ಅವಳ ಕೈ ಬಿಡಿಸಿ, ಮುಖವನ್ನೆಲ್ಲಾ ತೊಳೆದು, ಒಂದು ಸಲ ಸುಖವಾಗಿ ಕೆನ್ನೆಗೆ ಕೆನ್ನೆ ಇಟ್ಟು, "ನಿನ್ನ ರಾಜಾ ಹೋದ, ನಿಜ. ನಿನ್ನ ಲುಚ್ಚಾನೂ ನಿನಗಾಗಿ ಸಾಯಬೇಕೇನು? ಹೋದವನಿಗಾಗಿ ಅಳುತ್ತ, ಇದ್ದವನನ್ನೂ ಸಾಯಿಸುತ್ತೀಯೇನು? ನನಗೆ ಗೊತ್ತು. ನಿನ್ನೆ ಮಧ್ಯಾಹ್ನ ಮೂರು ಗಂಟೆಗೆ ಇನ್‌ಷ್ಯೂರೆನ್ಸ್ ಚೆಕ್ ಬಂತು. ಸರಿ. ಅಳು ಶುರುವಾಯಿತು. ಸಂಜೆಗೆ ಫೋಟೋ ಬಂತು. ಜಡಿ ಮಳೆ ಹೋಗಿ ಕುಂಭದ್ರೋಣ ಕರೆಯಿತು. ಇನ್ನು ಒಂದು ಗಳಿಗೆ ಬೆಳಕು ಕಾಣಲಿ," ಎಂದು ಇನ್ನೂ ಏನೇನೋ ಮೋಹಕವಾದ ಮಾತುಗಳನ್ನು ಹೇಳಿ, ಅವಳನ್ನು ತಬ್ಬಿಕೊಂಡು, "ನೋಡೋ, ನಿನಗೊಂದು ಒಳ್ಳೆಯ ಸುದ್ದಿ ಹೇಳಬೇಕು ಅಂತ ಬಂದರೆ, ನೀನು ಹೀಗೆ ಪಾಳು ಭಾವಿಯಲ್ಲಿ ಬಿದ್ದು ಹೋಗಿದೀಯಲ್ಲೋ?" ಎಂದು ಕಿವಿಯಲ್ಲಿ ಪಿಸುಪಿಸು ನುಡಿದನು.

"ಇನ್ನು ಈ ಜನ್ಮದಲ್ಲೇ ಒಳ್ಳೆಯ ಸುದ್ದಿ ಕೇಳುವಂತಿಲ್ಲ."

"ನಿಜವಾಗಿ ಕಣೋ."

"ಏನು ?"

"ನಿಮ್ಮಮ್ಮನ ಅಡ್ರೆಸ್ಸು ಗೊತ್ತಾಯಿತು."

ಆ ಹೃದಯ ವೇದನೆಯಲ್ಲೂ, ಅಂಗಾಂಗಗಳನ್ನೆಲ್ಲ ತುಂಬಿಹೋಗಿರುವ ಆ ಅಳುವಿನ ಒತ್ತಡದಲ್ಲೂ, ಅವಳ ಮುಖ ಅವನ ಕಡೆ ತಿರುಗಿತು. ಸೊಕ್ಕಿದ್ದರೂ, ಸೊರಗಿದ್ದರೂ, ಕೊಂಚವಾದರೂ ತಿಳಿಯಾದ ದನಿಯಿಂದ "ನಿಜವಾಗಿ ?" ಎಂದಳು.

"ನಿಜವಾದರೆ ಏನು ಕೊಡುತ್ತೀ ?"

"ನೀನು ಏನು ಹೇಳಿದರೆ ಅದು ಮಾಡುತ್ತೀನಿ"

"ಈ ಅಳು ಬಿಡುತೀಯೋ ?"

"ಅದು ಸಾಧ್ಯವಿಲ್ಲ. ಅದು ತಾನಾಗಿ ಬಿಟ್ಟರೆ ನಾನು ಹೇಳಲಾರೆ. ನಾನಾಗಿ ಬಿಡುವುದಿಲ್ಲ. ಆ ರಾಜನ್ನ ನೆನೆಸಿಕೊಂಡು ಅಳುವುದರಲ್ಲಿ ನಿನ್ನ ಮಗ್ಗುಲಲ್ಲಿ ಮಲಗಿಕೊಳ್ಳುವುದಕ್ಕಿಂತ ಹೆಚ್ಚಿನ ಸುಖವಿದೆ. ಅದು ನಾನು ಬಿಡುವುದಿಲ್ಲ."

"ಹೋಗೋ, ಮಂಕೇ, ಮೂರ್ತಿಗೆ ಮೂರ್ತಿ ಇಟ್ಟು ಮಂಗಳಾರತಿ ಮಾಡಿ ಪ್ರಸಾದ ಹೊಡೆಯೋ ಅಂತ ನೀನೇ ನನಗೆ ಹೇಳಿದ್ದೆ. ನೆನೆಪಿದೆಯೋ ? ಪಚ್ಚಿ ಸತ್ತಾಗ ಏನಂದೆ? ಅವಳು ನಿನಗೆ ಪಂಚಪ್ರಾಣವಾಗಿದ್ದಳು; ನಾನು ನಿನಗೆ ದಶಪ್ರಾಣವಾಗಿರುತೀನಿ ಬಿಡೋ ಅಂತ ನನ್ನ ಸಂತೈಸಿದ್ದು ಮರೆತೆ ಅಲ್ಲವೆ ?"

"ಲೋ ಚಂಡಿಸಬೇಡ ಕಣೋ! ಆಗ, ಅದು ನಿನ್ನ ದುಃಖ, ಈಗ ಇದು ನನ್ನ ದುಃಖ."

"ಇರಲಿ, ನುಂಗು. ಇಕೋ ಇದೇ ಪ್ರಮಾಣ. ರಮೇಶ್ ನಿನ್ನಲ್ಲಿದ್ದ ಹಾಗೇ, ಅದಕ್ಕಿಂತ ಹೆಚ್ಚಾಗಿ ನಾನು ಇರದಿದ್ದರೆ ಕೇಳು."

"ಆ ಪ್ರಾರಬ್ಧ ಗೌಡನೂ ಅದೇ ಮಾತು ಹೇಳಿ ಹೋದ. ನೀನೂ ಅದೇ ಹೇಳತಿದ್ದೀಯ. ಆದರೂ ಈ ಕಣ್ಣು, ನಿನ್ನ ನೋಡಿದಾಗ

ಇವನು ರಮೇಶನಲ್ಲ ಅನ್ನುತ್ತೆ. ಈ ಕಿವಿ ನಿನ್ನ ಸದ್ದು ಕೇಳಿದಾಗ ಇದು ರಮೇಶನ ಸದ್ದಲ್ಲ ಅನ್ನುತ್ತೆ. ಏನು ಮಾಡಲಿ ಹೇಳು."

"ಇನ್ನೂ ಅಷ್ಟು ದೂರ ಹೇಳು. ಅಲ್ಲಿಗೇ ಏಕೆ ನಿಲ್ಲಿಸುತ್ತೀಯೆ?"

"ಇದಕ್ಕೆ ನಿನ್ನ ಲುಚ್ಛಾ ಅನ್ನೋದು, ಹಲ್ಕಾ ಅನ್ನೋದು."

ಇನ್ನೂ ಅಷ್ಟು ಮಾತಾಯಿತು. ಕೊನೆಗೆ ಮೇರಿ ಅವನೊಡನೆ ಅವನ ರೂಮಿಗೆ ಹೋದಳು. ಅವಳ ದೃಷ್ಟಿಯಲ್ಲಿ ಆ ರೂಮು ಇನ್ನು ಮೇಲೆ ದೇವರ ಮನೆ. ಅವಳು ಚರ್ಚಿಗೆ ಹೋಗಿ ಹದಿನೈದು ವರ್ಷ ವಾಗಿತ್ತು. ಈಗ ಚರ್ಚ್ ಮನೆಗೆ ಬಂದಿದೆ. ಲೋಕದ ಪಾಪಕ್ಕಾಗಿ ಬಲಿಯಾದ ಜೀಸಸ್ ಅವಳಿಗೆ ಅರ್ಥವಾಗಿರಲಿಲ್ಲ. ಈಗ ರಮೇಶನಿಗಾಗಿ ತನ್ನ ಜೀವನದೊಂದು ಭಾಗ ಬಲಿಯಾಗಿ, ಮೀಸಲು ಮಾಡಲು ಮೇರಿ ಸಿದ್ಧಳಾಗಿದ್ದಾಳೆ.

ತಾಯಿಯ ಸುದ್ದಿ ಕೇಳಿ ಅವಳಿಗೆ ಸಂತೋಷವಾಯಿತು. ಅವಳಿಗೆ ಸಂತೋಷವಾದರೆ, ಸಾಕಿದ ನಾಯಿ ಒಲಿದ ತನ್ನ ಯಜಮಾನನ ಬಳಿ ಆಡುವ ಹಾಗೆ ಆಡಿ ಅವಳು ಗೋಳು ಹುಯ್ದು ಕೊಳ್ಳಬೇಕು. ಆದರೆ, ಅವಳ ಸಂತೋಷ ಇಂದು ಬೇಸಗೆಯ ನದಿ ಯಾಗಿದೆ. ಏನೋ ಅಲ್ಲಲ್ಲಿ ಬೇಕೇಂದವರು ಮರಳು ತೋಡಿ ಹಾಕಿದರೆ ಅದು ಅಷ್ಟು ಅಗಲ ತಿಳಿನೀರು ಸಿಕ್ಕಿ ಸ್ನಾನಾದಿಗಳಿಗೆ ಅನುಕೂಲವಾಗು ವಂತೆ ಅವಳ ಸ್ಥಿತಿಯಾಗಿದೆ. ಪ್ರಾಣೇಶನಿಗೆ ಅದು ತಿಳಿಯದೆ ಇಲ್ಲ. ಆದರೆ ಅವನೂ ಅದಕ್ಕೆ ಇಂದು ಸಿದ್ಧನಾಗಿದ್ದಾನೆ.

ಮೇರಿಯು ತಾಯಿಯ ಸುದ್ದಿಯನ್ನು ಕೇಳಿದಳು. ಅವಳು ಅನಂತಶಯನದಲ್ಲಿ ಇರುವುದನ್ನು ತಿಳಿದು ತಾನೂ ಅಲ್ಲಿಗೆ ಹೋಗಿ ಬರ ಬೇಕು ಎಂದು ಗೊತ್ತುಮಾಡಿದಳು.

"ನಿನ್ನ ಜೊತೆಗೆ?"

"ನೀನು ಬಾ."

"ನಾನು ಬರಬಾರದು."

"ಯಾಕೆ ?"

"ನಿಮ್ಮ ಅಮ್ಮನಿಗೆ ನನ್ನ ಗುರುತು ಇದೆ."

''ಹಾಗಂದರೆ ?''

"ನಿಮ್ಮ ಅಮ್ಮ ನನಗೆ ಅಕ್ಕನ ವರಸೆ.''

ಮೇರಿಗೆ ಅದನ್ನು ಕೇಳಿ ಆಶ್ಚರ್ಯವಾಗಿ ಹೋಯಿತು. ಹಿಂದಿನ ಕಥೆಯೆಲ್ಲ ಹೇಳು ಎಂದು ಬಲವಂತಮಾಡಿದಳು. ಅವನೂ ನಾಜೋಕಾಗಿ ನಿಜವೂ ಇರಬೇಕು ಸುಳ್ಳೂ ಆಗಿರಬೇಕು ಅಂತಹವೊಂದು ಕಥೆಯನ್ನು ಸೃಷ್ಟಿಸಿಕೊಂಡು ಅವಳಿಗೆ ಪ್ರಿಯವಾಗುವಂತೆ ಹೇಳಿದನು.

''ನಿಮ್ಮ ಅಜ್ಜಿ ಮೈಸೂರಲ್ಲಿ ಇದ್ದಳು. ಅವಳೂ ಹೀಗೇ ಸೊಸೈಟಿ ಸೆಕ್ರೆಟರಿ. ಅದರಲ್ಲಿ ಒಬ್ಬ ಸಿಕ್ಕಿ ಅವಳಿಗೆ ಕೈಕೊಟ್ಟ. ಕೊನೆಗೆ ವಿಷವೂ ಕೊಟ್ಟ. ಸಾಯುವ ಕಾಲದಲ್ಲಿ ಅವಳಿಗೆ ನಮ್ಮ ತಂದೆ ಸೇವೆ ಮಾಡಿದರು. ತನ್ನಲ್ಲಿ ಇದ್ದದ್ದು ಅವರ ಕೈಯಲ್ಲಿ ಇಟ್ಟು ನನ್ನ ಮಗಳಿಗೆ ಕೊಡು ಅಂದಳು. ನಿಮ್ಮ ಅಮ್ಮ ನಿಮ್ಮ ಅಮ್ಮ. ಕೇಳಬೇಕೆ ? ಒಂದು ದಿನ ಬೆಳಗಾಗ ಮನೆಗೆ ಬೀಗಬಿದ್ದಿತ್ತು. ತಿರುಗಿ ಮಂಗಳೂರಿಂದ ಏನೋ ನನಗೆ ಹಣಬೇಕು ಅಂತ ಬರೆದಳು. ಕಳುಹಿಸಿದರೋ ಇಲ್ಲವೋ ನಾನು ಕಾಣೆ. ಅಲ್ಲಿಂದ ಮುಂದೆ ಅವಳ ಸುದ್ದಿ ತಿಳಿಯಲಿಲ್ಲ. ಆಮೇಲೆ ಒಂದು ದಿನ ಹಿಂದಿನ ಕಾಗದ ಪತ್ರ ಹುಡುಕುತ್ತಿರುವಾಗ ನಮ್ಮ ತಂದೆ ಬರೆದಿಟ್ಟಿದ್ದು ಒಂದು ದೂರು ಕಾಗದ ಸಿಕ್ಕಿತು. ಅದರಲ್ಲಿ ಇಂಥವಳು ನನ್ನಲ್ಲಿ ಇಟ್ಟಿದ್ದ ಹಣ ಇಷ್ಟು ಬಂದಿತ್ತು. ಈ ಕಥೆ ನಮ್ಮ ತಾಯಿ ಹೇಳುತ್ತಿದ್ದುದೂ ನೆನಪಾಯಿತು. ಆ ಸದ್ಯದಲ್ಲಿಯೇ ರಮೇಶನೂ ತೀರಿಕೊಂಡದ್ದು. ಆಗ ನನಗೂ ನನ್ನ ಸರದಿ ಯಾವಾಗಲೋ ಏನೋ ಅನ್ನಿಸಿ, ನಟೇಶನಿಗೆ ಹೇಳಿ ಹುಡುಕಿ ಬಾ ಅಂತ ಕಳುಹಿಸಿದೆ. ಅವನು ಹೋಗಿ ಪತ್ತೆಮಾಡಿಕೊಂಡು ಬಂದ.

"ಅವನಿಗೆ ಪ್ರೆಸೆಂಟ್ ಏನು ಕೊಟ್ಟೆ ?''

"ಒಂದು ನೂರು ರೂಪಾಯಿ ಕೊಟ್ಟೆ"

"ಇನ್ನಷ್ಟು ಕೊಟ್ಟಿದ್ದರೆ ಏನು ನಿಮ್ಮಪ್ಪನ ಗಂಟು ಹೋಗುತ್ತಿದ್ದುದು ?''

"ಈಗ ತಾನೇ ಏನಾದ್ದು? ಎಷ್ಟು ಕೊಡಬೇಕು ಹೇಳು. ಕೊಡೋಣ."

"ಛೂ, ನೀನು ಬಹಳ ಜಿಪುಣ, ನೀನು ನೂರು ಕೊಟ್ಟಿದ್ದು ಒಂದು ಸಾವಿರ. ಸಾಕು—ನಾನು ಬೇರೆ ಕೊಡಿಸ್ತೇನೆ."

"ನಾನು ಜಿಪುಣ. ನೀನು ಬಹು ಧಾರಾಳಿ. ಕೊಡಿಸ್ತೀಯೆ. ಇನ್ನು ಆ ಗೌಡನಿಗೆ ಗಂಟುಬಿದ್ದು ಕಕ್ಕಿಸ್ತೀಯೆ."

"ಕೊಡಲೇಳೋ, ಆ ಸೂಳೇಮಗನಿಗೆ ಮಕ್ಕಳಿಲ್ಲ ಮರಿಯಿಲ್ಲ. ನಟೇಶನಿಗೆ ಮನೆ ತುಂಬಾ ಮಕ್ಕಳು. ಕೊಡಲಿ. ಒಂದು ಸಾವಿರ ಕೊಡಿಸ್ತೀನಿ ನೋಡು. ಅದಿರಲಿ, ಅವಳು ನಮ್ಮ ಅಮ್ಮ ಅಂತ ತಿಳಿದದ್ದು ಹೇಗೆ ?''

"ಇದೋ ತಮ್ಮ ಗುಲೇಬಕಾವಲಿ ಮುದ್ರೆ.''

"ಅದು ಅವಳಿಗೂ ಗೊತ್ತಿದೆಯೇನು ?''

ಅವಳು ನೀನು ಇಲ್ಲಿರುವುದು ಕಾಣಳು. ನಟೇಶನಿಗೂ ತಿಳೀದು. ಹೀಗೆ ಒಂದು ಮಗು ಹೆತ್ತು ಅದನ್ನು ಮಿರ್ಜ ಅವರಿಗೆ ಕೊಟ್ಟಳಂತೆ. ಆ ಹಾಳು ಮಗು ಹುಟ್ಟಿ ಹಾದರಗಿತ್ತಿಯಾಗಿ ಯಾವನೋ ಕಟ್ಟಿಕೊಂಡು ಓಡಿ ಹೋದಳಂತೆ. ಮಿರ್ಜ ಅವರೂ ಪ್ರಾರಬ್ಧ ಕಳೆಯಿತು ಎಂದು ಸುಮ್ಮನಾದರಂತೆ. ಅದು ಈಗ ನನಗೆ ಗಂಟು ಬಿದ್ದಿದೆಯಂತೆ. ನಟೇಶ ಎಡಭುಜದ ಮೇಲೆ ಮಚ್ಚೆ ಅಂದ, ನನಗೆ ಷಾಕ್ ಹೊಡೆದ ಹಾಗಾಯಿತು.''

ಮೇರಿಯು ಏನೋ ಯೋಚನೆಮಾಡುತ್ತಿದ್ದಳು : "ಲೋ ಲುಚ್ಚ, ಈ ಸೂಳೇಮಗ ರಮೇಶ್‌ಗೆ ನಾನೇಕೆ ಇಷ್ಟು ಬಡಿದುಕೊಳ್ಳುತ್ತೇನೆ ಗೊತ್ತೇನು ?''

"ಸರಿ. ಹೆಣ್ಣು ಗಂಡಿಗೆ ಬಡಕೊಳ್ಳೋದು ಇನ್ನ್ಯಾಕೆ? ಗೊತ್ತೇ ಇದೆ."

"ನಿನ್ನ ಹಲ್ಕಾ ಬುದ್ಧಿ ಬಿಡೋದೇ ಇಲ್ಲವಲ್ಲ. ಅದೆಲ್ಲ ಅಲ್ಲ. ಕೇಳು. ನನ್ನ ಮಿರ್ಷನಿಂದ ಹಾರಿಸಿಕೊಂಡು ಹೋದನಲ್ಲ ಅವನ ಹಾಗೇ ಇದ್ದ ರಮೇಶ್, ಅದೇ ಕಣ್ಣು, ಅದೇ ಮೂಗು ಅದೇ ಮೊಕ, ಅದೇ ಮೈಭಾವ, ಅವನ ಮಗ್ಗುಲಲ್ಲಿದ್ದರೆ ಆ ಹಿಂದಿನ ಮೋಹವೆಲ್ಲ ಮರಕಳಿಸುತ್ತಿತ್ತು."

"ಅವನಿಗೂ ಹೇಳಿದ್ದೆಯೋ?"

"ಹೇಳದೆ ಇದ್ದನೆ? ಅದಿರಲಿ. ಒಂದು ನೆಮ್ಮದಿಯಾಯಿತು. ಇನ್ನು ಮುಂದೆ ನಾನು ಕ್ರಿಶ್ಚಿಯನ್ ಆಗಿರಬೇಕಾಗಿಲ್ಲ. ಹಿಂದೂ ಆಗಿ ಹೋಗ್ತೇನೆ."

"ಏನು ಆರ್ಯಸಮಾಜಕ್ಕೆ ಸೇರುತೀಯೋ?"

ಅದಲ್ಲವೋ? ಲೋಕದವರು ನನ್ನ ಏನಂತಾರೆ? ಪಾಪಿ ಸೂಳೆ ಮುಂಡೆ, ಅಂತಾರೆ. ನಿಮ್ಮ ಶಾಸ್ತ್ರದ ಪ್ರಕಾರ ನಮ್ಮ ಕುಲದ ಕಸಬು ನಾನು ಮಾಡಿದ ಹಾಗಾಯಿತು.. ನಮ್ಮ ಅಮ್ಮ ಸೂಳೆ. ಅವರಮ್ಮ ಸೂಳೆ. ನಾನೂ ಸೂಳೆ. ಬಿಡು ಇನ್ನು ಪಾಪದ ಭೀತಿಯಿಲ್ಲ."

"ಈಗ ಒಂದು ಗಳಿಗೆ ಮುಂಚೆ ವೈರಾಗ್ಯದಲ್ಲಿ ಮುಳುಗಿ ಹೋಗಿದ್ದೆ. ನಾನೂ ಅದನ್ನು ನಂಬಿ, ಇನ್ನೇನು ಗತಿ ಅಂತಿದ್ದೆ."

"ಥೂ, ನಿಮ್ಮ ಗಂಡುಸರ ಬಾಳಿಗೆ ಬೆಂಕಿಹಾಕ. ನಮ್ಮ ನಾಯಿ ಜರ್ನ್ ನೀನೂ ಎರಡೂ ಒಂದೆ. ಹೆಣ್ಣು ಸಿಕ್ಕಿತು ಅಂದರೆ, ಅದರ ಜಾತಿ ಕೆಡಿಸುವವರೆಗೂ ಬಿಡಿತೀರೇನೋ? ಪ್ರಾರಬ್ಧಗಳು. ಇವೊತ್ತೇನೋ ಇನ್ನು ಮೇಲೆ ಗಂಡಿನ ಮೈ ಕೂಡ ಮುಟ್ಟೋಲ್ಲ ಅಂತ ದೃಢಮಾಡಿದ್ದೆ."

"ಈಗ ಬಲಿ ಒಪ್ಪಿಸಿಕೊಳ್ಳುತ್ತಿದ್ದೀಯೆ?"

"ಯಾರೂ ಇಲ್ಲದಿದ್ದರೆ ನನ್ನಂತಹ ಪತಿವ್ರತೆಯೇ ಇಲ್ಲ."

“ನೀನು ಮಹಾ ಪತಿವ್ರತೆ. ನಾನೂ ಕೂಡ ಸಾಕ್ಷಿ ಹೇಳುತ್ತೇನೆ. ಪ್ರಮಾಣ ಮಾಡುತ್ತೇನೆ. ಆದರೆ, ವಿತ್ ಎ ಮಿನಿಮಮ್ ನಂಬರ್ ಆಫ್ ಹಸ್‌ಬೆಂಡ್ಸ್.”

“ನೀನು ಅಂತೀಯೆ. ನಿನ್ನೆ ರಾತ್ರಿ ಕೂಡ ಊಟ ಮಾಡಲಿಲ್ಲವೋ?”

“ಇದ್ದರೂ ಇರಬಹುದು. ನೀನು ಇವೊತ್ತು ಹೆಣ ಇದ್ದ ಹಾಗೆ ಇದ್ದೀಯೆ. ಏಳು. ಹಣ್ಣು ತೆಗೆದುಕೊಂಡು ಬಾ ಒಂದಿಷ್ಟು ತಿನ್ನಿಸಿ ಹೋಗುತ್ತೇನೆ.”

“ನೀನೇ ತಂದರೆ ತಿಂತೀನಪ್ಪ”

ಎದುರಿಗಿದ್ದ ಕಪ್ ಬೋರ್ಡಿನಲ್ಲಿ ಅರ್ಧ ಡಜ಼ನ್ ಸೇಬಿನ ಹಣ್ಣು ಇತ್ತು. ಪ್ರಾಣೇಶನು ಎಲ್ಲಾ ತಂದ.

“ಹೆಚ್ಚು ಕೊಡಬೇಕೋ?”

“ಇನ್ನು ಹೇಗೆ ಕೊಡತೀಯೆ?”

“ಹೀಗೆ”

ಒಂದು ಹಣ್ಣು ಕಚ್ಚಿದ. ತುಂಡು ತೆಗೆದು ಅವಳ ಬಾಯಿಗಿಟ್ಟ. ಹೀಗೇ ಇಬ್ಬರೂ ಸೇರಿ ಅಷ್ಟು ಹಣ್ಣು ತಿಂದರು. ಹಣ್ಣಿನ ಜೊತೆಗೆ ಒಂದು ಬಿಸ್ಕಟ್ ಡಬ್ಬಾ ಮುಗಿಯಿತು. ಅದರ ಜೊತೆಗೆ ಒಂದಿಷ್ಟು ಛಾಂಪೇಯರ್ನ್. ಅದಷ್ಟೂ ಆದಮೇಲೆ ತಾನೇ ಎದ್ದು ಸೊಗಸಾದ ಟೀ ಮಾಡಿ ಅವನ ಜೊತೆಯಲ್ಲಿ ತಾನೂ ಕುಡಿದಳು.

“ಲೋ, ಲುಚ್ಛಾ, ಹೀಗೇನೇನೋ ನೀನು ಕೇಸು ಗೆಲ್ಲೋದೂ ಕೂಡ?”

“ಹಾಗಂದರೆ?”

“ಪ್ರಾಣಬಿಡೋಕು ಸಿದ್ಧವಾಗಿ ಈ ಲೋಕದಿಂದ ಆಚೆಗೆ ಒಂದು ಹೆಜ್ಜೆ ಇಟ್ಟಿದ್ದವಳನ್ನ ನಿನಗೆ ಬೇಕಾದ ಹಾಗೆ ಕುಣಿಸಿಬಿಟ್ಟೆ.”

"ಯೂ ಫೂಲ್, ನೀನು ಬುದ್ಧಿಯಿಲ್ಲದೆ ಫೂಲ್ ಆಗಿದ್ದೆ. ನಾನು ನಿನ್ನ ಫೂಲರಿ ತೋರಿಸಿದೆ. ನೀನು ನಾರ್ಮಲ್ ಆದೆ."

"ಇಲ್ಲ ಕಣೋ, ನಾನು ರಮೇಶನ್ನ ಮರೆಯೋಲ್ಲ. ನೋಡುತಿರು."

"ಆಯಿತು. ರಮೇಶ್ ರಮೇಶ್ ಅಂತ ನಿಮ್ಮಮ್ಮನ ವಿಚಾರ ಏನು ಮಾಡುತ್ತೀಯೆ ?"

"ಹೋಗಿಬರುತ್ತೇನೆ."

"ಜೊತೆಗೆ ?"

"ನೀವು ಯಾರೂ ಬರದಿದ್ದರೆ ನಟೇಶ್ ಕರೆದುಕೊಂಡು ಹೋಗುತ್ತೇನೆ."

"ಅವನ ಹೆಂಡಿತಿ ಬಡಕೊಳ್ಳಿ"

"ಯಾಕಪ್ಪಾ, ಅವಳಿಗೆ ಗೊತ್ತಿಲ್ಲವೆ ಬಡವರ ಮೊರಾಲಿಟ ಯಾವಾಗಲೂ ಸೇಫ್" ಅಂತ.

"ಅದೆಲ್ಲ ಬೇಡ. ಗೌಡನ್ನ ಕರೆದುಕೊಂಡು ಹೋಗು."

"ಸಾಧ್ಯವಾದರೆ ಅವಳನ್ನ ಕರೆದುಕೊಂಡುಬಂದು ಬಿಡಲೇನು ?"

"ಅದೇಕೆ ?"

"ಅವಳಿಗೂ ಈಗ ನಲವತ್ತೈದು ಐವತ್ತು ವರುಷ ಇರಬೇಕು. ಅವಳು ಅಲ್ಲಿ ಯಾಕೆ ಸಾಯಬೇಕು ? ಇಲ್ಲಿ ನನ್ನ ಹತ್ತಿರಲೇ ಇರಲಿ. ಏನೋ ದುಡ್ಡುಕಾಸು ಅಂತ ಯೋಚಿಸಬೇಕಾಗಿಲ್ಲ."

"ಅದಕ್ಕೇನು ಯೋಚನೆ. ಎರಡು ಬ್ಯಾಂಕಿದೆ. ಇನ್ನೂ ಒಂದೋ ಎರಡೋ ಬರುತ್ತೆ ?"

"ಅದೆಲ್ಲ ಇಲ್ಲಪ್ಪಾ! ನಾನು ನೂಕಿದರೂ ಗೌಡ ಹೋಗೋಲ್ಲ. ನೀನು ಕಳ್ಳ. ನೀನೇನಾದರೂ ಹೈಕೋರ್ಟು ಜಡ್ಜಿ ಆದರೆ, ಬರುತೀಯೋ ಇಲ್ಲವೋ ಹೇಳೋಕಾಗೊಲ್ಲ. ಇನ್ನು ಮೇಲೆ ನಾನೂ ಹಿಂದಿನ ಹಾಗೆ

ಇರೋಲ್ಲ. ನಾನಿನ್ನಮೇಲೆ ಸೋಷಿಯಲ್ ಸರ್ವೀಸ್ ಷುರು ಮಾಡು ತೀನಿ.''

"ಮಾಡು. ನಾನೂ ನಿನ್ನ ಜೊತೇಗಿರುತೀನಿ. ಆಯಿತು ಯಾವೊತ್ತು ಹೊರಡುತೀಯೆ ?''

"ಗೌಡ ನಾಳೆನಾಡಿದ್ದರಲ್ಲಿ ಬರಬೇಕು. ಅವನು ಬರಲಿ"

ರಾತ್ರಿ ಒಂಭತ್ತು ಗಂಟೆಯಾಗಿತ್ತು. ಪ್ರಾಣೇಶ್ ಹೊರಟ. ''ಏಳು ಪುಣ್ಯಾತ್ಮಗಿತ್ತಿ. ಊಟಮಾಡು. ನಾನೂ ಆಮೇಲೆ ಹೋಗು ತ್ತೇನೆ.'' ಎಂದು ಅವಳನ್ನು ಎಬ್ಬಿಸಿ, ಊಟಮಾಡಿಸಿ ತಾನು ಮನೆಗೆ ಹೋದ.

ಮೇರಿ ಅಂದಿನ ರಾತ್ರಿಯೆಲ್ಲ ಏನೋ ಯೋಚನೆಯಲ್ಲಿದ್ದಳು. ಹಿಂದಿನ ರಾತ್ರಿ ಸತ್ತ ರಮೇಶನ ಯೋಚನೆ; ಇಂದು ಬದುಕಿರುವ ತಾಯಿ ಯನ್ನು ಕಾಣುವ ಯೋಚನೆ. ಮನುಷ್ಯನ ಮನಸ್ಸನ್ನು ಮಾಡಿದ ದೈವ ಹೀಗಿರಲೆಂದೇ ಈ ಮನಸ್ಸನ್ನು ಇಷ್ಟು ಚಪಲವಾಗಿ ಮಾಡಿಟ್ಟಿದ್ದಾನೋ ಏನೋ? ಅಥವಾ ಈ ಮನಸ್ಸು ಎನ್ನುವುದು ಒಂದು ನೀರಿನ ಮೇಲೆ ಇರುವ ಮೂಗಿಲ್ಲದ ದೋಣಿಯ ಹಾಗೆ ಗಾಳಿ ಹೊಡೆದತ್ತ ಹೋಗುವುದೇ ಸ್ವಭಾವವಾಗಿ ಉಳ್ಳದ್ದೋ? ಅಥವಾ ಈ ಮನಸ್ಸು ಎನ್ನುವ ಚೆಂಡನ್ನು ಯಾರೋ ಆಡುತ್ತಿದ್ದು ಅವರು ಹೊಡೆದಾಗ ಕೆಳಗೆ ಬಿದ್ದು, ಮತ್ತೆ ಚಿಮ್ಮಿ ಮೇಲಕ್ಕೆ ನೆಗೆದು, ಮತ್ತೆ ಏಟು ತಿಂದು ಕೆಳಕ್ಕೆ ಬೀಳುತ್ತಾ ಒದ್ದಾಡುತ್ತಿರುವುದೋ? ಇರಬೇಕು. ಆದರೆ ಮನಸ್ಸನ್ನು ಪುಟ ಚೆಂಡಾಡುವ ವ್ಯಕ್ತಿ ಯಾರೋ ಅದು ತಿಳಿಯದು ಅಷ್ಟೆ; ಇಲ್ಲದಿದ್ದರೆ, ಕೆಲವು ಗಂಟೆಗಳ ಕಾಲದಲ್ಲಿ, ಪಾಪ, ಈ ಹೆಣ್ಣಿನ ಮನಸ್ಸು ಇಷ್ಟೊಂದು ವಿಧವಾಗಿ ಹೋಗಬೇಕೆ?

ಅವಳಿಗೂ ಆಶ್ಚರ್ಯ! ದುಃಖಸಾಗರದಲ್ಲಿ ಮುಳುಗಿದ್ದ ತಾನು ಪ್ರಾಣೇಶನು ಬರುತ್ತಲೂ ಬದಲಾಯಿಸಿದ್ದೇನು? ಅಥವಾ ತನ್ನ ದುಃಖ ವನ್ನು ನೋಡಿ ಸಹಿಸಲಾರದೆ ರಮೇಶನ ಆತ್ಮವೇ ಪ್ರಾಣೇಶನ ದೇಹದಲ್ಲಿ

ಸೇರಿಕೊಂಡು ಬಂದು ತನ್ನನ್ನು ಸಂತೈಸಿತೋ? ಜೊತೆಗೆ ತಾಯಿಯ ಸುದ್ದಿ ಬಂದಿದೆ. ತನ್ನಂತಹ ಪೆಚ್ಚು ಇನ್ನು ಉಂಟೆ? ಅವಳು ಏನು ಮಾಡುತ್ತಿದ್ದಾಳೆ, ಕೇಳಬೇಡವೆ? ತಾನು ಹೋದರೆ ಅವಳೇನಾದರೂ ಸೇರಿಸದೆ ಹೋದರೆ ಏನು ಮಾಡಬೇಕು? ಆದರೆ ಪ್ರಾನ್ಸೇಶನು ಹೇಳಿದ್ದರೆ ಅವಳು ತನ್ನ ನಡತೆಯ ವಿಷಯವಾಗಿ ಅಸಮಾಧಾನ ಪಡುವಂತಿಲ್ಲ. ಇನ್ನು ಐಶ್ವರ್ಯ, ಬಡತನಗಳು. ತಾನೇನೂ ಬಡವಳಲ್ಲ. ಆದರೂ ಸುಮಾರು ಏಳೆಂಟು ಸಾವಿರ ಬಾಳುವ ಮನೆ. ಸುಮಾರು ಐದಾರು ಸೇರು ಚಿನ್ನವಿದೆ. ಒಂದು ಮಣದಷ್ಟು ಬೆಳ್ಳಿ ಇದೆ. ಕಿವಿಯ ಓಲೆ ಸುಮಾರು ಸಾವಿರ. ತನ್ನ ಸೀರೆಕುಪ್ಪಸಗಳು ಏನಿಲ್ಲವೆಂದರೂ ಎರಡು ಸಾವಿರಕ್ಕೆ ಮೋಸವಿಲ್ಲ. ಈಗ ತಾನೇ ರಮೇಶನ ಇನ್ಷ್ಯೂರೆನ್ಸ್ ಹಣ ಹತ್ತು ಸಾವಿರ ಬಂದಿದೆ. ತಾನು ಬಡವಳು ಹೇಗಾದೆನು?

ತಾಯಿ ತನ್ನನ್ನು ಇನ್ನೇಕೆ ತಿರಸ್ಕರಿಸಬೇಕು? ಮತದ ವಿಚಾರ? ಬಹುಶಃ ಅವಳು ಒಳ್ಳೆಯ ಭಕ್ತಳಾಗಿದ್ದಾಳು. ನಾನೀಗ ಸೈತಾನನ ಭಕ್ತಳಾಗಿದ್ದೇನೆ. ಅವಳು ಕ್ರೈಸ್ತನ ಭಕ್ತಳಾಗಿದ್ದಾಳೆ. ಸೈತಾನನು ಕ್ರೈಸ್ತನಿಗೆ ಸೋತನಂತೆ. ಅದರಿಂದ ಅವಳ ಕ್ರಿಸ್ತ ನನ್ನ ಸೈತಾನನ್ನು ಸೋಲಿಸಿ ತನ್ನ ಭಕ್ತನನ್ನಾಗಿ ಮಾಡಿಕೊಂಡರೆ ನಾನೇನು ಬೇಡ ಅನ್ನುವುದಿಲ್ಲ ಅಂದರೆ, ಆಯಿತು.

ಆಯಿತು. ಅವಳೂ ಹೆಂಗುಸು. ಯಾರ ಅಧೀನದಲ್ಲಿರುವಳೋ? ಅವರೆಂಥವರೋ? ಆದರೂ ತಾಯಿ. ಹೆತ್ತ ಕರುಳು. ಹೋಗಲೇಬೇಕು. ನನ್ನವರು ತನ್ನವರು ಎನ್ನುವರಿದ್ದರೆ ಎಷ್ಟು ಚೆನ್ನಾಗಿತ್ತು. ಈಗ ನನ್ನ ಜೊತೆಯಲ್ಲಿ ಯಾರು ಬಂದರೆ ತಾನೇ ಏನು? ಇವನಾಗಲಿ, ಅವನಾಗಲಿ, ನನ್ನವನು ಎಂದು ಹೇಳಿಕೊಳ್ಳುವುದಕ್ಕೆ ಉಂಟೆ? ಅಥವಾ ನೋಡುತ್ತಿದ್ದ ಹಾಗೆಯೇ ಸಂಬಂಧ ತಿಳಿದುಹೋಗುವುದೇನೋ?

ಇವೆಲ್ಲ ಸಾಮಾನ್ಯ ವಿಷಯಗಳು. ಮುಖ್ಯ ತಾಯಿಯನ್ನು ನೋಡಬೇಕು. ನೋಡುವುದು. ಇನ್ನೂ ಅನುಮಾನವಾದರೆ ಮೊದಲು

ಒಂದು ಟೆಲಿಗ್ರಾಂ ಕಳುಹಿಸುವುದು. ಕಾಯುವುದು. ಉತ್ತರ ನೋಡಿಕೊಂಡು ಹೊರಡುವುದು. ಹೀಗೆಯೇ ತಾಯಿಯ ಯೋಚನೆಯಲ್ಲಿಯೇ ಇರುವಾಗ ಅವಳಿಗೆ ತಿಳಿಯದೆಯೇ ನಿದ್ದೆ ಬಂತು. ಅವಳು ಏಳುವ ವೇಳೆಗೆ ಒಂಭತ್ತು ಗಂಟೆಯಾಗಿತ್ತು.

ಅವಳದೆಲ್ಲ ಹೊಸ ಸಿಸ್ಟಂ. ಹಾಲಿನವನು ಬಂದು ಬಾಗಿಲಲ್ಲಿ ಕೂಗ ಕೂಡದು. ಹಾಲಿಗಾಗಿ ಒಂದು ಗೂಡು. ಅದಕ್ಕೆ ಎರಡು ಬಾಗಿಲು. ಹೊರಗಿನ ಬಾಗಿಲ ಬೀಗದ ಕೈ ಹಾಲಿನವನ ಹತ್ತಿರ. ಅವನು ಬಂದ ಸೀಲಾದ ಶೀಷೆಯ ಹಾಲನ್ನು ಅದರಲ್ಲಿಟ್ಟು ಬಾಗಿಲು ಹಾಕಿಕೊಂಡು ಹೋಗುವನು. ಅವಳು ತನಗೆ ಬೇಕಾದಾಗ ಆ ಹಾಲು ತೆಗೆದುಕೊಂಡು ಹೋಗುವಳು.

ಅವಳು ತನ್ನ ಕಾಫಿ, ಟೀ, ತಾನೇ ಮಾಡಿಕೊಳ್ಳುವಳು. ಬ್ರೆಡ್, ಬಿಸ್ಕಟ್, ಹಣ್ಣು, ಯಾವಾಗಲೂ ಇದ್ದೇ ಇರುವುದು. ಎಲೆಕ್ಟ್ರಿಕ್ ಸ್ಟೋವ್‌ನಲ್ಲಿ ಕಾಫಿ ಮಾಡಿ ಕುಡಿಯುವ ವೇಳೆಗೆ ನೀರು ಕಾದು ಸ್ನಾನಕ್ಕೆ ಸಿದ್ಧವಾಯಿತು. ತನಗೆ ತೋರಿದಷ್ಟು ಹೊತ್ತು ಆ ಬಿಸಿನೀರಿನ ಟಬ್‌ನಲ್ಲಿ ಕುಳಿತಿದ್ದು ಎದ್ದು ಬರುವಳು. ಗೌಳಿಗನ ಮನೆ ಎಮ್ಮೆಗಳ ಹಾಗೆ ಮೇರಿ ಬದುಕಿದ್ದುದು ಕೇವಲ ಕಾಮದೇವನ ಪೂಜೆಗೆ ಮಾತ್ರ.

ಅವಳ ಭಾರಿಯ ಕೆಲಸ ಎಂದರೆ ನ್ಯೂಸ್ ಪೇಪರ್ ಓದುವುದು. ಆಗೊಂದು ಈಗೊಂದು ಕಥೆ ಓದುವಳು. ಬೇಸರವಾದರೆ ಒಂಟಿಯಾಗಿ ತೋರಿದಷ್ಟು ದೂರ ವಾಕಿಂಗ್ ಹೋಗುವಳು. ಅದೂ ಅಷ್ಟುಹೊತ್ತಿನಲ್ಲಿ ಇಷ್ಟುಹೊತ್ತಿನಲ್ಲಿ ಎಂಬ ನಿಯಮವಿಲ್ಲ. ಅವಳ ಮನೆಯಲ್ಲಿ ಕ್ಲಾಕ್ ಇದ್ದುದು ಜಗತ್ತಿನಲ್ಲಿ ಸೂರ್ಯೋದಯವಾಗಿ ಇಷ್ಟು ಹೊತ್ತಾಯಿತು; ಈ ದೇಶದಲ್ಲಿ ಈಗ ಇಷ್ಟು ಹೊತ್ತು ಎಂದು ತೋರಿಸುವುದಕ್ಕೆ ಮಾತ್ರವಲ್ಲದೆ, ಈ ಕೆಲಸವು ಈ ಮನೆಯಲ್ಲಿ, ಈ ಮನೆಯವರಿಂದ ನಡೆಯಬೇಕಾದ ಕಾಲವಿದು ಎಂದು ಗೊತ್ತುಮಾಡುವುದಕ್ಕಲ್ಲ.

ಸುಮಾರು ಹತ್ತು ಗಂಟೆಯಿರಬಹುದು. ಫೋನ್ ಮಾಡಿ ಪ್ರಾಣೇಶನಿಂದ ತಾಯಿಯ ಅಡ್ರೆಸ್ ತಿಳಿದುಕೊಂಡಳು.

ತಾನು ಹೋಗುವುದಕ್ಕೆ ಮುಂಚೆ ಆಕೆಯ ಅಭಿಪ್ರಾಯ ತಿಳಿದು ಕೊಳ್ಳದೆ ಹೋಗಬಾರದು ಎನ್ನಿಸಿತು. ಒಂದು ರಿಪ್ಲೆ ಪೇಯಡ್ ಟೆಲಿಗ್ರಾಂ ಕಳುಹಿಸಿದಳು. "ಅಮ್ಮ, ನೋಡಬೇಕೆಂದು ಆಸೆ ಬಹಳ ವಾಗಿದೆ. ಯಾವಾಗ ಬರಲಿ?—ಮಗಳು ಮೇರಿ."

ತಾನು ತಾಯಿಗೆ ಟೆಲಿಗ್ರಾಂ ಕಳುಹಿಸಿರುವುದು ಯಾರಿಗೂ ತಿಳಿಯಬಾರದು ಎಂದು ತಾನೇ ತಂತಿ ಕಚೇರಿಗೆ ಹೋಗಿ ಬಂದಳು. ಬರುವಾಗ ಹಾಗೆಯೇ ಪಟಗಳ ಅಂಗಡಿಗೆ ಹೋಗಿ ಕ್ರಿಸ್ತನ ಒಂದು ಪಟ ಕೊಂಡುಕೊಂಡಳು. ದಾರಿಯಲ್ಲಿ ಮಾರ್ಕೆಟ್ಟಿಗೆ ಹೋಗಿ ಎರಡು ಶಾಮಂತಿಗೆಯ ಹೂವಿನ ಹಾರಗಳನ್ನು ತೆಗೆದುಕೊಂಡಳು. ಮನೆಗೆ ಬರುವ ವೇಳೆಗೆ ಹನ್ನೆರಡು ಗಂಟೆಯಾಗಿತ್ತು. ಊಟ ಮಾಡಿ ಮತ್ತೆ ಮಲಗಿಕೊಂಡಳು. ನಾಯಿ ಕೂಡ ತಿರುಗಿ ತಿರುಗಿ ಆಯಾಸಪಟ್ಟಿತ್ತು. ಅದೂ ಊಟ ಮಾಡಿ ಬಂದು ಅವಳ ಮಗ್ಗುಲಲ್ಲಿ ಮಲಗಿಕೊಂಡಿತು.

ಅವಳು ಎದ್ದಾಗ ಸುಮಾರು ನಾಲ್ಕು ಗಂಟೆ. ಎದ್ದು ಉಪಚಾರ ಗಳನ್ನೆಲ್ಲ ಪೂರೈಸಿಕೊಂಡು ಮತ್ತೆ ಬರುವ ವೇಳೆಗೆ ಐದು ಗಂಟೆಯಾ ಗಿದೆ. ರಮೇಶನ ರೂಮಿನಲ್ಲಿ ತಾನು ತಂದಿದ್ದ ಕ್ರಿಸ್ತನ ಫೋಟೋವನ್ನು ಗೋಡೆಗೆ ಹಾಕಿ ಆದರ ಮಗ್ಗುಲಲ್ಲಿ ರಮೇಶನ ಫೋಟೋ ಕಟ್ಟಿದ್ದಳು. ಎರಡಕ್ಕೂ ಎರಡು ಹಾರ ಹಾಕಿದಳು. ಇನ್ನೂ ಆಸೆಯಾಯಿತು. ಎದ್ದುಹೋಗಿ ತನ್ನ ಕಾಂಪೌಂಡಿನಲ್ಲಿ ಬೆಳೆದಿದ್ದ ಜಾಜಿಯನ್ನು ಕೊಯ್ದು ತಂದು ಅದನ್ನು ತೆಗೆದು ಆ ಎರಡು ಫೋಟೋಗಳಿಗೆ ಅಲಂಕಾರ ಮಾಡಿ ಅವುಗಳನ್ನು ನೋಡುತ್ತಾ ಎದುರಿಗೆ ಒಂದು ಕುರ್ಚಿಯ ಮೇಲೆ ಕೂತುಕೊಂಡಳು. ಅದು ಎಷ್ಟೋ ಹೊತ್ತು ಹಾಗೆಯೇ ಅವೆರಡನ್ನೂ ನೋಡುತ್ತಿದ್ದಳು. ಏನೇನೋ ಭಾವನೆಗಳು. ಅವಳಿಗೆ ಹಿಂದೆ ಮಿರ್ಷ ನಲ್ಲಿ ಹುಡುಗಿಯಾಗಿದ್ದಾಗ ಓದಿದ ಬೈಬಲ್ಲಿನ ಕಥೆಯೆಲ್ಲ ನೆನೆಪಾಯಿತು. ಬಹುಶಃ ಮಿರ್ಷನವರು "ನಾನು ಪವಿತ್ರ ಮೇರಿಯಾಗಲೆಂದು ಈ ಹೆಸರ ನ್ನಿಟ್ಟರೇನೋ? ನಾನು ಇನ್ನೊಬ್ಬ ಮೇರಿಯಾದೆ, ಆಗಲಿ. ನನ್ನ ಕ್ರಿಸ್ತನು

ಬಂದ. ನಾನು ಉದ್ಧಾರವಾದೆ. ಇಷ್ಟಕ್ಕೂ ನಾನೇನೂ ಪಾಪ ಮಾಡಿಲ್ಲ. ಹಾಗೆ ನಾನು ಗಂಡಿನೊಡನೆ ಆಟವಾಡಿರುವುದೆಲ್ಲ ಪಾಪವಾದರೆ, ತಿಂದದ್ದು ಕುಡಿದದ್ದು ಪಾಪವಲ್ಲವೇನು? ಬಂದುದನ್ನೆಲ್ಲ ಕೂಡಿಟ್ಟು ಕೊಂಡಿದ್ದೇನೆ. ವಿರ್ಸನವರ ಹಾಗೆ ಇತರರಿಗೆ ಕೊಡುವುದಿಲ್ಲ. ಅದೇ ಪಾಪ ಎಂದರೆ ಆ ಪಾಪ, ನಾನು ಒಬ್ಬಳಲ್ಲ, ಲೋಕಕ್ಕೆ ಲೋಕವೇ ಅದನ್ನು ಮಾಡುತ್ತಿದೆ. ಹುಳುಹುಪ್ಪಟೆ ಕೂಡ ಈ ಪಾಪ ಮಾಡುತ್ತಿದೆ. ಇದೆಲ್ಲ ಪಾಪ ಎಂದರೆ ಬದುಕಿರುವುದೇ ಪಾಪ! ಸಾಯುವುದಕ್ಕೆ ನನಗೆ ದಿಗಿಲು. ನಾನು ಸಾಯಲಾರೆ. ನನಗೆ ಇದೆಲ್ಲ ಏಕೆ? ಹೊಟ್ಟೆ ಹಸೀತು. ತಿಂದೆ, ಗಂಡಿನೊಡನೆ ಆಟ ಬೇಕು, ಆಡಿದೆ. ಹೂವು ಮುಡಿಯಬೇಕು ಅನ್ನಿಸಿತು, ಮುಡುಕೊಂಡೆ. ಬಟ್ಟೆ ಬೇಕು ಅನ್ನಿಸಿತು, ಹಾಕಿಕೊಂಡೆ. ಹಾಗೆ. ನನ್ನ ಜೀವನ. ಬೇಕು ಅಂದದ್ದು ಹಿಡಿದು ಬೇಡ ಅಂದದ್ದು ಬಿಟ್ಟು ಸುಖವಾಗಿರೋದು. ಈ ದಿನ ಈ ಕ್ರಿಸ್ತನ ಪಟ ತರಬೇಕು ಅನ್ನಿಸಿತು. ತಂದಿದ್ದೇನೆ. ಮೊದಲೇ ಅನ್ನಿಸಿದ್ದರೆ ಮೊದಲೇ ತರುತ್ತಿದ್ದೆ. ಇರುವವರೆಗೂ ಹೀಗೇ ಇದ್ದು ಹೋದರೆ ಏನು ನಷ್ಟ? ರಮೇಶ್ ಇದ್ದ. ಸಂಪಾದಿಸಿದ, ಧಾಂಧೂಂ ಮಾಡಿದ, ಸತ್ತ. ಈಗ ಅವನೆಲ್ಲಿ ಹೋದನೋ ಯಾರಿಗೆ ಗೊತ್ತು. ಈ ಪುಣ್ಯಾತ್ಮ ಕ್ರಿಸ್ತ ಇದ್ದ. ದೇವರು ದೇವರು, ಪಾಪ, ಪುಣ್ಯ, ಅಂತ ತನಗೆ ತೋರಿದ್ದನ್ನೆಲ್ಲ ಹೇಳಿ ಸತ್ತ. ಅವನು ಇದಾನೆ ಅಂತಾರೆ. ಅವನಿದ್ದರೆ ರಮೇಶನೂ ಇರಬೇಕು."

ಭಾವನೆಗಳು ಅರಳಿ, ಹೊರಳಿ, ಇನ್ನು ಎತ್ತ ಕಡೆಯೋ ಹೊರಟವು: "ಕ್ರಿಸ್ತನ್ನ ಕುರಿತು ಇಷ್ಟು ಕೋಟಿ ಜನ ಪೂಜೆ ಮಾಡುತಾರೆ; ಪ್ರಾರ್ಥನೆ ಮಾಡುತ್ತಾರೆ; ಕಾಪಾಡು ಎನ್ನುತ್ತಾರೆ. ಜಗತ್ತಿನಲ್ಲಿ ಇರುವ ದೇಶ ದೇಶಗಳಲ್ಲೂ ಕ್ರಿಶ್ಚಿಯರ್ನರು ಇದ್ದಾರೆ. ಎಷ್ಟೋ ಜನ ಪಾಪಿಗಳು ಈ ಪುಣ್ಯಾತ್ಮನನ್ನು ನಂಬಿ ಬದುಕಿಕೊಂಡಿದ್ದಾರೆ. ಹೀಗಿರುವಾಗ, ಇಷ್ಟು ಕೋಟಿ ಜನರನ್ನು ಕಾಪಾಡುವ ಕ್ರಿಸ್ತನು ಇಲ್ಲದೆ ಇದ್ದರೆ ಅವರು ಉದ್ಧಾರವಾಗುವುದು ಹೇಗೆ? ಅಲ್ಲದೆ, ಕ್ರಿಸ್ತನನ್ನು ಕಣ್ಣಾರೆ ಕಂಡೆನೆಂದು ಹೇಳಿಕೊಳ್ಳುವವರೂ ಇದ್ದಾರಲ್ಲ!

ಅದರಿಂದ ಕ್ರಿಸ್ತ ಇರಬೇಕು. ಹಾಗೆಯೇ ನನ್ನ ರಮೇಶನೂ ಇರಬೇಕು. ಕ್ರಿಸ್ತನು ಇದ್ದಾಗ ಯೆಹೂದ್ಯರ ಕ್ರಿಸ್ತನಾಗಿದ್ದ ; ಅವನು ಶಿಲುಬೆಗೇರಿ ಜಗತ್ತಿನ ಕ್ರಿಸ್ತನಾದ. ಹಾಗೆ, ನನ್ನ ರಮೇಶ ಬದುಕಿದ್ದಾಗ ಅವನ ಪ್ರೇಮಕ್ಕೆ ಪಾಲುದಾರರಿದ್ದರು. ನನ್ನವನು, ನನ್ನವನು, ಎನ್ನುವುದಕ್ಕೆ ಎಷ್ಟೋ ಜನರಿದ್ದರು. ಈಗ ನನ್ನ ರಮೇಶ ಇನ್ನು ಯಾರಿಗೂ ಸೇರಿದವನಲ್ಲ. ಸಂಪೂರ್ಣವಾಗಿ ನನ್ನ ಸ್ವತ್ತು. ನಾನೂ ಒಂದು ಲಾಕೆಟ್ ಮಾಡಿಸಬೇಕು. ಅದರಲ್ಲಿ ಒಂದು ಮುದ್ದಾದ ಫೋಟೋ ಮಾಡಿಸಿ ಇಡಬೇಕು. ತಾಯಿ ಸಿಕ್ಕಿದ್ದಾಳೆ, ಅವಳದು ಒಂದು ಕಡೆ. ಇನ್ನೊಂದು ಕಡೆ ರಮೇಶ್‌ದು.”

“ರಮೇಶ್ ನನ್ನ ಗಂಡನಾಗಿದ್ದರೆ ? ಆಗಿದ್ದರೇನು? ಹಾವರಗಿತ್ತಿಯೆಂದು ನನ್ನ ಒದ್ದೋಡಿಸುತ್ತಿದ್ದ. ನಾನೂ ಅವನ ಕೈಯಲ್ಲಿ ಜಗಳವಾಡಿ ಮುನಿಸಿಕೊಂಡು ಬಯ್ಯುತ್ತಿದ್ದೆ. ಈಗ ನಾನು ಹೀಗೆ ಕಂಡಕಂಡವರ ಪಾಲಾಗುವ ಸ್ವಾತಂತ್ರ್ಯ ಇರುವ ವೇಳೆಗೆ, ಹತ್ತಾರು ಮರ ಹುಡುಕಿ ನೋಡಿ ಗೂಡು ಕಟ್ಟುವ ಹಕ್ಕಿಯ ಹಾಗೆ, ಹತ್ತಾರು ಜನರನ್ನು ಪರೀಕ್ಷಿಸಿ, ಅವರನ್ನೆಲ್ಲ ನೂಕಿ ರಮೇಶನನ್ನು ಆರಿಸಿಕೊಂಡೆ. ಥೂ– ಮದುವೆ ಅನ್ನೋದು ಲಾಟರಿ ಟಿಕೆಟ್ ಹಾಗೆ. ಅದೃಷ್ಟ ಇದ್ದರೆ ಒಳ್ಳೇದು ಸಿಕ್ಕೀತು. ಇಲ್ಲದಿದ್ದರೆ ಬದುಕಿರೋವರೆಗೂ ಲಾಟರಿಯೇ!”

“ಆದರೆ ನಮ್ಮ ಬಾಳು? ಏನು ಬಾಳೋ? ಚಿಟ್ಟೆಯ ಬಾಳು— ಹುಳುವಾಗಿ ಹರಿದದ್ದು ಅಷ್ಟು ದಿವಸ. ಗೂಡಿನಲ್ಲಿ ಬಿದ್ದಿದ್ದದ್ದು ಅಷ್ಟು ದಿವಸ. ಚಿಟ್ಟೆಯಾಗಿ ಹಾರಾಡಿದ್ದು ಮೂರು ದಿವಸ. ಕೊನೆಗೆ ಹಕ್ಕಿಗೋ ಹುಳುವಿಗೋ ಸಿಕ್ಕಿ ಗೋವಿಂದೋ ಗೋವಿಂದ.....”

ಹೀಗೇ ಭಾವನೆಯಲ್ಲಿ ಮುಳುಗಿಹೋಗಿರುವಾಗ ಬಾಗಿಲಲ್ಲಿ ಯಾರೋ ಕೂಗಿದಹಾಗಾಯಿತು. ಏನು ಕೂಗಿದರೋ ತಿಳಿಯಲಿಲ್ಲ. ಕಿವಿಯಂತೂ ಅತ್ತ ಕಡೆ ಹೋಯಿತು. ಅದರ ಜೊತೆಯಲ್ಲಿ ಮನಸ್ಸೂ ಹೋಯಿತು. ಇನ್ನೊಮ್ಮೆ ಕೂಗು ಕೇಳಿಸಿತು : “ಟೆಲಿಗ್ರಾಂ ಪ್ಲೀಸ್.”

ಮೇರಿ ಎದ್ದು ಓಡಿಹೋದಳು. ಮಿಸ್ ಮೇರಿ ತಾನೇ ಎಂದು ಟೆಲಿಗ್ರಾಂ ತೆಗೆದುಕೊಂಡು ಸೈನ್ ಮಾಡಿಕೊಟ್ಟು ಒಳಕ್ಕೆ ಬಂದು ಒಡೆದು ನೋಡಿದಳು ತಾಯಿಯ ಟೆಲಿಗ್ರಾಂ. "ದೇವರ ಕೃಪೆ, ನೀನು ಸಿಕ್ಕಿದೆ. ಫೋಟೋ ಕಳುಹಿಸು. ಕಾಗದ ಬರುತ್ತೆ. ದೇವರು ನಿನ್ನನ್ನು ಕಾಪಾಡಲಿ. ತಾಯಿ ಜೋನಮ್ಮ."

ಅವಳಿಗೆ ಪರಮ ಸಂತೋಷವಾಯಿತು. ಟೆಲಿಗ್ರಾಂ ತಂದವನು, ಇನ್ನೂ ಅಲ್ಲಿಯೇ ನಿಂತಿದ್ದ. ಅವನನ್ನು ಕರೆದು ಅವನಿಗೆ ಒಂದು ರೂಪಾಯಿ ಕೊಟ್ಟಳು. ಅವಳ ಸಂತೋಷ ಅಲ್ಲಿಗೆ ನಿಲ್ಲಲಿಲ್ಲ. ಥ್ಯಾಂಕ್ಸ್, ಮೆನಿ ಥ್ಯಾಂಕ್ಸ್, ಗುಡ್ ನ್ಯೂಸ್, ಎಂದು ಅವನ ಕೈ ಹಿಡಿದು ಕುಲಿಕಿದಳು. ಅವನಿಗೆ ಈ ಸಂತೋಷ ಇನ್ನೂ ಮುಂದೆ ಹೋಗಿ ಅನರ್ಥವಾಗಬಹುದು ಅನ್ನಿಸಿತೇನೋ? ಅಲ್ಲಿಂದ ಕೆಟ್ಟೆನೋ ಬಿಟ್ಟೆನೋ ಎಂದು ಓಡಿದ. ನಾಯಿ ಜಾರ್ಜ್ ಅವನ ಹಿಂದೆ ಓಡಬೇಕು ಅಂದು ಹೋಯಿತು. ಅದನ್ನು ಹಿಂತಿರುಗಿ ಕರೆದಳು.

ಆ ಸಂತೋಷದಲ್ಲಿ ಏನು ಮಾಡಬೇಕೋ ಅವಳಿಗೆ ತಿಳಿಯದು. ಕುಣಿದಳು. ನಾಯಿಯನ್ನು ಮುದ್ದಾಡಿದಳು. "ಜಾರ್ಜ್, ಸೂಳೇಮಗನೇ, ಗೊತ್ತೇನು. ನಮ್ಮ ತಾಯಿ, ನಿಮ್ಮ ಅಜ್ಜಿ, ಬರುತ್ತಾಳೆ," ಎಂದಳು. ಅದೂ ಏನೋ ಬಹಳ ಅರ್ಥವಾದಂತೆ ಮೂತಿ ನೆಕ್ಕಿತು. "ಥೂ ಮುಂಡೇದೆ" ಎಂದು ಅದನ್ನು ನೂಕಿ ರೂಮಿನೊಳಗೆ ಹೋದಳು. ಅಲ್ಲಿ ರಮೇಶ್ ಫೋಟೋ ಮುಂದೆ, "ರಮೇಶ್, ಅಮ್ಮ ಸಿಕ್ಕಿದಳು ಕಣೋ. ನೀನು ಹೇಳುತ್ತಿದ್ದೆ: 'ನಾನು ಹುಡುಕಿ ಬರುತ್ತೇನೆ.' ನಿಜವಾಗಿ ನೀನೇ ಹೋಗಿ ಹುಡುಕಿರಬೇಕು." ಎಂದು ಕಣ್ಣಲ್ಲಿ ನೀರು ಹೊಳೆಯಾಗಿ ಸುರಿಯುತ್ತಿರುವುದೂ ಲಕ್ಷಿಸದೆ ಹೋಗಿ ಆ ಫೋಟೋಗೆ ಮುತ್ತು ಕೊಟ್ಟಳು. ಮಗ್ಗುಲಲ್ಲಿ ಕ್ರಿಸ್ತನ ಫೋಟೋ ಕಾಣಿಸಿತು. ಮೊಳಕಾಲೂರಿ ಕೈಮುಗಿದು, "ಹೌದು, ದೇವ, ಇದು ನಿನ್ನ ಕೃಪೆ" ಎಂದಳು.

ಅವಳು ಮೊಳಕಾಲೂರಿ ಕುಳಿತು ಬಹಳ ದಿನವಾಗಿತ್ತು: ಎಷ್ಟು ವರ್ಷಗಳಾಗಿತ್ತೋ? ದೇವರು ತನ್ನನ್ನು ಎಲ್ಲ ಭಾಗ್ಯದಿಂದ ವಂಚಿಸಿದ್ದಾನೆ ಎಂದು ದೇವರನ್ನು ಹೊರನೂಕಿದ್ದವಳು ಅವಳು. ತನ್ನ ಎದುರಿಗೆ ಯಾರಾದರೂ ದೇವರು ಎಂದರೆ ಅವರಿಗೆ ಗ್ರಹಚಾರ ಬಿಡಿಸುತ್ತಿದ್ದ ಗಂಡುಬೀರಿ ಅವಳು. ಇಂದು ತನ್ನ ಸಂತೋಷದಲ್ಲಿ ಕ್ರಿಸ್ತನ ಪಟದ ಮುಂದೆ ಮೊಳಕಾಲೂರಿ ಕುಳಿತಿದ್ದಾಳೆ. ಪ್ರಾರ್ಥನೆ ಮಾಡಬೇಕು ಎನ್ನಿಸಿತು. ಮಾಡಲೇ ಎಂದುಕೊಂಡಳು. ಅಷ್ಟಕ್ಕೆ ಪುರಸತ್ತಿಲ್ಲ ಎಂದುಬಿಟ್ಟಳು.

ಎದ್ದು ಪ್ರಾಣೇಶನಿಗೆ ಫೋನ್ ಮಾಡಿದಳು. "ಮೈ ಲಾರ್ಡ್! ಪ್ರಾಣೇಶ್! ಅಮ್ಮಾ ಸಿಕ್ಕಿದಳು." ಅನ್ನುವುದರೊಳಗಾಗಿ ನಿಶ್ಶಬ್ದ ಪ್ರಯತ್ನವಾಯಿತು. 'ಥ್ಯಾಂಕ್ಸ್' ಎನ್ನುವುದಕ್ಕೂ ಗಂಟಲು ಅವಕಾಶ ಕೊಡಲಿಲ್ಲ. ಪ್ರಾಣೇಶನಿಗೋ ಏನೋ ಕೆಲಸದ ಅವಸರ. ಅವನೂ 'ಸರಿ' ಬರುತ್ತೇನೆ ಎಂದು ರಿಸೀವರ್ ಕೆಳಗಿಟ್ಟನು.

೮

ಸುಮಾರು ಐದು ಗಂಟೆಯಿರಬಹುದು. ಮೋಹನೆಯು ಕಸೂತಿಯ ಕೆಲಸವನ್ನು ಮಾಡುತ್ತ ಕುಳಿತಿದ್ದಾಳೆ. ಮನಸ್ಸೆಲ್ಲ ಎಲ್ಲೋ ಹೋಗಿದೆ. ಯಾವ ಕೆಲಸ ಮಾಡುವುದಕ್ಕೂ ಇಷ್ಟವಿಲ್ಲ. ಯಾವುದಕ್ಕೂ ಬೇಸರ. ಮನೆಯಲ್ಲಿ ವೀಣಾ ಇಲ್ಲದಿದ್ದರೆ ನೀನೇ ಎನ್ನುವವರಿಲ್ಲ. ತಲೆ ಒಡೆದರೂ ಕೇಳುವರಿಲ್ಲ. "ಇನ್ನೆಷ್ಟು ದಿನ ಹೀಗೆ ಏನೂ ಮಾಡದೆ ಕೂತಿರುವುದು?" ಎಂದು ಯೋಚನೆ.

ಯೋಚನೆ ಬಲವಾಯಿತು. ಕಸೂತಿಯ ಕೆಲಸ ನಿಂತು ಹೋಯಿತು. ಅದನ್ನು ತೆಗೆದು ಪಕ್ಕದಲ್ಲಿದ್ದ ಟೇಬಲ್‌ನ ಮೇಲೆ ಇಟ್ಟು ಹಾಗೇ ಯೋಚನೆ ಮಾಡುತ್ತ ಕುಳಿತಳು: "ಹಾಳು ಹೆಣ್ಣು ಜನ್ಮ. ಇದಕ್ಕೆ ತನ್ನ ಯೋಚನೆಗಿಂತಲೂ ಇತರರ ಯೋಚನೆಯೇ ಹೆಚ್ಚೋ? ನನಗೇನು ಕಡಿಮೆಯಾಗಿದೆ ಈಗ? ಮಹರಾಯ ಬೇಕಾದ್ದೆಲ್ಲ ಇಟ್ಟು ಹೋಗಿದ್ದಾನೆ. ಬಡವರ ಮನೆಯ ಹಾಗೆ ರಾತ್ರಿಗೆ ಹೊಟ್ಟೆಗೆ ಏನು ಯೋಚನೆ, ಬಟ್ಟೆಗೆ ಏನು ಗತಿ, ಎಂದು ಒದ್ದಾಡುವಂತಿಲ್ಲ. ಆದರೇನು? ಸುಖವಾಗಿರುವುದಕ್ಕೆ ಉಂಟೇನು? ಮಾಡುವುದಕ್ಕೆ ಕೈತುಂಬ ಕೆಲಸ ಇರಬೇಕು! ಆ ಕೆಲಸ ನೋಡಿ ಮೆಚ್ಚುವುದಕ್ಕೆ ಒಬ್ಬರಿರಬೇಕು ಹಾಗಿಲ್ಲದಿದ್ದರೆ ಈ ಜೀವನ ಯಾಕೆ? ಈಗ ನಾನು ಯಾರಿಗಾಗಿ ಬದುಕಬೇಕು? ಯಾವ ಕೆಲಸ ಮಾಡಿ ಯಾರನ್ನು ಮೆಚ್ಚಿಸಬೇಕು?"

ಕಣ್ಣಲ್ಲಿ ಒಂದು ತೊಟ್ಟು ನೀರು ಬಂತು; ಕೂತಿರಲು ಸಾಧ್ಯವಾಗ ಲಿಲ್ಲ. ಎದ್ದಳು. ಅಲ್ಲಿಯೇ ಓಡಾಡಿದಳು. ನಡೆಯುತ್ತಿದ್ದರೆ ಹಜ್ಜೆ ಹಜ್ಜೆಗೂ ಅದೇ ಯೋಚನೆ. ಏನೋ ಬರಿದು, ಏನೋ ಖಾಲಿ, ಏನೋ ಸರ್ವನಾಶವಾದ ಭಾವ. ತನ್ನ ಮೇಲೆ ಆಕಾಶವೇ ಕಳಚಿಬೀಳುತ್ತಿರು ವಂತೆ ದಿಗಿಲು; ತಾನು ನಿಂತಿರುವ ನೆಲ ಕುಸಿದು ಭೂಮಿಯು ತನ್ನನ್ನು ನುಂಗುತ್ತಿದೆ ಎಂಬ ಅಂಜಿಕೆ.

ಎಲ್ಲೋ ಹೋಗಿದ್ದ ವೀಣಾ ಓಡಿ ಬಂದಳು. ಅವಳು ಒಂದು ಕುಪುಕುಪದ ಹಾಡಿಕೊಂಡು ಬರುತ್ತಿದ್ದರೆ, ಮೋಹನೆಗೆ ಏನೋ ಆನಂದ. ಇಂಥವು ಇನ್ನೆರಡು ಮಕ್ಕಳಾದರೂ ಇದ್ದಿದ್ದರೆ? ಅವರ ಆಟಪಾಟ ನೋಡಿಕೊಂಡು, ಅವರಿಗೆ ಊಟಬಟ್ಟೆ ನೋಡಿಕೊಳ್ಳುತ್ತ ಕಾಲಕಳೆಯ ಬಹುದಾಗಿತ್ತು. ಹಾಳು ದೇವರು ನನಗೆ ಆ ಭಾಗ್ಯವೂ ಕೊಡಲಿಲ್ಲ. ಈಗ ಮಕ್ಕಳಾದರೆ, ನಾನು ಮಕ್ಕಳ ಹೆತ್ತು ನನ್ನ ಸುಖ ಬೆಳೆಸಿಕೊಳ್ಳೋಣ ಅಂದರೆ ಊರವರ ಬಾಯಿಗೆ ಅಂಜಬೇಕು. ಇಲ್ಲಿ ನಾನು ಒಬ್ಬಳೇ ಕೊಳೆತರೆ, ಒಬ್ಬಂಟಿಗಳಾಗಿರಲಾರದೆ ನನಗೆ ಹುಚ್ಚು ಹಿಡಿದ ಹಾಗಾದರೆ ಅದು ಹತ್ತುಜನರ ದೃಷ್ಟಿಯಲ್ಲಿ ಧರ್ಮ! ಇದು ನನ್ನಿಂದ ಸಾಧ್ಯವೇನು?

ನಾನು ಒಬ್ಬಳೇ ಇರಬಲ್ಲೆನೇನು? ಸಾಯುವವರೆಗೂ ಕಾಸ್ ಬಂಗಲೆ ಹುಲಿಯ ಹಾಗೆ ಇರಬೇಕಲ್ಲ? ಇದು ಯಾವ ನ್ಯಾಯ? ಅದಕ್ಕೊ ನೆಕ್ಕೋಕಾದರೂ ಎರಡು ಮರಿ ಇರಬೇಕಲ್ಲ?" ಎಂದು ಕೊಳ್ಳುತ್ತಾ ಅವಳಿಗಿನ್ನೊಂದು ಸಲ ಕಣ್ಣೀರು ಬಂತು.

ಅಷ್ಟರೊಳಗಾಗಿ ವೀಣಾ ಓಡಿ ಬಂದಳು. ತಾಯಿಯ ನೀರು ತುಂಬಿದ ಕಣ್ಣನ್ನು ಕಂಡು ಅವಳ ಹಾಡು ಅಲ್ಲಿಯೇ ನಿಂತು ಹೋಯಿತು. ಮಾತನಾಡದೆ ಮೌನವಾಗಿ ಬಂದು ತಾಯಿಯನ್ನು ತಬ್ಬಿಕೊಂಡು ನಿಂತಳು. ತನ್ನ ಕಣ್ಣೀರು ಮಗಳ ಹಾಡನ್ನು ನಿಲ್ಲಿಸಿತು ಎಂಬುದು ತಾಯಿಗೂ ತಿಳಿಯಿತು. ತಟ್ಟನೆ ಕಣ್ಣೀರು ಒರೆಸಿಕೊಂಡು, ಮಗಳನ್ನು ತಬ್ಬಿಕೊಂಡು ತಾನಾಗಿ ಬರದಿದ್ದ ನಗುವನ್ನು ಬರೆಸಿಕೊಂಡು "ಏನಮ್ಮ, ಸ್ಕೂಲ್ ಆಯಿತೆ?" ಎಂದಳು.

ವೀಣೆಯು ಏನೋ ಪೆಚ್ಚು ಮೊಕಹಾಕಿಕೊಂಡು ತಾಯಿಯ ಸೆರಗನ್ನು ಹಿಡಿದು ಅದರ ಕರೆಯ ಗಂಟುಗಳನ್ನು ಬೆರಳಲ್ಲಿ ತಿರುಹುತ್ತಾ "ಅಮ್ಮಾ, ನಾನು ಇನ್ನು ಮೇಲೆ ಸ್ಕೂಲಿಗೆ ಹೋಗುವುದಿಲ್ಲ." ಎಂದಳು.

"ಯಾಕೆ, ಮಗು"

"ನೋಡು, ಇವೊತ್ತು ನಮ್ಮ ಕ್ಲಾಸಿನಲ್ಲಿ ಮೇಡಂ ಒಂದು ಹುಡುಗಿಯನ್ನು ಬಯ್ದುಬಿಟ್ಟರು. ಅವರಪ್ಪ ಅಮ್ಮ ಸ್ಲೇಟುಪುಸ್ತಕ ತೆಗೆದು ಕೊಡದಿದ್ದರೆ, ಅವಳದೇನು ತಪ್ಪು? ಪಾಪ, ಅವರು ಬಡವರು. ಅವಳಿಗೆ ಮೈತುಂಬ ಹಾಕಿಕೊಳ್ಳೋಕೆ ಬಟ್ಟೆ ಕೂಡ ಇಲ್ಲವಣೇ! ಪಾಪ, ನಾಚಿಕೆಯಿಲ್ಲದೆ ಆ ಹರಕಲು ಬಟ್ಟೇನೆ ಹಾಕಿಕೊಂಡು ಬಂದಿದ್ದಳು. ಅವರಮ್ಮ ಬಂದು ಹೇಳಿಬಿಟ್ಟು ಹೋದಳು ನಾಳೆ ಕೊಡಿಸ್ತೀನಿ ಅಂತ. ಪಾಪ! ಏನಾಯಿತೊ? ಕೊಡಿಸಲಿಲ್ಲ. ಅದಕ್ಕೆ ಮೇಡಂ ಆ ಹುಡುಗೀನ ಬಯ್ಯೋದೇನಮ್ಮ? ಹೊಡೀತೀನಿ ನೋಡು ಅಂದುಬಿಟ್ಟರು"

"ಅದಕ್ಕೆ ನೀನೇನ ಮಾಡಿದೆಯಮ್ಮ?"

"ನೀನೂ ಏನಾದರೂ ಅಂತೀಯೇನೋ?"

"ಇಲ್ಲಮ್ಮ! ಹೇಳು."

ತಾಯಿಯ ಮಡಿಲಲ್ಲಿ ಸೇರಿಕೊಂಡು ವೀಣಾ ತಲೆಬಗ್ಗಿಸಿಕೊಂಡು ಹೇಳಿದಳು: "ನನ್ನ ಸ್ಲೇಟೂ ಬುಕ್ಕು ಬ್ಯಾಗೂ ಎಲ್ಲಾ ಕೊಟ್ಟು ಬಂದು ಬಿಟ್ಟೆ ಅಮ್ಮ!"

ತಾಯಿಯು ಮಗಳನ್ನು ತಬ್ಬಿಕೊಂಡಳು: ಮುತ್ತಿಟ್ಟಳು; "ಅವಳನ್ನ ಕರೆಕೊಂಡು ಬಾ ಹೋಗು. ಅವಳಿಗೆ ಕಾಫಿ ತಿಂಡೀನೂ ಕೊಡೋವೆಯಂತೆ!"

"ಅವಳ್ನೂ ಕರೆಕೊಂಡು ಬಂದಿದ್ದೀನಮ್ಮ!"

"ಕರೀ ಮತ್ತೆ!"

"ಕರೀತೀನಿ. ಅಮ್ಮ ಒಂದು ಮಾತು ಕೇಳಲೆ?"

"ಕೇಳಮ್ಮ."

"ನಮ್ಮ ಕನ್ಯಾಮಂದಿರಕ್ಕೆ ಈ ಹುಡುಗೀನ ಸೇರಿಸಿಕೋತೀಯ ಅಮ್ಮ?"

"ಆಗಲಮ್ಮಾ! ಮೊದಲು ಅದು ಆಗಲಿ. ಆಮೇಲೆ ತಾನೇ?"

"ಹಾಗಾದರೆ ಆ ಹುಡುಗೀನ ಕರೆಕೊಂಡು ಬರಲೇನಮ್ಮ?"

"ಹೂಂ"

ವೀಣೆಯು ತನ್ನ ಸ್ನೇಹಿತೆಯನ್ನು ಕರೆದುತಂದಳು. ಮೋಹನೆಗೂ ಅವಳನ್ನು ನೋಡಿ "ಅಯ್ಯೋ ಎನ್ನಿಸಿತು" ಈ ಹಾಳು ಮಗು ಆ ಬಡವರ ಮನೇಲಿ ಹುಟ್ಟಿ ಅವರನ್ನು ಗೋಳುಗುಟ್ಟಿಸುವ ಬದಲು ನಮ್ಮ ಮನೆಯಲ್ಲಿ ಹುಟ್ಟಬಾರದಾಗಿತ್ತೆ?" ಎಂದು ತಾನೂ ನೊಂದು ಕೊಂಡು ಮಗಳಿಗೆ ಇಟ್ಟಿದ್ದ ತಿಂಡಿಯ ಜೊತೆಗೆ ಹಣ್ಣೂ ಬಿಸ್ಕಟ್ಟೂ ಸೇರಿಸಿ ಇಬ್ಬರಿಗೂ ಕೊಟ್ಟಳು. ಆ ಮಗು ಬಿಸ್ಕಟ್ ಕಂಡೇ ಅರಿಯದು. ಅದನ್ನು ಕಂಡು ಅವಳಿಗೆ ದಿಗಿಲು. ಬಲವಂತಮಾಡಿ, ತಾಯಿಮಗಳಿಬ್ಬರೂ ಸೇರಿ, ಆ ಮಗುವಿಗೆ ತಿನ್ನಿಸಿದರು. ಆ ಮಗುವಿನ ಚಿಂದಿ ಬಟ್ಟೆಯನ್ನು

ಮಗಳು ತಾಯಿಗೆ ತೋರಿಸಿದಳು. "ತಾನು ತನ್ನದು ಒಂದು ಲಂಗ ಕೊಡಲೇ?" ಎಂದು ಸನ್ನೆಮಾಡಿ ಕೇಳಿದಳು. ಆ ಮಗುವಿಗೆ ಒಂದು ಲಂಗ ಬಂತು.

ಇಲ್ಲಿ ಹೀಗೆ ಲಂಗಾ ದಾನಮಾಡುತ್ತಿರುವಾಗ ಮೋಟಾರಿನ ಸದ್ದಾಯಿತು. ಮೋಹನೆಯು ಬಂದು ನೋಡಿದಳು. ಸಮಾಜದ ಪ್ರೆಸಿಡೆಂಟ್ ಸೀತಮ್ಮನವರು.

ಮೋಹನೆಗೆ ಸಂತೋಷವಾಯಿತು. ಒಬ್ಬಳೇ ಕೂತಿದ್ದರೆ ಅವಳಿಗೆ ಏನೋ ದಿಗಿಲು. ಮನುಷ್ಯಜಾತಿಯಲ್ಲವೆ? ಒಂಟಿಯಾಗಿರುವುದಕ್ಕೆ ಹುಟ್ಟಿಲ್ಲ ಈ ಜಾತಿ. ಜೊತೆಯಿಲ್ಲದಿದ್ದರೆ ಭೀತಿಪಟ್ಟು ಒದ್ದಾಡುವ ಜಾತಿ. ಒಮ್ಮೆ ಸಜಾತೀಯ ಸಂಗ, ಇನ್ನೊಮ್ಮೆ ವಿಜಾತೀಯ ಸಂಗ, ಅಂತೂ ಸಂಗವಿಲ್ಲದಿದ್ದರೆ ಬದುಕುವಂತಿಲ್ಲ. ಸೇರಿ ಸ್ನೇಹವಾಗಿಲ್ಲದಿದ್ದರೆ ಹೋಗಲಿ, ಒಡೆದು ವಿರಸವಾಗಿ ದ್ವೇಷವಾಗಿ ಜಗಳವಾಡಿದರೂ ಸರಿಯೆ; ಅಂತೂ ಸಂಗಬೇಕು ಎನ್ನುವ ಜಾತಿ ಈ ಮನುಷ್ಯ ಪ್ರಾಣಿ.

ಸೀತಮ್ಮನಿಗೆ ತೃಪ್ತಿಯಾಗುವಷ್ಟು ಉಪಚಾರ ಮಾಡಿ ಮೋಹನೆಯು ಆಕೆಯನ್ನು ಬರಮಾಡಿಕೊಂಡಳು. ಸೀತಮ್ಮನು ಬಂದು ಮೋಹನೆಯನ್ನು ಜೊತೆಯಲ್ಲಿ ಕೂರಿಸಿಕೊಂಡು ಕುಳಿತಳು. "ಮೋಹನಬಾಯಿ, ಇವೊತ್ತು ನನಗೆ ಸಮಾಧಾನವಾಯಿತು ಕಣ್ರೇ! ಆ ದಿನ ಅದೇನು ಅಳು, ಅದೇನು ಗೋಳು, ಅದೇನು ದುಃಖ, ಅವೊತ್ತು ನಮ್ಮ ಯಜಮಾನರು ಹೋದ ದಿನ ನೆನೆಪಾಗಿ ನಾನೂ ಅತ್ತುಬಿಟ್ಟೆ ಕಣ್ರೇ!" ಎಂದು ಸಮಾಧಾನದ ಸಂತೈಸುವಿಕೆಯ ನುಡಿಗಳನ್ನು ಆಡಿದಳು.

ಮೋಹನೆಯು ಏನೋ ಪೆಚ್ಚಾಗಿ ತಲೆ ಬಗ್ಗಿಸಿಕೊಂಡಳು. ಸೀತಮ್ಮನ ಮಾತಿಗೆ ಏನು ಉತ್ತರ ಕೊಡಬೇಕು? ಗಂಡನ ದುಃಖ ಮರೆತುಹೋಯಿತು ಎಂದು ಒಪ್ಪಿಕೊಳ್ಳಬೇಕೇ? ಅಥವಾ ಇಲ್ಲ,

ಇನ್ನೂ ಬೇಕಾದಹಾಗೆ ಇದೆ ಎಂದು ಮತ್ತೆ ಅಳುವಿನ ಆರ್ಭಟವೆತ್ತ ಬೇಕೆ?

ಸೀತಮ್ಮನೇ ಮುಂದೆ ಮಾತನಾಡಿದಳು. "ಇವೊತ್ತು ನಾವು ಸಮಾಜದವರು ನಿಮಗೆ ಥ್ಯಾಂಕ್ಸ್ ಕೊಡೋ ಸಂದರ್ಭ ಬಂದಿದೆ. ನಿಮಗೆ ಗೊತ್ತೇನು?"

"ಹಾಗೆಂದರೆ?"

"ನಿಮ್ಮ ಚಿಕ್ಕರಾಯರು ಇದ್ದಾರಲ್ಲ!........"

ಸೀತಮ್ಮನು ಹೇಳುತ್ತಿರುವುದು ಕೇಳಿ ಮೋಹನೆಗೆ ಗಾಬರಿಯಾಯಿತು. ಚಿಕ್ಕರಾಯರು ಎಂದು ಪ್ರಾಣೇಶನನ್ನು ಎಲ್ಲರೂ ಸಂಬೋಧಿಸುವುದು ಅವಳಿಗೂ ಗೊತ್ತು. ಆದರೂ ಸೀತಮ್ಮನಂತಹ ಗಂಡುಬೀರಿ ಆ ಮಾತು ಆಡುವುದರಲ್ಲಿ ಬೇಕೆಂದು ಇವಳು ತನಗೂ ಅವನಿಗೂ ಸಂಬಂಧ ಕಲ್ಪಿಸುತ್ತಿರುವಳೋ ಎನ್ನಿಸಿ ದಿಗಿಲಾಯಿತು. ಆ ಗಾಬರಿ ಮನಸ್ಸಿನಲ್ಲಿ ಹುಟ್ಟಿ ಮೊಕಕ್ಕೂ ಕವಿಯಿತು. ಸೀತಮ್ಮನಿಗೂ ಅರ್ಥವಾಯಿತು: ನಕ್ಕು, "ಆ ಮಾತಿರಲಿ, ಇವಳು ಯಾರು ಈ ಮಗು?" ಎಂದು ಕೇಳಿದಳು.

"ನಮ್ಮ ವೀಣಾ ಫ್ರೆಂಡ್"

"ಮನೆಗೆ ಹೇಳಿ ಬಂದಿದ್ದೀಯೇನಮ್ಮಾ?"

ಮಗು ಸೀತಮ್ಮನ ಜೋರು ನೋಡಿ ಇವಳು ಹೆಡ್‌ಮೇಡಂ ಇರಬೇಕು ಎಂದುಕೊಂಡು ಇಲ್ಲ ಮೇಡಂ ಎಂದಿತು. ಅದಕ್ಕೆ ದಿಗಿಲೋ ದಿಗಿಲೋ!

ಸೀತಮ್ಮನು ಅದನ್ನು ಹತ್ತಿರ ಕರೆದು "ನಾನು ಮೇಡಂ ಅಲ್ಲ ಕಣಮ್ಮ. ನೋಡಿ ಮೋಹನಬಾಯಿ, ಈ ಮೇಡಂಗಳು ಮಕ್ಕಳನ್ನು ಎಷ್ಟು ಹೆದರಿಸಿಬಿಡ್ತಾರೆ ಅಂತೀರಿ. ಇದರ ಕಣ್ಣಿಗೆ ನಾವೆಲ್ಲ ಮೇಡಂಗಳೇ!" ಎಂದು ಅದನ್ನು ಆದರಿಸಿ, ವೀಣಾ! ಸ್ಕೂಲ್ ಬಿಟ್ಟು ಒಂದು

ಗಂಟೆಯಾಯಿತು. ಇವರಮ್ಮ ಎಷ್ಟು ಒದ್ದಾಡುತ್ತಾಳೋ! ಹೋಗಿ ಅವಳನ್ನು ಬಿಟ್ಟು ಬಾ. ಬೇಕಾದರೆ, ಅವರಮ್ಮನಿಗೆ ಹೇಳಿ ಇಬ್ಬರೂ ಕಬ್ಬನ್‌ಪಾರ್ಕ್ ಕಡೆ ಹೋಗಿ ತಿರುಗಿಕೊಂಡು ಬನ್ನಿ. ನಮ್ಮ ಡ್ರೈವರ್ ಕರಿ, ಹೇಳ್ತೀನೆ" ಎಂದಳು. ವೀಣಾ ಡ್ರೈವರನ್ನು ಕರೆದಳು. ಸೀತಮ್ಮನ ಅಪ್ಪಣೆಯಾಯಿತು: "ಡ್ರೈವರ್, ವೀಣಾನೂ ಈ ಮಗೂನೂ ಕರೆದುಕೊಂಡು ಹೋಗಿ, ಈ ಮಗುವಿನ ಮನೆಯಲ್ಲಿ ಹೇಳಿ, ಈ ಇಬ್ಬರನ್ನೂ ಕರೆದುಕೊಂಡು ಕಬ್ಬನ್‌ಪಾರ್ಕ್ ಎಲ್ಲಾ ಸುತ್ತಿಸಿಕೊಂಡು ಇಲ್ಲಿಗೆ ಏಳು ಗಂಟೆಗೆ ಸರಿಯಾಗಿ ಬಂದುಬಿಡು. ಈಗ ೫–೩೫. ಸಮಾಜಕ್ಕೆ ನಾನು ಏಳು ಗಂಟೆಗೆ ಹೋಗಬೇಕು. ಏನು?"

ಡ್ರೈವರ್ ಸರಿಯೆಂದು ಹೊರಟನು. ಮೋಹನೆಯು "ನಮ್ಮ ಕಾರೇ ಇದೆಯಲ್ಲ?" ಎಂದಳು.

"ನಿಮ್ಮ ಡ್ರೈವರ್ ಇದ್ದಾನೋ ಇಲ್ಲವೊ, ಇರಲಿ. ವೀಣಾ! ನಮ್ಮ ಕಾರ್ ಚೆನ್ನಾಗಿಲ್ಲವೇನೆ?"

"ಸೊಗಸಾಗಿದೆ."

"ಸರಿ. ಹೋಗಿ ಸುತ್ತಿಕೊಂಡು ಬಾ. ಆದರೆ, ನೋಡು ವೀಣಾ, ನಿನ್ನ ಫ್ರೆಂಡ್ ತಾಯಿಗೆ ಹೇಳಿ ಹೋಗಬೇಕು."

"ಇವಳ ಅಕ್ಕ ತಮ್ಮ ಬರಿತೀನಿ ಅಂದರೆ ಕರೆದುಕೊಂಡು ಹೋಗಲೇ?"

"ನೋಡಮ್ಮ! ನಾವು ಬಡವರು. ಒಂದೇ ಕಾರು ಇರುವುದು. ಅದು ಗಲೀಜು ಆಗದ ಹಾಗೆ ನೋಡಿಕೊ."

"ಇರಲಿ, ಸೀತಮ್ಮನೋರೆ. ನಾನು ಅದನ್ನ ನೋಡಿಕೊಳ್ಳುತ್ತೇನೆ."

ಸ್ನೇಹಿತಳ ಕೈ ಹಿಡಿದುಕೊಂಡು ಹೋಗುತ್ತಿರುವ ವೀಣೆಯನ್ನು ನೋಡುತ್ತ ಸೀತಮ್ಮ ಹೇಳಿದಳು: "ಜನಾ ನನ್ನ ಗಂಡುಬೀರಿ ಅಂತಾರೆ ಮೋಹನಬಾಯಿ. ನಿಮ್ಮ ಮಗಳು ಇದ್ದಾಳಲ್ಲ, ನನಗಿಂತ ಗಂಡುಬೀರಿ!

ಅಬ್ಬಾ, ಅದೇನು ಧೈರ್ಯ! ಅದೇನು ಬುದ್ಧಿ! ಜೊತೆಗೆ ಚೆನ್ನಾಗಿ ಚೆಲುವೂ ಇದ್ದಾಳೆ. ಥಟ್ಟನೆ ನೋಡಿದರೆ, ಇವಳಿಗೀಗ ಹತ್ತು ವರ್ಷ ಅನ್ನಬಹುದು!"

ಮೋಹನೆಗೆ ತಮ್ಮ ಪ್ರೆಸಿಡೆಂಟರು ತನ್ನ ಮಗಳನ್ನು ಮೆಚ್ಚಿಕೊಂಡು ಆಡಿದ ಮಾತು ಮನಸ್ಸಿಗೆ ಪ್ರಿಯವಾಯಿತು. "ಏನೋ ಅವರ ತಂದೆ ಇದ್ದಿದ್ದರೆ ಚೆನ್ನಾಗಿತ್ತು!" ಎಂದಳು.

ಸೀತಮ್ಮನು ಹಿಂತಿರುಗಿ ಗುಟ್ಟಾಗಿ ಹೇಳುವಳಂತೆ ಸಣ್ಣಗೆ ಮಾತನಾಡುತ್ತ ಹೇಳಿದಳು: "ನಾನು ಆ ಮಾತು ಆಡಬೇಕು ಅಂತಲೇ ವೀಣಾನ ಕಳುಹಿಸಿದ್ದು. ಈ ಹುಡುಗಿ ಸಾಮಾನ್ಯಳಲ್ಲ; ನಾವು ಆಡಿದ ಮಾತು ಅವಳಿಗೆ ಅರ್ಥವಾಗುತ್ತೆ. ಆದ್ದರಿಂದ ನಾವಿಬ್ಬರೇ ಪ್ರೈವೆಟ್ಟಾಗಿ ಮಾತನಾಡಬೇಕು ಅಂತ ಕಳುಹಿಸಿಬಿಟ್ಟೆ. ಇನ್ನೂ ಯಾರಾದರೂ ಮನೆಯಲ್ಲಿ ಇದ್ದಾರೋ?"

"ಇನ್ನು ಯಾರು? ಆ ಅಡುಗೆಯವನು ಇದ್ದಾನೆ."

"ಬರಹೇಳಿ. ಅವನಿಗೆ ಏನಾದರೂ ಹೇಳಿ ಕಳುಹಿಸಿ. ನಾವಿಬ್ಬರೇ ಮಾತನಾಡುವ ಭಾಗ ಬಹಳ ಇದೆ. ಆಳುಕಾಳು ಎಲ್ಲರನ್ನೂ ಕಳುಹಿಸಿಬಿಟ್ಟರಂತೆ!"

"ನನಗೋಸ್ಕರ ಯಾಕೆ ಅಷ್ಟು ದುಬಾರಿ ಖರ್ಚು ಎಂದು ಎಲ್ಲರನ್ನೂ ಕಳುಹಿಸಿಬಿಟ್ಟೆ! ಈ ಮನೆಯನ್ನೂ ಬಿಟ್ಟುಬಿಟ್ಟು ಒಂದು ಸಣ್ಣ ಮನೆ ತೆಗೆದುಕೊಂಡು ಇದ್ದುಬಿಡೋಣ ಅಂತ ಇದ್ದೇನೆ. ಒಬ್ಬ ಹೆಣ್ಣಾಳು ಒಬ್ಬ ತೋಟದ ಮಾಲಿ ಇದ್ದರೆ ಸಾಕು. ಒಂದೊಂದು ಸಲ ನಾನೇ ಅಡುಗೆ ಮಾಡಿಕೊಳ್ಳೋಣ ಅಂತ ಕೂಡ ಅನ್ನಿಸತ್ತೆ!"

"ಮೊದಲು ಅಡುಗೆಯವನನ್ನು ಕಳುಹಿಸಿ. ಏನೂ ತೋರದಿದ್ದರೆ ಕರೆಯಿರಿ. ನಾನು ನಮ್ಮ ಮನೆಗೆ ಹೋಗಿ ನನ್ನ ಪ್ಯಾಸ್ ಬುಕ್ಕು ತಕೊಂಡು ಬಾ ಅಂತ ಹೇಳ್ತೀನಿ."

ಅಡುಗೆಯವನು ಬಂದನು. ಸೀತಮ್ಮನು "ನಾರಣಪ್ಪ, ಒಂದು ಅವಿವೇಕವಾಗಿ ಹೋಗಿದೆಯಲ್ಲ!" ಎಂದಳು. ಆ ದನಿಯಲ್ಲಿ ನಿನ್ನಿಂದ ಅದು ಸರಿಹೋಗಬೇಕು ಎಂಬ ಅರ್ಥ ಒಡೆದು ಕಾಣಿಸುತ್ತಿತ್ತು. ನಾರಣಪ್ಪನು ಸೀತಮ್ಮನನ್ನು ಅರಿಯದವನಲ್ಲ; ಅವಳ ಕೀರ್ತಿಯನ್ನೂ ರೂಪಾಯಿಗೆ ಹದಿನಾರಾಣೆಯಷ್ಟು ಅಲ್ಲದಿದ್ದರೆ ಹೋಗಲಿ, ಹನ್ನೆರಡಾಣೆಯಷ್ಟಾದರೂ ಬಲ್ಲ. ತಾನು ಕೇಳಿದ್ದಷ್ಟೂ ಪೂರ್ತಿಯಾಗಿ ನಂಬಿಯೂ ಇದ್ದ. ನಗುನಗುತ್ತ "ಹೇಳಿ ತಾಯಿ, ಆದರೆ ಸರಿಮಾಡೋಣ" ಎಂದ.

"ಇನ್ನೇನೂ ಇಲ್ಲ. ನಮ್ಮ ಮನೆಯಲ್ಲಿ ಪ್ಯಾಸ್-ಬುಕ್ ಬಿಟ್ಟು ಬಂದಿದ್ದೇನೆ; ಹೋಗಿ ತರಬೇಕು; ಮಗು ಹೋಗಬೇಕು ಅಂದಳು. ಅವಳಿಗೆ ಕಾರು ಕೊಟ್ಟು ಕಳುಹಿಸಿದೆ, ಏಳು ಗಂಟೆಗೆ ಕಾರು ಬರುತ್ತೆ. ಅಷ್ಟರೊಳಗಾಗಿ ನೀನು ಹೋಗಿ ಪ್ಯಾಸ್-ಬುಕ್ ತಂದುಬಿಡಬೇಕಲ್ಲ. ಇಕೋ, ಬಸ್ ಛಾರ್ಜು; ಒಂದು ರೂಪಾಯಿ ಸಾಕಲ್ಲ!"

"ಅಡುಗೆಗೆ ಹೊತ್ತಾಗುತ್ತೆ!"

"ಇವೊತ್ತು ನಿಮ್ಮ ಅಮ್ಮ ಅವರು ನಮ್ಮ ಮನೆಗೆ ಊಟಕ್ಕೆ ಬರುತ್ತಾರೆ. ಅದೂ ನಮ್ಮ ಮನೆಯಲ್ಲಿ ಹೇಳಿ ಬಂದುಬಿಡಿ."

ನಾರಣಪ್ಪ ಅರ್ಥಮಾಡಿಕೊಂಡ. ಮಾರಿ ಕಣ್ಣು ಹೋತನ ಮೇಲೆ. ಈ ಮಹಾಮಾರಿ ಬಂದಿದ್ದಾಳೆ. ಇನ್ನು ಏನು ಸಂಧಾನ ಹೂಡಿದ್ದಾಳೋ? ಅದಕ್ಕೇ ನನ್ನನ್ನು ಇಲ್ಲಿಂದ ಸಾಗಿಸುತ್ತಿದ್ದಾಳೆ ಎನ್ನಿಸಿತು. ತನಗೇಕೆ? ಇದ್ದರೆ ಈ ಊರು, ಹೋದರೆ ಮುಂದಣ ಊರು. ರಾಯರ ಇನ್ಷ್ಯೂರೆನ್ಸ್ ಹಣ ಬಂದಿದೆ. ಮಾಡಿದರೆ ಇನ್ನೇನು ಮಾಡಿಯಾಳು? ಅದರಲ್ಲಿ ಅಷ್ಟು ಸಮಾಜಕ್ಕೆ ತೆಗೆದುಕೊಂಡು ಹೋದಾಳು. ಹಾಗೆ ಆದರೆತಾನೇ ಏನು? ಹಾವು ಕೊಂದು ಹದ್ದಿಗೆ ಹಾಕುತ್ತಾಳೆ. ಏನು ನಷ್ಟ!" ಎಂದು ಏನೇನೋ ಯೋಚಿಸಿಕೊಂಡು ಪ್ಯಾಸ್‌ಬುಕ್ ತರಲು ಹೋದನು.

ಸೀತಮ್ಮನು ಮಾತಿಗೆ ಆರಂಭಿಸಿದಳು: ಮೋಹನೆಗೆ ಗೊತ್ತು, ಅವಳು ಮೊದಲುಮಾಡಿದರೆ ಎದುರುಗಡೆಯವರು ಒಪ್ಪುವ ವರೆಗೂ

ಬಿಡುವುದಿಲ್ಲ ಎಂದು. ಇನ್ನು ಏನು ಹೇಳುತ್ತಾಳೋ? ಒಪ್ಪದಿದ್ದರೆ ಏನೆನ್ನುತ್ತಾಳೋ ಎಂದು ಅವಳಿಗೂ ದಿಗಿಲು. ಆದರೂ ಯತ್ನವಿಲ್ಲದೆ ಮನುಷ್ಯನು ಹಿಡಿದುಕೊಂಡ ಹಕ್ಕಿಯ ಹಾಗೆ, ಅವಳ ಮಾತು ಕೇಳಲು ಸಿದ್ಧವಾಗಿ ಕುಳಿತಳು.

"ಇವೊತ್ತು ಬೆಳಿಗ್ಗೆ ನಿಮ್ಮ ಚಿಕ್ಕರಾಯರು ಬಂದಿದ್ದರು. ಏನೂ ಗಾಬರಿ ಬೀಳಬೇಡಿ. ನಿಮಗೂ ಅವರಿಗೂ ನಾನು ಗಂಟುಕಟ್ಟೆಲ್ಲ. ಆದರೂ ಅದು ಆಗೇ ಆಗುತ್ತೆ ಎಂದು ನನಗೂ ಗೊತ್ತಿದೆ. ಅದಿರಲಿ, ನನ್ನ ಮಾತು ಪೂರ್ತಿ ಕೇಳಿ. ನನಗೀಗ ನಲವತ್ತೈದು ವರ್ಷ. ನಾನು ಈ ಸಮಾಜಕ್ಕೆ ಇಪ್ಪತ್ತು ವರ್ಷ ಮೆಂಬರಾಗಿದ್ದೀನಿ. ಹತ್ತು ವರ್ಷದಿಂದ ಪ್ರೆಸಿಡೆಂಟ್ ಆಗಿದ್ದೀನಿ. ಈ ಊರಿನಲ್ಲಿ ಹೆಂಗುಸರಿಗೆ ನನಗಿಂತ ದುಡಿದವರು ಇನ್ನಿಲ್ಲ. ನಾಲ್ಕು ಮೆಟರ್ನಿಟಿ ಹೋಂ, ಮೂರು ನರ್ಸಿಂಗ್ ಹೋಂ, ಎರಡು ನರ್ಸರಿ ಸ್ಕೂಲು ಇಷ್ಟು ಆಗುವುದಕ್ಕೆ ನಾನು ಡೈರೆಕ್ಟ್ ಆಗಿ ಕಾರಣಳು. ಇಷ್ಟು ದಿವಸ ಆಗಿದೆಯಲ್ಲ, ನೀವೂ ಐದಾರು ವರ್ಷದಿಂದ ಮೆಂಬರಾಗಿದ್ದೀರಲ್ಲ; ನನ್ನ ವಿಚಾರವಾಗಿ ಯಾರಾದರೂ ಮಾತಾಡುವ ಹಾಗೆ ಇದೆಯೇನು? ನಿಮಗೆ ಅನ್ನಿಸಬಹುದು: "ಸೀತಮ್ಮನ್ನ ಎಲ್ಲರೂ ಹಾಗೆನ್ನುತ್ತಾರೆ, ಹೀಗೆನ್ನುತ್ತಾರೆ" ಅಂತ. ಅದೆಲ್ಲ ನಿಜ. ಆಯಿತು. ಯಾರಿಗೇನು ನಷ್ಟ? ನನ್ನ ಮಾತು ನನ್ನದು ಅಂತ ನಾನು ದಿಟ್ಟವಾಗಿರೋ ವೇಳೆಗೆ ಎಲ್ಲರೂ ನನ್ನನ್ನು ಗೌರವಿಸುತ್ತಿರುವುದು. ಅದಿರಲಿ. ಆಮೇಲೆ ಹೇಳುತ್ತೇನೆ. ಈಗ ಇವೊತ್ತಿನ ಮಾತು ಕೇಳಿ. ಚಿಕ್ಕರಾಯ ನಮ್ಮ ಮನೆಗೆ ಬಂದು ಗೊಳೋ ಅಂತ ಅತ್ತ. ನೀವು ಯಾವಾಗಲೂ ಅಳುತ್ತಲೇ ಇರುತ್ತೀರಂತೆ, ಹೀಗೇ ಇನ್ನೂ ಎರಡು ತಿಂಗಳು ಆದರೆ ಆಕೆ ಕೂಡ ಉಳೀತಾರೋ ಇಲ್ಲವೋ? ನೀವು ಹೋಗಿ ಏನಾದರೂ ಮಾಡಿ ಆಕೆಯನ್ನು ಆ ದುಃಖದ ಗುಹೆಯಿಂದ ಈಚೆಗೆ ಕರೆದುಕೊಂಡುಬರಬೇಕು. ಇದು ನಿಮ್ಮಿಂದ ಸಾಧ್ಯ! ಇತರರಿಂದ ಇಲ್ಲ. ಈ ಉಪಕಾರ ಮಾಡಿ ಅಂತ ಈಗ ಐನೂರು ನಿಮ್ಮ ಸಮಾಜಕ್ಕೆ ಕೊಟ್ಟಿದ್ದೇನೆ; ಇನ್ನು ಐನೂರು ಕೊಡುತ್ತೇನೆ, ಅಂತ ಹೇಳಿ ಒಂದು

ಚೆಕ್ ಕೊಟ್ಟು ಹೋಗಿದ್ದಾರೆ. ನೀವು ದೊಡ್ಡ ಮನಸ್ಸು ಮಾಡಿ ಈ ದುಃಖ ಬಿಟ್ಟು ಮೊದಲಿನ ಹಾಗಾದರೆ ಸಮಾಜಕ್ಕೆ ಇನ್ನೂ ಐನೂರು ರೂಪಾಯಿ ಬರುತ್ತೆ. ಏನು ಹೇಳುತ್ತೀರಿ? ನಿಮ್ಮನ್ನು ತಾನೇ ನಾನು ಥ್ಯಾಂಕ್ ಮಾಡಬೇಕಾದ್ದು ಈ ಸಾವಿರ ರೂಪಾಯಿಗೆ?"

ಮೋಹನೆಯು ಸೀತಮ್ಮನ ಮಾತು ಕೇಳಿದಳು: "ನಾನು ಗಂಟು ಕಟ್ಟಿಲ್ಲ; ಆದರೂ ಆಗೇ ಆಗುತ್ತೆ" ಎಂಬ ಅವಳ ಮಾತು ಕೇಳಿ ಅವಳಿಗೆ ಗಾಬರಿಯಾಯಿತು. ಪ್ರಾಣೇಶನ ಎದುರಿಗೆ ತಾನು ಹೆಚ್ಚಾಗಿ ಅತ್ತಿಲ್ಲ; ಆದರೂ ಇವಳ ಹತ್ತಿರ ಹಾಗೆ ಹೇಳಿ ಇವಳನ್ನು ಕಳುಹಿಸಬೇಕಾದರೆ, ಅವನು ತನ್ನ ಲಾಯರಿ ಬುದ್ಧಿಯನ್ನು ತೋರಿಸಿರಬೇಕು. ಅಂದು ತಾನು ಮದರಾಸಿನಲ್ಲಿ ಬಿದ್ದು ಹೋಗುತ್ತಿದ್ದಾಗ ಅವನು ಹಿಡಿದುಕೊಂಡದ್ದು ಸಜ್ಜನನ ರೀತಿಯಲ್ಲ; ಅದೇ ಭಾವ ಮುಂದುವರಿದಿದೆಯೋ; ಅದೇ ಸಂಧಾನದಲ್ಲಿ ಇದ್ದಾನೋ? ಹಾಗಾದರೆ ಅವನೇ ಬಲೆ ಬೀಸುತ್ತಿದ್ದಾನೋ? ಅಥವಾ ತನ್ನ ಮನಸ್ಸಿನಲ್ಲಿ ಇದ್ದುದನ್ನು ತಾನೇ ಯಾವಾಗಲಾದರೂ ತೋರಿಸಿಬಿಟ್ಟಿದ್ದೇನೋ? ಎಂದು ಏನೇನೋ ಯೋಚನೆಗಳು ತಲೆತುಂಬ ತುಂಬಿ ಅವಳಿಗೆ ಹುಚ್ಚು ಹಿಡಿದಂತಾಯಿತು.

ಸೀತಮ್ಮನು ತನ್ನ ಮಾತಿಗೆ ಉತ್ತರ ಬರದಿದ್ದುದನ್ನು ಕಂಡು ಮತ್ತೆ ಹೇಳಿದಳು: "ನೋಡಿ, ಮೋಹನಬಾಯಿ, ಇದು ಹೊಸ ಯುಗ, ಹಿಂದಲ ಯುಗದಲ್ಲಿ ಹೆಣ್ಣಿಗೆ ಜೀವನದ ಗುರಿ ಪಾತಿವ್ರತ್ಯ. ಸೀತಾ, ಸಾವಿತ್ರೀ, ದಮಯಂತಿ, ಇವರು ಆಗಿನ ಕಾಲದ ಹೆಣ್ಣಿನ ಗುರಿ. ಆಗ ಹೆಣ್ಣಿಗಿಂತ ಗಂಡು ಹೆಚ್ಚು ಎಂಬ ಭಾವ. ಎಲ್ಲರಿಗಿಂತ ಬ್ರಾಹ್ಮಣ ಹೆಚ್ಚು ಅನ್ನುವ ಹುಚ್ಚು ಹಿಡಿದಿದ್ದಾಗ, ಸಮಾಜವೆಲ್ಲ ಮೆಟ್ಟಲು ಮೆಟ್ಟಲಾಗಿತ್ತು. ಮೆಟ್ಟಲು ಮೆಟ್ಟಲಿನಲ್ಲೂ ಎರಡು ಅಂತಸ್ತು ಗಂಡು ಅಂದರೆ ಹೆಚ್ಚು; ಹೆಣ್ಣು ಅಂದರೆ ಕಡಿಮೆ. ಈಗ ಡೆಮೊಕ್ರಸಿ ಬಂದಿದಿರಿ. ನಾವೆಲ್ಲ ಈಗ ಇಪ್ಪತ್ತು ವರ್ಷದ ಹಿಂದೆ ಕಂಡ ಕನಸು ಇವೊತ್ತು ದಿಟವಾಗಿದೆ. ಲಾ ಎದುರಿಗೆ ಹೆಣ್ಣು ಗಂಡು ಹಾರವ ಹೊಲೆಯ ಎಲ್ಲಾ

ಒಂದೇ ಎಂದು ಆಗಿದೆ. ನಿಮ್ಮ ಗಂಡ ಹೋದರು. ಅದಕ್ಕಾಗಿ ನೀವೂ ಇಷ್ಟು ದಿವಸ ಅತ್ತಿರಿ. ಹಾಗಂತ ಸತ್ತ ಗಂಡನ್ನ ನೆನೆದು ಅಳುತ್ತ ಅಳುತ್ತ ದಿನವೂ ಗಳಿಗೆ ಗಳಿಗೆಗೂ ನೀವೂ ಸಾಯಬೇಕೇನು? ಹಾಗೆ ಸಾಯಬೇಕು ಅನ್ನುವುದಾದರೆ ಒಂದೇ ಸಲ ಸತ್ತುಹೋಗಿ. ನಮ್ಮ ಅಬ್ಜಕ್ಷ್ಯ ಏನೂ ಇಲ್ಲ. ಆದರೆ, ಬದುಕಿದ್ದು ಸತ್ತವರ ಹಾಗಾದರೆ, ನಾನೊಬ್ಬಳಲ್ಲ, ಸಮಾಜಕ್ಕೆ ಸಮಾಜವೇ ನಿಮ್ಮನ್ನು ಶಪಿಸತ್ತೇ? ಈಗ ಹಿಂದಿನ ಹಾಗೆ ಬ್ಲೈಡ್ ಫೆಯಿತ್ ಅಲ್ಲರಿ; ಈಗ ನಾವು ಸಿವಿಲೈಸ್ಡ್; ನಾಗರಿಕರು ಅಂದರೆ, ಅದಕ್ಕೆ ತಕ್ಕ ಹಾಗ ಇರಬೇಕು. ನೀವು ಸಾವಿರ ಹೇಳಿ ನಿಮ್ಮ ದುಃಖ ಬೆಟ್ಟದಷ್ಟಿರಲಿ, ನೀವು ಅದನ್ನೆಲ್ಲ ನುಂಗಲೇಬೇಕು. ನೀವು ಸಮಾಜಕ್ಕೆ ದುಡಿಯಲೇಬೇಕು. ಹೊರಗೆ ಬರಲೇಬೇಕು. ಗಂಡ ಇದ್ದಾಗ ನೀವು ನಗತಾ ಇದ್ದ ಹಾಗೇ ಈಗಲೂ ಇರಬೇಕು. ಅಷ್ಟೇನ್ರಿ? ದುಡುಕಿದಳು ಅಂದುಕೊಂಡರೂ ಅಂದುಕೊಳ್ರಿ. ನೀವು ಯಾವುದರಲ್ಲೂ ಇಲ್ಲ ಅಂದುಕೊಳ್ಳಬಾರದು."

"ಹಾಗಂದರೆ?"

"ಹಾಗಂದರೆ, ಕೇಳಿ. ನೀವು ಗಂಡುಸರಾಗಿದ್ದು, ನಿಮ್ಮ ಮೆಚ್ಚಿನ ಹೆಂಡಿತಿಯೇ ಹೋಗಿದ್ದರೆ ಏನು ಮಾಡುತಿದ್ದಿರಿ?"

"ಕೆಲವು ದಿನವಾದ ಮೇಲೆ ಇನ್ನೊಂದು ಮದುವೆ ಮಾಡಿ ಕೊಳ್ಳುತಿದ್ದೆ"

"ಈಗಲೂ ಅದೇ ಮಾಡಿ"

"ಅದು ಹೇಗೆ ಸಾಧ್ಯ?"

"ಇದಕ್ಕೇ ನಿಮಗೆ ಬುದ್ಧಿ ಇಲ್ಲ ಎನ್ನೋದು. ಹಿ
ಹೇಳಿದ್ದು ಏನು ಸರಿಯೋ ಏನು ತಪ್ಪೋ ... ...ಂದಿನ ಹಿರಿಯರು
ಮನುಷ್ಯ ಬದುಕೋದು ಇಲ್ಲೀ ... ...ಒಂದು ಮಾತ್ರ ನಿಜ.
ಮುಂದೆಯೂ ಸುಖವಾಗಿರಬೇಕು; ... ...ಖವಾಗಿರಬೇಕು; ಇಲ್ಲಿಂದ
ಬೇಕು ಅಂದರು. ಬರುಬರುತ್ತ ... ಅದಕ್ಕೆ ಬೇಕಾದ್ದು ಮಾಡಿಕೋ
..., ಈ ಇಹ, ಆ ಪರ, ಎರಡೂ ಒಂದೇ

ಶೋಕ ಅನ್ನೋದು ಮರೆತು ಇದಕ್ಕಿಂತ ಅದು ಹೆಚ್ಚು ಅನ್ನುವ ಭ್ರಾಂತಿ ಬಂತು ಜನಕ್ಕೆ. ಸರಿ. ಎಲ್ಲರೂ ಪರಲೋಕಕ್ಕೆ ಬುತ್ತಿ ಕಟ್ಟಿದ್ದೂ ಕಟ್ಟಿದ್ದೇ! ಕುಂತೀ ಮಕ್ಕಳು ಸ್ವರ್ಗ ಭೂಮಿಗೆ ತಂದರು ಅನ್ನೋದನ್ನ ಮರೆತು ಎಲ್ಲರೂ ಸ್ವರ್ಗಕ್ಕೇ ಹೊರಟುಬಿಟ್ಟರು. ದಾರಿಯಲ್ಲಿ ರೈಲು ಕುಸಿದುಬಿತ್ತು. ಎಲ್ಲರೂ ನರಕದ ಪಾಲಾದರು. ನೀವೂ ಹಾಗೆ ಮಾಡಬೇಡಿ. ನನ್ನ ಮಾತು ಕೇಳಿ. ನಿಮ್ಮ ಜೀವನ ಗಿಡ ಬೆಳೆದ ಹಾಗೆ ಬೆಳೆಯಲಿ. ಎಲೆಯ ಕಾಲದಲ್ಲಿ ಎಲೆ, ಹೂವಿನ ಕಾಲದಲ್ಲಿ ಹೂ, ಹಣ್ಣಿನ ಕಾಲದಲ್ಲಿ ಹಣ್ಣು, ಎಲ್ಲವೂ ಇದ್ದರೆ ಕಣ್ರೀ ಗಿಡ. ಅದು ಬಿಟ್ಟು ಒಂದೇ ಒಂದು ಆಗಿದ್ದರೆ ಪ್ರಯೋಜನ ಏನು? ಈಗ ನಿಮಗೆ ಆಗಬೇಕಾದ ಹೊಸ ಮದುವೆ ಇದು. ನೀವು ಧೈರ್ಯವಾಗಿ ಸಮಾಜ ಸೇವೆಗೆ ನಿಲ್ಲಿ. ಈಗ ಹೊಸ ಯುಗ ಬಂದಿದೆ. ಈ ಯುಗದಲ್ಲಿ ಹೆಣ್ಣು ಗಂಡಿಗೆ ಸಮ. ಹೆಣ್ಣು ಹೆಚ್ಚೂ ಅಲ್ಲ, ಕಡಿಮೆಯೂ ಅಲ್ಲ. ಹೆಣ್ಣು ಹೋದರೆ ಗಂಡು ಇನ್ನೊಂದು ಹೆಣ್ಣು ಹುಡುಕಿಕೊಳ್ಳುವಂತೆ, ಹೆಣ್ಣೂ ಒಂದು ಗಂಡು ಕಳೆದುಕೊಂಡಾಗ ಇನ್ನೊಂದು ಗಂಡು ಹುಡುಕಿ ಕೊಂಡರೆ ತಪ್ಪೇನು? ನೀವು ರಮೇಶನ ಹೆಂಡತಿಯಾಗಿದ್ದಾಗ ಹೆಣ್ಣಾಗಿ ಹೆಣ್ಣು ಹೆಂಗುಸಾಗಿ ಸಂಸಾರ ಮಾಡಿದಿರಿ. ಆ ಜನ್ಮ ಮುಗಿಯಿತು. ಇನ್ನೊಂದು ಜನ್ಮ ಬಂದಿದೆ. ಗಂಡನ ಆಟದ ಬೊಂಬೆಯಾಗಿ ಬಾಳಿದ ...ಣ್ಯ ನಿಮಗೆ ಇಂದು ಮನೆ ಮಠ ಹಣಕಾಸು ಎಲ್ಲ ಕೊಟ್ಟಿದೆ. ನೀವು ...ಕ್ಕಾಗಿ ಅಳಬೇಕಾಗಿಲ್ಲ. ಅಳುವಿನ ಆಳ ಕಂಡ ನೀವು, ಇನ್ನೂ

ಪ್ರ... ...ಣದಿಂದ ಅಳುತ್ತಿರುವವರ ಕಣ್ಣೀರು ಅಳಿಸುವ ದೊಡ್ಡ ಜೀವನ... ಅದಕ್ಕಿಂತ ಪುಣ್ಯವಿಲ್ಲ. ಇನ್ನೂ ಪುಣ್ಯ ಮಾಡಬೇಕು ಎಷ್ಟೋ ಕಾ... ...ದ ದಿವಸ ದೇವಸ್ಥಾನಲ್ಲಿ ಪೂಜೆ ಮಾಡಿಸಿ: ಕೆಲಸ ಕೈಗೊಳ್ಳಿ. ...ಮ್ಮ ಮನೆಯಲ್ಲಿಯೇ ಪೂಜೆ ಮಾಡಿಸಿ. ಎಂದರೆ, ನಿಮಗೆ ತೋ... ...ದು ಮಾತು. ಜನಕ್ಕೆ ಈ ಹಳೆಯ ಇನ್ನೂ ಬೇಕು ಅಂದರೆ ನಿ... ...ಯೊಲ್ಲ. ನೀವು ಬೆಳಗಿಂದ ಅದೆಲ್ಲ ಹಳೆಯ ತರಹ. ಆದರೂ, ಒ... ...ವಿರ ಖೂನಿ ಮಾಡಿ; ತರಹ ಹಿಡಿಸುವ ಹಾಗೆ ಹೊಸ ತರಹ ಹಿ... ಸಂಜೆವರೆಗೂ ಮಾಡಬಾರದ ಕೆಲಸ ಮಾಡಿ, ಸ...

ದರೋಡೆ ಮಾಡಿ; ಹಾದರ ಮಾಡಿ; ಕಳ್ಳತನ ಮಾಡಿ; ಪೂಜೆ ಮಾಡಿಸುತ್ತಿದ್ದರೆ, ಜನ ನಿಮ್ಮನ್ನು ಹೊಗಳುತ್ತೆ. ನಾನು ಈ ಮಾತು ಒತ್ತಿಒತ್ತಿ ಹೇಳುತ್ತೀನಿ. ನೀವು ಒಳ್ಳೆಯವರು ಅನ್ನಿಸಿಕೊಳ್ಳುವ ದಾರಿ ಇದು. ತಿಂಗಳಿಗೆ ಒಂದು ಇಪ್ಪತ್ತು ಮೂವತ್ತು ರೂಪಾಯಿ ಅದಕ್ಕಾಗಿ ಖರ್ಚು. ಅಬ್ಬಾ! ಅಂದರೆ ಐವತ್ತು. ಅದು ಬೊಗಳುವ ನಾಯಿಯ ಬಾಯಿಗೆ ಹಾಕುವ ಬ್ರೆಡ್ ಚೂರು. ಇನ್ನು ಗಂಡಿಗಿಂತ ಗಂಡಾಗಿ, ವಿಶಾಲ ಜೀವನವನ್ನು ಅಂಗೀಕರಿಸಿ ಸಮಾಜ ಸೇವೆ ಮಾಡಿ, ಅದರಲ್ಲಿಯೂ ಈಗಂತೂ ನೀವು ಕನ್ಯಾಮಂದಿರ ಸ್ಥಾಪಿಸಬೇಕು ಅಂತಿದ್ದೀರಿ. ಅದನ್ನು ದೊಡ್ಡದು ಮಾಡಿ. ಅಲ್ಲಿ ಬೆಳೆದ ಹುಡುಗಿಯರು ಅನ್ನಕ್ಕಾಗಿ ಗಂಡಿನ ದಾಸ್ಯವನ್ನೊಪ್ಪಿಕೊಳ್ಳುವ ಹೆಣ್ಣು ಹೆಂಗುಸರಾಗದೆ, ಜೀವನದ ರಥಕ್ಕೆ ಹೂಡಿರುವ ಕುದುರೆಗಳು ನಾವು ಎಂದು ಹೇಳುವ ದಿಟ್ಟತನದ ಗಂಡು ಹೆಂಗುಸರಾಗಲಿ; ಮೊದಮೊದಲು ಇವರನ್ನು ಲೋಕ ಗಂಡುಬೀರಿಯರೆನ್ನುವುದು. ಹೆದರಬೇಡಿ, ಧೈರ್ಯವಾಗಿ ನುಗ್ಗಿ."

"ನಾನೂ ಅದೇ ಮನಸ್ಸಿನಲ್ಲಿದ್ದೇನೆ. ಕನ್ಯಾಮಂದಿರ ನಡೆಸಲೇಬೇಕು ಎಂದು ಗೊತ್ತು ಮಾಡಿಕೊಂಡಿದ್ದೇನೆ."

"ಗೊತ್ತುಮಾಡಿಕೊಳ್ಳುವುದೇ ಬೇರೆ! ಅದನ್ನು ನಡೆಸುವುದೇ ಬೇರೆ! ದೊಡ್ಡರಾಯರ ಜಾಗದಲ್ಲಿ ನೀವೇ ಪ್ರೆಸಿಡೆಂಟರಾಗಿ ನಿಲ್ಲಿ. ನಿಮ್ಮ ಜೊತೆಗೆ ಇನ್ನಿಬ್ಬರು ಹೆಂಗುಸರನ್ನು ಬೇಕಾದರೆ ತೆಗೆದುಕೊಳ್ಳಿ. ಲೌಕಿಕವಾಗಿ ನಿಮ್ಮ ಚಿಕ್ಕರಾಯರಿಂದ ಸಹಾಯ ಪಡೆದುಕೊಳ್ಳಿ."

"ಹೂ, ಆಗಲಮ್ಮ."

"ಸೋತು, ಉತ್ತರ ಹೇಳುವುದಕ್ಕೆ ಯತ್ನವಿಲ್ಲದಾಗ ಹೇಳುವ ಹಾಗೆ, 'ಹೂ, ಆಗಲಮ್ಮ!' ಅನ್ನಬೇಡಿ. ಯಾವೊತ್ತು ಸುರುಮಾಡುತೀರಿ ಅದನ್ನು ಹೇಳಿ."

"ಚಿಕ್ಕರಾಯರನ್ನು ಕೇಳಿ ಹೇಳುತ್ತೇನೆ, ಆಯಿತು. ಸೀತಮ್ಮ! ಅದೇನು ಹಾಗಂಪರಲ್ಲ. ಗಂಟುಬೀಳುತ್ತೆ ಅಂದರಲ್ಲ ಅದೇಕೆ?"

"ಅದೇ! ನೀವೂ ಅವರೂ ಪದೇಪದೇ ಸಂಧಿಸಬೇಕು. ನೀವು ರೂಪವಂತರು. ಅವರು ಬುದ್ಧಿವಂತರು. ಚಿಕ್ಕರಾಯರ ಸ್ವಭಾವ ಹಣಕ್ಕಾಗಿ ಏನು ಬೇಕಾದರೂ ಮಾಡಿಬಿಡುವಂತಹವರು. ಹೆಣ್ಣು ಹೊನ್ನು ಎರಡರಲ್ಲಿ ಒಂದೊಂದೇ ಸಾಕು, ಈ ಗಂಡುಸರು ಅನ್ನುವ ಮೃಗಗಳನ್ನು ಹಿಡಿಯುವುದಕ್ಕೆ ಎರಡೂ ನಿಮ್ಮಲ್ಲಿ ಇದೆ. ಸಾಲದೆ ನಿಮಗೆ ಯಾರೂ ದಿಕ್ಕಿಲ್ಲ. ಈಗಲೂ ಕೂಡ ಡೈವೋರ್ಸ್, ವಿಡೋ ಮ್ಯಾರೆಜ್, ಎಲ್ಲಾ ಒಪ್ಪಿದೆ. ಅದರಿಂದ ಹಾಗೆಂದೆ."

"ನಾನು ಅಂಥವಳೇ?"

"ಮೋಹನಬಾಯಿ, ನೀವು ಕೋಪಮಾಡಿಕೊಳ್ಳಬೇಡಿ. ನಾನು ನಿಮಗಿಂತ ಗಟ್ಟಿಗಳು. ನಿಮ್ಮ ಹಾಗೆ ಕಾಫಿಯಲ್ಲಿ ಅದ್ದಿದ ಬ್ರೆಡ್ ಅಲ್ಲ. ನನ್ನಂಥಾವಳನ್ನು ದಾರಿದಾರಿ ಹಿಡಿಸಿಬಿಟ್ಟರು. ನನಗೆ ಬುದ್ಧಿ ಇತ್ತು; ಕಡಲೇ ತಿಂದು ಕೈತೊಳೆದಹಾಗೆ ಮಾಡಿಕೊಂಡೆ. ಇದರಮೇಲೆ, ನಾನು ಈ ಮಾತು ನಿಮಗೆ ಹೇಳಬೇಕು ಅಂತಲೇ ಬಂದದ್ದು. ಈ ಭೋಗ ಎನ್ನೋದೂ ಹಸಿವು ಬಾಯಾರಿಕೆ ಹಾಗೆ ಆರೋಗ್ಯವಾಗಿರುವ ದೇಹದ ಒಂದು ಲಕ್ಷಣ. ಅದು ತಡೆದರೆ ಅದೇ ಒಂದು ಕೆಲಸ. ಅದರಲ್ಲಿ ಗೆಲ್ಲುವುದು ಎಂದರೆ ಮಿಕ್ಕ ಕಡೆಗಳಲ್ಲೆಲ್ಲಾ ಸೋಲು. ಅನ್ನ ಇದೆ ಅಂತ ತಿಂದವ ಕೆಟ್ಟ ಅನ್ನುವಹಾಗೆ, ಅದೇ ಪ್ರಾಧಾನ್ಯಮಾಡಬಾರದು. ಮನೆಯಲ್ಲಿ ಮಲಗುವ ಮನೆ ಇದ್ದಹಾಗೆ ಅದೂ ಒಂದು ಅಂದುಕೊಂಡರೆ ತಪ್ಪಿಲ್ಲ."

"ಎಲ್ಲರೂ ಈ ಮಾತೂ ಒಪ್ಪುತ್ತಾರೆಯೇ?"

ಸೀತಮ್ಮ ನಕ್ಕಳು: "ನಿಜ, ಎಲ್ಲರೂ ಒಪ್ಪಲಿ, ಬಿಡಲಿ, ನೀವು ಒಪ್ಪಿದ್ದೀರಿ ಅಂತ ಆಯಿತು. ಅದು ನಿಮ್ಮ ಸ್ವಂತ ವಿಷಯ. ಅದು ತಪ್ಪು ಎಂದರೆ, ಹಾಗೆಂದವರ ಬಾಯಿ ಮುಚ್ಚುವ ದಾರಿಯೂ ಹೇಳಿದ್ದೀನಿ. ನಮ್ಮ ಕಾರು ಬರುವುದಕ್ಕೆ ಮುಂಚೆ ಕುದುರೆಗಾಡಿ ಇತ್ತು ನಮ್ಮ ಮನೆಯಲ್ಲಿ. ಕುದುರೆಗೆ ಮಾಲೀಸ್ ಇಲ್ಲದಿದ್ದರೆ ಅದರಿಂದ ಏನಾದರೂ ಕೆಲಸ ನಡೆಯುತ್ತಿತ್ತಾ ಅಂತಿದ್ದಿರಾ? ಉಹುಂ. ಹಾಗೆ,

ಗಂಡಿಗೆ ಹೆಣ್ಣು, ಹೆಣ್ಣಿಗೆ ಗಂಡು ಸಲ್ಲಿಸುವ ಮಾಲೀಸ್ ಉಪಚಾರ ಈ ಸೇವೆ. ಈ ಜನ್ಮದಲ್ಲಿ ಅದೇ ಮುಖ್ಯವಲ್ಲ; ಹಾಗೆಂದು ಅದನ್ನು ತಳ್ಳುವಂತೆಯೂ ಇಲ್ಲ, ಇವರ ಮೇಲೆ, ನಿಮಗೆ ಕೆಲವು ದಿನವಾದರೂ ರಕ್ಷಣೆಬೇಕು. ಆ ರಕ್ಷಣೆ ಗುರುತು ಕಂಡಕಡೆಯಿಂದ ಬಂದರೆ ಬೇಡ ಎನ್ನುವರಾರು? ಅದರಿಂದ ನಾನು ಹಾಗಂದೆ. ಕೋಪ ಇಲ್ಲವಷ್ಟೇ?"

"ನೀವು ಇಷ್ಟು ಹೇಳಿದಮೇಲೆ, ನಾನು ಸುಮ್ಮನಿರುವುದು ಸಾಧ್ಯ ವಿಲ್ಲ. ನಾನೂ ಎರಡು ಮಾತು ಹೇಳ್ತೀನಿ ಕೇಳಿ."

"ಹೇಳಿ."

"ನಮ್ಮ ಯಜಮಾನರು ಕ್ಷಯದಲ್ಲಿ ಸತ್ತುಹೋದದ್ದು. ನಿಮಗೆ ಗೊತ್ತಿರಬೇಕು."

"ಹೌದು."

"ಅವರಿಗೆ ಕ್ಷಯ ಬಲವಾಗುವುದಕ್ಕೆ ಮುಂಚೆ ಜ್ಞಾನ ಚೆನ್ನಾಗಿತ್ತು, ಒಂದು ದಿನ ವೀಣಾ ಹೊರಗೆ ಹೋಗಿರುವಾಗ ನನ್ನನ್ನು ಕರೆದು ಕೈಹಿಡಿದುಕೊಂಡು ಒಂದು ಮಾತು ಹೇಳಿದ್ದರು: 'ನೋಡು, ಮೋಹನ, ಜೀವನದಲ್ಲಿ ತನಗೆ ತೋರಿದಂತೆ ಇರುವುದರಲ್ಲಿ ಒಂದು ಸುಖವಿದೆ. ನೀನು ಮುಂದೆ ಒಂಟಿಯಾಗುವ ಕಾಲ ಬರಬಹುದು. ಆಗ ಬುದ್ಧಿ ಹತೋಟಿ ಯಲ್ಲಿ ಇಟ್ಟುಕೊಂಡು, ತೋರಿದಹಾಗೆ ಇರುವ ಸುಖವನ್ನು ಅನುಭವಿ ಸಿಕೊ. ಇಲ್ಲದ ಪ್ರಾರಬ್ಧಗಳಿಗೆ ಅಳಬೇಡ' ಅಂದರು. ಆಗ ನನಗೆ ಅದು ಅರ್ಥವಾಗಲಿಲ್ಲ. ಈಗ ನೀವು ಹೇಳಿದಮೇಲೆ ಅದಷ್ಟೂ ಏನೋ ರೀತಿಯಾಗಿ ಅರ್ಥವಾಗುತ್ತಿದೆ."

ಸೀತಮ್ಮ ಗಂಭೀರಳಾದಳು; ಏನೋ ದೂರದಲ್ಲಿ ಏನೋ ಕಂಡ ಪ್ರವಾದಿಯಂತೆ ಅನ್ಯಮನಸ್ಕಳಾಗಿ ಹೇಳಿದಳು: "ಮೋಹನಬಾಯಿ, ನಾನೂ ಬಲ್ಲೆ. ಈಗ ಬರುಬರುತ್ತಾ ಹಿಂದಿನವರು ಸೀತಾಸಾವಿತ್ರಿಯ ರನ್ನು ಪೂಜೆಮಾಡುತ್ತಿದ್ದಂತೆ ನಾವು ಸಿನೀಮಾ ಸ್ಟಾರ್‌ಗಳನ್ನು ಪೂಜಿಸು ತ್ತೇವೋ ಏನೋ? ಇದೇ ಜೀವನದ ಲಕ್ಷ್ಯವೇ? ಎಂದು ಕೂಡ ನನಗೆ

ಎಷ್ಟೋ ದಿನ ಯೋಚನೆ ಬಂದಿದೆ. ಆದರೆ, ನಾವು ಪಾಶ್ಚಿಮಾತ್ಯರನ್ನ ಅಣಕಿಸುವುದರಲ್ಲಿ ಬಹಳ ದೂರ ಹೋಗಿದ್ದೇವೆ. ನಮ್ಮ ವಿದ್ಯಾಬುದ್ಧಿಗಳಲ್ಲಿ ಆ ಸಮಾಜದ ಗುರಿಯನ್ನೇ ಇಟ್ಟುಕೊಂಡಿದ್ದೇವೆ. ಆದರಿಂದ ನಾವೂ ಅವರಂತೆಯೇ ಆದರೆ ವಿಶೇಷವಿಲ್ಲ. ಅದು ಅವರಿಗೆ ಒಗ್ಗಿದೆ. ನಮಗೆ ಒಗ್ಗುತ್ತಿದೆ. ಎಲ್ಲದಕ್ಕಿಂತ ಹೆಚ್ಚಾಗಿ ನಮ್ಮ ಗಂಡುಮಕ್ಕಳು ತಮ್ಮ ಹೆಂಡಿತಿಯರು ಸಿನೀಮಾ ತಾರೆಗಳಾಗಬೇಕು ಎನ್ನುತ್ತಿದ್ದಾರೆ. ಹೆಣ್ಣಿಗೆ ಮದುವೆಯನ್ನು ಬಿಟ್ಟು ಗಂಡನ್ನು ಸೇರಿ ತಾಯಾಗುವುದನ್ನು ಬಿಟ್ಟು ಇನ್ನು ಯಾವುದೂ ಗುರಿ ಸಿಕ್ಕಿಲ್ಲ. ಅವಳ ದೇಹ, ಅವಳ ಬುದ್ಧಿ, ಅವಳ ಮನಸ್ಸು, ಸಮಾಜದ ಪರಿಸ್ಥಿತಿ, ಇವೆಲ್ಲ ಅವಳನ್ನ ದಾಸಿಯನ್ನಾಗಿ ಮಾಡಿ ಗೌರವವಾಗಿ ಆ ದಾಸ್ಯಕ್ಕೆ ತಾಯಿತನದ ಮುದ್ರೆಯೊತ್ತಿದೆ. ನಾನು ಸಮಾಜ ಮಾಡಿಕೊಂಡು ಹೆಣ್ಣಿನ ಬಾಳಿಗೆ ಹೊಸಜೀವ ತುಂಬಬೇಕು ಎಂದು ಮಾಡಿದ ಕೆಲಸದಲ್ಲಿ ನೂರಕ್ಕೆ ಒಂದು ಗೆದ್ದಿದೆಯೇ ಹೊರತು ಮಿಕ್ಕವೆಲ್ಲ ಸೋತಿವೆ. ಆ ಒಂದಕ್ಕಾಗಿ ಉಳಿದ ತೊಂಬತ್ತೊಂಭತ್ತು ಸೋತರೂ ಚಿಂತೆಯಿಲ್ಲ ಅಲ್ಲವೇ ಎಂದುಕೊಂಡರೂ, ಸೋಲು ಎಷ್ಟು ಭಾರಿ ಎಂದು ನನಗೂ ನೋವಿದೆ. ಆದರೂ, ಮೋಹನ ಬಾಯಿ, ನೀವು ನನ್ನ ಸೋದರಿ, ನನ್ನ ಹಿರಿಯ ಮಗಳು, ಅನ್ನುವ ಭಾವದಿಂದ ಹೇಳುತ್ತಿದ್ದೇನೆ ನಿಜ, ನಂಬಿ. ಬದಲಾಗಬೇಕು: ಬದಲಾಗಬೇಕು. ಅಯ್ಯೋ, ಗಂಡುಬೀರಿಯಾಗದ ಹೆಣ್ತನವನ್ನು ಬಿಡದೆ ಗಂಡಿನಮೇಲೆ ಸವಾರಿ ಮಾಡಬಲ್ಲ ಹೆಣ್ಣು ಬಂದಲ್ಲದೆ ನಮ್ಮ ಸಮಾಜ ಉದ್ಧಾರವಾಗೋಲ್ಲ. ಇದು ನಿಮ್ಮ ಕನ್ಯಾಮಂದಿರದ ಗುರಿಯಾಗಲಿ, ಆದರೇನು ಮಾಡುವುದು ? ನಮ್ಮ ಸಮಾಜವೇನು ? ಯಾವ ಸಮಾಜವೂ ನಾಯಿ ಬಾಲ. ಆದಷ್ಟು ಬೇಗ ಪೂರ್ವಸ್ಥಿತಿಯ ಕೈಗೊಂಡನಾಪಾರ್ಥ. ಸಮಾಜದಲ್ಲಿ ಗುರಿಯನ್ನು ಆರಿಸಿಕೊಂಡು ಅದಕ್ಕಾಗಿ ಹೆಣಗುವ ಧೀರರಿಲ್ಲ. ಅದಾಗುವವರೆಗೆ ನಮ್ಮ ಸಮಾಜ ಬದುಕುವುದೆಂತು? ಅಂತಹ ಧೀರರನ್ನು ಹೆರಬಲ್ಲ ಧೀರೆ ಯಾರಾಗಬೇಕು ಮೋಹನಬಾಯಿ. ನಮ್ಮ ಈ ಹೆಣ್ಣು ಬೊಂಬೆಗಳು. ಈಗ ಹೆಣ್ಣುದಾಸಿಯಾಗಿದ್ದಾಳೆ; ಗುಲಾಮ

ಳಾಗಿದ್ದಾಳೆ; ಗಂಡನ ಹಿಡಿಯನ್ನ, ಹೊಳಬಟ್ಟೆಗೆ ದೇಹವನ್ನು ಮಾರುವ, ಮಾರಿಕೊಂಡ ಬಾರಿದಿಯಾಗಿದ್ದಾಳೆ. ಇವಳ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳು ದಾಸರು, ಗುಲಾಮರು, ಆಗದೆ ಇನ್ನೇನು ಆದಾರು! ಸಮಾಜ ಸರಿಯಾಗಬೇಕಾದರೆ, ಗಂಡು ಸರಿಯಾಗಬೇಕೋ ಹೆಣ್ಣು ಸರಿಯಾಗ ಬೇಕೋ? ಎರಡೂ ಸೇರುವುದಕ್ಕೆ ಮುಂಚೆ ಸರಿಮಾಡಬೇಕೋ? ಸೇರಿದಮೇಲೆ ಸರಿಮಾಡಬೇಕೋ? ಹೇಳುವವರಿಲ್ಲ............ ..."

ಸೀತಮ್ಮನಿಗೆ ಮುಂದೆ ಮಾತನಾಡಲಾಗಲಿಲ್ಲ. ಕತ್ತು ಕಟ್ಟಿಬಂತು. ಅಳು ತಾನೇ ತಾನಾಗಿ ಅತ್ತುಬಿಟ್ಟಳು.

ಮೋಹನೆಯು ಆಕೆಯನ್ನು ಸಮಾಧಾನ ಮಾಡುತ್ತ. "ಏನಮ್ಮ, ಅಳಬೇಡ ಅಂತ ಹೇಳಲು ಬಂದಿರಿ. ನೀವೇ ಅಳುತ್ತಿದ್ದೀರಲ್ಲ." ಎಂದಳು.

ಸೀತಮ್ಮನು ಕಣ್ಣುಮೂಗು ಒರೆಸಿಕೊಂಡು ಹೇಳಿದಳು: "ಮೋಹನ ಬಾಯಿ. ನಿಮ್ಮ ಅಳು ಮಗ್ಗುಲ ಗಂಡ ಹೋದ ಅಂತ. ನನ್ನ ಅಳು ನನ್ನ ದೇಶ ಹೋಗುತ್ತಲ್ಲಾ ಅಂತ. ನಮ್ಮ ಹಿಂದಿನವರು ದೇವರು ದೇವರು ಅಂತ ನೂರೆಂಟು ದೇವರುಗಳನ್ನು, ದಿನಕ್ಕೊಂದು, ವಾರಕ್ಕೊಂದು, ದೇವರನ್ನು ಪೂಜೆಮಾಡುತ್ತಿದ್ದರಲ್ಲಾ! ಆ ದೇವರು ಗಳೆಲ್ಲ ಇಂದು ಎಲ್ಲಿ ಹೋದವು ಅಂತ ನಾನು ಕೇಳುತಿರೋದು. ಎಲ್ಲೆಲ್ಲೂ ಎತ್ತುಏರೀಗೆಳೀತು; ಕೋಣ ನೀರಿಗೆಳೀತು ಅನ್ನೋ ಹಾಗಾಗಿದೆ ಯಲ್ಲೆ ತಾಯಿ! ನಾನು ಹೇಗೆ ತಡೀಲೆ? ಇದು ನನ್ನ ಅಳು. ನಿನ್ನ ಅಳು ನೀನು ಧೈರ್ಯ ಮಾಡಿಯೇ ಸೋತು ಇನ್ನೊಬ್ಬರನ್ನು ಗಂಟು ಹಾಕಿ ಕೊಂಡರೆ ತೀರಿತು. ನನ್ನ ದುಃಖತೀರುವುದು ಅಂದು ಕೊಂಡಿದ್ದೀಯಾ? ಹೆಣ್ಣಿನ ಬೊಂಬೆ ಮಾಡಿಕೊಂಡು ಕುಣಿಸುವ ಗಂಡನ್ನು ನೋಡಿದರೆ, ಗಂಡಿನ ಕೈಗೆ ಸಿಕ್ಕಿ ನರಳುವ ಹೆಣ್ಣನ್ನು ಕಂಡರೆ, ನನ್ನ ದುಃಖ ಮರುಕಳಿಸಿ ಬರುತ್ತದೆ. ನನಗೇಕೆ ಈ ದುಃಖ? ಯಾವುದೆಲ್ಲಾದರೂ ಹಾಳಾಗಲಿ, ಅಂದುಕೊಳ್ಳುತ್ತೇನೆ. ಆದರೆ ಬಹಳ ದಿನದ ಹುಚ್ಚು ಬಿಡಲಾರೆ. ಹುಂ, ಬಿಡು. ಇದೆಲ್ಲ ಮನಸ್ಸಿನಲ್ಲಿರಲಿ.

ಸೀತಮ್ಮನು ಇನ್ನೂ ಏನು ಹೇಳಬೇಕು ಎಂದಿದ್ದಳೋ ಅಷ್ಟರೊಳಗೆ ವೀಣಾ ಧ್ವನಿ ಕೇಳಿಸಿತು.

ಇಬ್ಬರೂ ಥಟ್ಟನೆ ಹೋಗಿ ಮೊಕ ತೊಳೆದುಕೊಂಡು ಬಂದು ಏನೋ ಲೋಕಾಭಿರಾಮವಾಗಿ ಮಾತನಾಡುತ್ತ ಕುಳಿತುಕೊಂಡರು. ವೀಣಾ ಬರುತ್ತಿದ್ದ ಹಾಗೆ, "ಏನಮ್ಮಾ! ಸೀತಮ್ಮನವರ ಮನೆಯಲ್ಲಿ ಇವೊತ್ತು ಊಟ ಹೌದೇನಮ್ಮಾ!" ಎಂದಳು.

"ಸೀತಮ್ಮನವರು ಅನ್ನಬೇಡ; ಇನ್ನು ಮೇಲೆ ದೊಡ್ಡಮ್ಮ ಅನ್ನು."

"ಓಹೋ, ಹಾಗಾದರೆ ಸೀತಮ್ಮನವರು ಅಕ್ಕ, ಮೋಹನಬಾಯಿ ತಂಗಿ ಆದರು. ಆಗಬಹುದು. ನಮಗೂ ಒಬ್ಬರು ದೊಡ್ಡಮ್ಮ ಸಿಕ್ಕಿದರು. ಅದಕ್ಕೇನಮ್ಮ ಇವೊತ್ತು ಅಲ್ಲಿ ಊಟ?"

"ಹೌದು. ನಿನಗೆ ಯಾರು ಹೇಳಿದರು?"

"ಇನ್ನು ಯಾರು ಹೇಳಬೇಕು? ನಮ್ಮ ಲಾಲ್‌ಬಾಗೂ ತೋರಿಸೋಣ ಅಂತ ಕರೆದುಕೊಂಡು ಹೋದೆ. ಅಲ್ಲಿಂದ ಬರೋ ದಾರೀಲಿ ನಾರಣಪ್ಪ ಸಿಕ್ಕಿದರು. ಅವರು ಹೇಳಿದರು. ಅಮ್ಮ ದೊಡ್ಡಮ್ಮಾ, ಇನ್ನೊಂದು ಸುದ್ದಿ ಗೊತ್ತೇನು? ನಮ್ಮ ಫ್ರೆಂಡ್ಸ್ ಬೆಂಗಳೂರಲ್ಲೇ ಇದ್ದಾರಲ್ಲಮ್ಮ! ಅವರು ಲಾಲ್‌ಬಾಗ್ ನೋಡಿಯೇ ಇಲ್ಲವಮ್ಮ!"

"ಹೌದು ಮಗು. ಅಂಥಾವರು ಈ ಊರಲ್ಲಿ ಎಷ್ಟೋ ಜನರಿದ್ದಾರೆ."

"ಅವರನ್ನೆಲ್ಲ ನಮ್ಮ ದೊಡ್ಡ ಗಾಡೀಲಿ ತುಂಬಿಕೊಂಡು ತುಂಬಿಕೊಂಡು ಹೋಗಿ ಯಾಕಮ್ಮಾ ಲಾಲ್‌ಬಾಗ್ ತೋರಿಸಬಾರದು?"

ಆ ಮಾತು ಕೇಳಿ ಹಿರಿಯರಿಬ್ಬರಿಗೂ ನಗು ಬಂತು. ಸೀತಮ್ಮನವರು ವೀಣೆಯನ್ನು ಕರೆದು ತಬ್ಬಿಕೊಂಡು ಮಾತನಾಡುತ್ತ "ನಾನೂ ನಿಮ್ಮಮ್ಮ ಅದೇ ಮಾತನಾಡುತ್ತಿದ್ದೆವು ಕಣಮ್ಮ. ಈ ಪ್ರಾರಬ್ಧಗಳು ಲಾಲ್‌ಬಾಗೂ ನೋಡಿಲ್ಲವಲ್ಲ ಅಂತ ಸಂಕಟಪಡುತ್ತಿದ್ದೆವು. ಆಗಲೇ

ಏಳೂವರೆ ಆಗುತ್ತಾ ಬಂತು. ಏಳಿ, ಇನ್ನು ಹೋಗೋಣ. ಬರೋ ವೇಳೆಗೆ ಒಂಬತ್ತು ಗಂಟೆ ಆಗುತ್ತೆ."

ತಾಯಿ ಮಕ್ಕಳು ಸೀತಮ್ಮನ ಜೊತೆಯಲ್ಲಿ ಊಟಕ್ಕೆ ಹೊರಟರು. ಆ ವೇಳೆಗೆ ವಾಚ್‌ಮನ್ ಬಂದನು. ಅವನಿಗೆ ಹುಷಾರಾಗಿ ಇರುವ ಹಾಗೆ ಹೇಳಿ ಬಾಗಿಲು ಬೀಗ ಹಾಕಿಕೊಂಡು ಹೋದರು.

ದಾರಿಯಲ್ಲಿ ಹೋಗುವಾಗ ಕಾರಿನಲ್ಲಿ ಯಾರೂ ಮಾತನಾಡಲಿಲ್ಲ. ವೀಣಾ ಏನೇನೋ ತನ್ನ ಗೆಳೆಯರ ವಿಚಾರ ಹೇಳುತ್ತಿದ್ದಳು. ಸೀತಮ್ಮನಿಗೂ ಏನೋ ಯೋಚನೆ. ಮೋಹನೆಗೂ ಏನೋ ಯೋಚನೆ. ಮೋಹನೆಯು ಸೀತಮ್ಮನು ಹೇಳಿದುದನ್ನೆಲ್ಲ ಯೋಚಿಸುತ್ತಿದ್ದಾಳೆ. ಎಲ್ಲದಕ್ಕಿಂತ ಪೂಜೆ ಮಾಡಿಸಿ ಎಲ್ಲರ ಬಾಯಿ ಮುಚ್ಚಿಸುವ ವಿಚಾರ ಬಹಳ ಹಿಡಿದಿದೆ. "ನೀವೇ ಪ್ರೆಸಿಡೆಂಟರಾಗಿ" ಎಂಬ ಮಾತು ಕಿವಿಯಲ್ಲಿ ಮೊಳಗುತ್ತಿದೆ. "ಪ್ರೆಸಿಡೆಂಟಾದರೆ........ಮುಂದಿನ ಕೆಲಸ........ಅದಕ್ಕೆ ಸಹಾಯ ....... ಇರಲಿ. ಎಲ್ಲ ಮಾಡೋಣ." ಎಂದು ಏನೇನೋ ಯೋಚನೆಗಳು. ಅಂತೂ ಹಿಂದಿನ ದುಗುಡ ಮುಂದಿನ ಕನಸಿಗೆ ಹಾದಿ ಕೊಟ್ಟಿತು ಎನ್ನುವುದರಲ್ಲಿ ಅನುಮಾನವಿರಲಿಲ್ಲ.

## ೯

ಕನ್ಯಾಮಂದಿರದ ಟ್ರಸ್ಟೀಗಳು ಈ ದಿನ ಸಭೆ ಸೇರಿದ್ದಾರೆ. ರಮೇಶ್‌ರ ನಿಧನಕ್ಕಾಗಿ ಸಂತಾಪವನ್ನು ಸೂಚಿಸುವುದು; ಕನ್ಯಾಮಂದಿರವನ್ನು ಆರಂಭಿಸುವುದು; ರಮೇಶ್‌ರ ಪ್ರತಿಯಾಗಿ ಮತ್ತೊಬ್ಬರನ್ನು ಆರಿಸುವುದು ಎಂದು ಪ್ರಧಾನವಾಗಿ ಮೂರು ಕೆಲಸಗಳನ್ನು ಆ ಸಭೆ ಮಾಡಬೇಕಾಗಿದೆ.

ಪಿಳ್ಳೇಗೌಡರು, ಪ್ರಾಣೇಶ್, ನರಸಿಂಹಯ್ಯ, ಶತಾನಂದಂ, ಜೀವಣ್ಣ ಬಂದಿದ್ದಾರೆ. ಪ್ರೆಸಿಡೆಂಟರ ಸ್ಥಾನದಲ್ಲಿ ವೈಸ್-ಪ್ರೆಸಿಡೆಂಟರು ಇದ್ದು ಮೀಟಿಂಗ್ ನಡೆಯಿತು. ರಮೇಶ್‌ರ ಅಕಾಲನಿಧನದಿಂದ ಆದ ನಷ್ಟವನ್ನೂ ಶೋಕವನ್ನೂ ಸೂಚಿಸುವ ಮೊದಲನೆಯ ಠರಾವಾಯಿತು. ಎರಡನೆಯ ಠರಾವು ಚರ್ಚೆಗೆ ಬಂತು. ಆರಿಸುವಿಕೆ ಮೊದಲು ಆಗಲಿ ಎಂದು ಸೂಚನೆ ಬಂದು ಅದರಂತೆ ಚರ್ಚೆಯಾಯಿತು.

ಪ್ರಾಣೇಶನು, ರಮೇಶ್‌ರ ಸ್ಥಾನದಲ್ಲಿ ಅವರ ಹೆಂಡಿತಿ ಮೋಹನ ಬಾಯಿಯವರೇ ಅಧ್ಯಕ್ಷರಾಗಲಿ ಎಂದು ಒಂದು ಸೂಚನೆ ಇದೆ ಎಂದು ಹೇಳಿದನು.

"ಸೂಚನೆ ಯಾರದು?"

"ಮಹಿಳಾಸಮಾಜದ ಅಧ್ಯಕ್ಷರು ಶ್ರೀ ಸೀತಮ್ಮನವರು."

"ಅವರು ನಮ್ಮ ಕಮಿಟಿಯಲ್ಲಿಲ್ಲ; ಅದರಿಂದ ಅವರ ಸೂಚನೆ ಪರಿಶೀಲಿಸಬೇಕಾಗಿಲ್ಲ."

"ಬೇರೆ ಸೂಚನೆ ಬರಬಹುದಲ್ಲ?"

"ರಮೇಶ್‌ರ ಬದಲು ಪ್ರಾಣೇಶ್‌ರು ಅಧ್ಯಕ್ಷರಾಗಲಿ. ಪ್ರಾಣೇಶ್‌ರ ಬದಲು ಮತ್ತೊಬ್ಬರನ್ನು ಮೆಂಬರಾಗಿ ತೆಗೆದುಕೊಳ್ಳೋಣ."

"ಯಾರನ್ನೇನು? ರಮೇಶರ ಹೆಂಡತಿ ಕಮಿಟಿಯಲ್ಲಿರಲಿ. ಅವರು ಮಹಿಳಾಸಮಾಜದಲ್ಲಿ ದುಡಿದಿದ್ದಾರೆ. ಪಬ್ಲಿಕ್ಕಿನಲ್ಲಿ ಅವರೂ ಬೇಕಾದ ಹಾಗೆ ಸರ್ವಿಸ್ ಮಾಡಿದ್ದಾರೆ."

"ನೋಡಿ, ಕೋಪಮಾಡಿಕೊಳ್ಳಬೇಡಿ. ರಮೇಶ್‌ರು ಬದುಕಿದ್ದಾಗ ಮಿಸೆಸ್ ರಮೇಶಂ ಎಂದು ಹೇಳಿಕೊಂಡು ಕೆಲಸ ಮಾಡುವುದು ಬೇರೆ. ಈಗ ಶ್ರೀಮತಿ ಮೋಹನಬಾಯಿ ಆಗಿ ಕೆಲಸ ಮಾಡುವುದು ಬೇರೆ. ಅದರಿಂದ ಅವರು ಕೆಲಸ ಮಾಡಿದಾರೆ ಮಟ್ಟಿದಾರೆ ಅದೆಲ್ಲ ಬೇಡಿ. ಅವರು ರಮೇಶಂ ಪ್ರತಿನಿಧಿಯಾಗಿ ಇರಬೇಕು; ಇರಲಿ."

"ಇದೇನ್ರಿ ಹೀಗೆ ಮಾತನಾಡುತ್ತೀರಿ? ಇದು ಸ್ತ್ರೀಯುಗ. ಅವರಿಗೇ ಎಲ್ಲೆಲ್ಲೂ ಪ್ರಾಧಾನ್ಯ."

"ನೋಡಿ, ನಮ್ಮ ಮನೆಯಲ್ಲಿ ನಮ್ಮ ತಾಯಿ ಇರುವ ವರೆಗೂ ಅವರ ಮಾತಿಲ್ಲದೆ ನಮ್ಮ ಮನೆಯಲ್ಲಿ ಪಾಯಸ ಕೂಡಾ ಕಾಯಿಸುತ್ತಿರಲಿಲ್ಲ. ಅಂತಹ ಪ್ರಾಧಾನ್ಯ ಕೊಡಿ, ನಾನು ಬೇಡವೆನ್ನುವುದಿಲ್ಲ. ಅದಿಲ್ಲದೆ ನಮಗೆ ಪ್ರಾಧಾನ್ಯ ಕೊಡಿ, ಪ್ರಾಧಾನ್ಯ ಕೊಡಿ ಅಂತ ತಮ್ಮ ಪ್ರತಿಷ್ಠೆ ಸ್ಥಾಪಿಸುವುದಕ್ಕೆ ಬರುವವರನ್ನು ಮಾತ್ರ ನಾನು ಸೈರಿಸಲಾರೆ."

"ನೀವು ಸೀತಮ್ಮನವರ ಬಳಿ ಮಾತನಾಡಿ."

"ಬಿಡಿರಿ. ಸೀತಮ್ಮನವರೇನು ದೇವಲೋಕದಿಂದ ಇಳಿದು ಬರಲಿಲ್ಲ. ಅವರನ್ನು ಕರೆದುಕೊಂಡು ಹೋಗಿ ನಮ್ಮ ಕೋಳೀಗೂಡಿನ ಹತ್ತಿರ ನಿಲ್ಲಿಸಿದರೆ ಮುಗೀತು."

"ಹಾಗಂದರೆ?"

"ಹತ್ತು ಹೆಂಟೆಗೆ ಒಂದು ಹುಂಜ....ಹುಂಜ ಹೆಂಟೆಯ ಒಂದೂವರೆ ಇರುತ್ತದೆ. ಹೆಂಟೆಯು ಮೇಲೆ ರೇಗಿದರೆ, ಕೊಕ್ಕಿನಲ್ಲಿ ಒಂದೇಟು ಹೊಡೆದರೆ, ಹೆಂಟೆ ಮುದುರಿಕೊಂಡು ಬೀಳುತದೆ. ಇಂಗ್ಲೀಷ್‌ನವರು ಬಂದು 'ಲೇಡೀಸ್ ಅಂಡ್ ಜಂಟ್ಲಮೆನ್' ಅಂದೂ ಅಂದೂ ಅವರಿಗೆ ಈಗ ಒಂದಲ್ಲ ಎರಡು ಕೊಂಬು ಬಂದುಬಿಟ್ಟಿದೆ."

"ಇದು ಕನ್ಯಾಮಂದಿರ. ಆರಂಭವಾದರೆ ಅಲ್ಲಿಗೆ ಸೆಕ್ರೆಟರಿ ಹೆಂಗುಸಾಗಿರೋದು ಚೆನ್ನ. ಮೊದಲಲ್ಲಿ ರಿಜಿಸ್ಟರ್ ಮೊದಲಾದ ಕೆಲಸ ಇತ್ತು; ಅದಕ್ಕಾಗಿ ನರಸಿಂಹಯ್ಯನವರನ್ನ ಸೆಕ್ರೆಟರಿ ಮಾಡಿದ್ದೆವು. ಈಗ, ನರಸಿಂಹಯ್ಯನವರು ಇನ್ನು ಯಾವುದೋ ಕೆಲಸಕ್ಕೆ ಹೋಗಬೇಕಾಗಿದೆ. ಅವರೂ ರಿಸೈನ್ ಮಾಡುವುದರಲ್ಲಿದ್ದಾರೆ. ಅದರಿಂದ ಮೋಹನಬಾಯಿಯನ್ನು, ನರಸಿಂಹಯ್ಯನವರ ಜೊತೆಗೆ ಅಡಿಷನಲ್ ಸೆಕ್ರೆಟರಿಮಾಡಿಬಿಡೋಣ — ಒಂದೆರಡು ತಿಂಗಳೊಳಗಾಗಿ ಅವರು ಕೆಲಸ ಎಲ್ಲಾ

ನೋಡಿಕೊಳ್ಳುವ ಮಟ್ಟಿಗಾಗುತ್ತಾರೆ. ಆಗ ನರಸಿಂಹಯ್ಯನವರನ್ನು ರಿಲೀವ್ ಮಾಡಿ ಆಕೆಯನ್ನೇ ಸೆಕ್ರೆಟರಿ ಮಾಡಿಕೊಳ್ಳೋಣ"

"ಅದಾಗಬಹುದು."

ಜೀವಣ್ಣನು ಹೇಳಿದನು: "ನಾನೂ ಬೇರೆ ಒಂದು ಕಂಪನಿ ಪ್ರಾರಂಭಿಸಿದ್ದೇನೆ. ಅದರ ಸೆಕ್ರೆಟರಿಯಾಗಿ ಭಾರ ಹೆಚ್ಚಾಗಿ ಹೊರ ಬೇಕಾಗಿದೆ. ನನ್ನೂ ಬಿಟ್ಟುಕೊಡಿ."

"ಹೌದು. ಅವರನ್ನು ಬಿಟ್ಟು ಕೊಡುವುದು ಒಳ್ಳೆಯದು."

"ನಿಮ್ಮಿಂದ ಬಹಳ ಕೆಲಸ ಆಗಬೇಕಾಗದೆ. ವರ್ತಕ ಮಂಡಲಿಯಲ್ಲಿ ನಮ್ಮ ಮಾತು ಏನೂ ನಡೆಯೋಲ್ಲ. ಆನೆ ಹಿಡಿಯೋಕೆ ಆನೆಯೇ ಬೇಕು. ಹಾಗೆ ನೀವು. ಸೀವಿರಲೇಬೇಕು."

ಪ್ರಾಣೇಶರಾಯರು ಹೇಳಿದರು: "ಈಗ ನಾವಿಬ್ಬರೂ ಒಂದೇ ಕಡೆ ಇದ್ದೇವೆ. ನಮ್ಮಿಬ್ಬರಲ್ಲಿ ಯಾರಾದರೂ ಒಬ್ಬರು ಇದ್ದರೆ ಸಾಕು. ಅಲ್ಲದೆ, ಜೀವಣ್ಣರಾಯರ ಕೆಲಸ ಸಾಮಾನ್ಯವಾದ್ದಲ್ಲ. ಅವರ ಇಷ್ಟದಂತೆ ನಡೆಯೋಣ."

"ಅಲ್ಲಿಗೆ ಅವರ ಬದಲು ಇನ್ನೊಬ್ಬರನ್ನು ತೆಗೆದುಕೊಳ್ಳಬೇಕಾಯಿತು."

"ಹಾಗಾದರೆ, ಸೀತಮ್ಮನವರಿಗೆ ಒಂದು ಸ್ಥಾನಕೊಡಿ."

"ಹೂಂ, ಕೊಡಿ, ಮೋಹನಬಾಯಿಯವರ ಜೊತೆಗೆ ಒಬ್ಬರು ಇರಲಿ."

"ಅಲ್ಲಿಗೆ ಠರಾವು ಹೀಗಾಯಿತು: ರಮೇಶನು ಸ್ವರ್ಗಸ್ಥರಾಗಿ ಖಾಲಿಯಾಗಿರುವ ಪ್ರೆಸಿಡೆಂಟರ ಸ್ಥಾನವನ್ನು ಪ್ರಾಣೇಶರವರು ಅಲಂಕರಿಸುವುದು; ಅವರ ಸ್ಥಾನದಲ್ಲಿ ರಮೇಶರವರ ಧರ್ಮಪತ್ನಿ ಮೋಹನಬಾಯಿಯವರು ಮೆಂಬರಾಗಿರತಕ್ಕದು. ಶ್ರೀ ಜೀವಣ್ಣರಾಯರು ಸ್ವಂತ ಕೆಲಸದ ಬಗ್ಗೆ ಈ ಕಮಿಟಿಯಲ್ಲಿ ಇರಲು ಸಾಧ್ಯವಿಲ್ಲವೆಂದು ಕೋರುವುದ

ರಿಂದ ಅವರ ಸ್ಥಾನದಲ್ಲಿ ಈ ನಗರದ ಮಹಿಳಾ ಸಮಾಜದ ಪ್ರೆಸಿಡೆಂಟರಾದ ಸೀತಮ್ಮನವರನ್ನು ಮೆಂಬರಾಗಿ ತೆಗೆದುಕೊಳ್ಳುವುದು. ಶ್ರೀ ನರಸಿಂಹಯ್ಯನವರು ಸಧ್ಯದಲ್ಲೇ ಬಿಡಬಹುದಾಗಿರುವುದರಿಂದ ಅವರ ಜೊತೆಗೆ ಶ್ರೀಮತಿ ಮೋಹನಬಾಯಿಯವರು ಅಡಿಷನಲ್ ಸೆಕ್ರೆಟರಿಯಾಗಿರುವುದು.—ಸರಿಯಷ್ಟೆ?"

"ಕನ್ಯಾಮಂದಿರದ ಮ್ಯಾನೇಜರ್ ಆಗಿ ವೆಂಕಟೇಶಯ್ಯನವರನ್ನು ಗೊತ್ತು ಮಾಡಬೇಕು ಎಂದಿತ್ತು. ಅದೂ ಠರಾವು ಮಾಡಿಬಿಡೋಣ."

"ಹೌದು. ಆ ವಿಚಾರವಾಗಿ ನಾನೂ ಒಂದು ಕಾಗದವನ್ನು ಬರೆದಿದ್ದೆ. ಆ ವೆಂಕಟೇಶಯ್ಯನವರು ನನ್ನ ಬಳಿಗೂ ಬಂದಿದ್ದರು.

"ಸರಿ—ಏನು ಬರೆಯೋಣ?"

"ತಿಂಗಳಿಗೆ ಮೂವತ್ತು ರೂಪಾಯಿ ಸಂಬಳದ ಮೇಲೆ ಅವರನ್ನು ಮ್ಯಾನೇಜರಾಗಿ ಗೊತ್ತು ಮಾಡೋಣ. ಅಲ್ಲಿಯೇ ಮಗ್ಗುಲಲ್ಲಿ ಇರುವ ಮನೆಯಲ್ಲಿ ಅವರು ಇರಲಿ. ವಯಸ್ಸಾದವರು. ಮೋಹನಬಾಯಿಯವರಿಗೆ ಅವರಿಂದ ಬಹಳ ಉಪಕಾರ ಆಗುತ್ತದೆ.

"ಸರಿ. ಹಾಗಂತ ಬರೆದುಬಿಡಿ."

"ಮುಂದಿನ ಕೆಲಸ?"

"ಕನ್ಯಾಮಂದಿರದ ಆರಂಭ ಯಾವಾಗಿನಿಂದ?"

"ನಾನು ಮೊಹನಬಾಯಿಯವರ ಹತ್ತಿರ ಮಾತನಾಡಿದೆ. ಈಗಿರುವ ಮೆಯಿನ್ ಬಿಲ್ಡಿಂಗ್‌ಗೆ ಎರಡು ಕಡೆ ಮೆಯಿನ್ ರೋಡುಗಳಿವೆ. ಆ ಎರಡು ಕಡೆಯೂ ಅಂಗಡಿಗಳನ್ನು ಕಟ್ಟಿಸಿಬಿಡುವುದು. ಆ ಬಿಲ್ಡಿಂಗ್‌ನ ಫಸ್ಟ್ ಫ್ಲೋರ್ ಬಾಡಿಗೆಗೆ ಕೊಡುವುದು. ಕನ್ಯಾಮಂದಿರ ಕೆಳಗೆ ಗ್ರಾಂಡ್ ಫ್ಲೋರ್‌ನಲ್ಲಿರುವುದು. ಔಟ್‌ಹೌಸ್‌ನಲ್ಲಿ ವೆಂಕಟೇಶಯ್ಯನವರು ಇರುವುದು. ಹೀಗಾದರೆ ಅಲ್ಲಿ ಹನ್ನೆರಡು ಅಂಗಡಿಯಾಗಿ ಸುಮಾರು ನಾಲ್ಕು ನೂರು ರೂಪಾಯಿ ಬಾಡಿಗೆ ಬರುತ್ತದೆ. ತಮ್ಮದೊಂದು ಐವತ್ತು

ರೂಪಾಯಿ. ನಾಲ್ಕುನೂರ ಐವತ್ತುರೂಪಾಯಿ ಬಾಡಿಗೆ ಆಗುತ್ತದೆ. ಅಲ್ಲಿಗೆ ಕನ್ಯಾಮಂದಿರ ಒಬ್ಬರ ದಾಕ್ಷಿಣ್ಯವಿಲ್ಲದೆ ನಡೆದುಕೊಂಡು ಹೋಗಬಹುದು, ಎಂದು ಒಂದು ಸಲಹೆ ಇದೆ."

"ಹನ್ನೆರಡು ಅಂಗಡೀಗೆ ಎಷ್ಟಾಗಬಹುದು?"

"ಐವತ್ತು ಸಾವಿರ ಆಗಬಹುದು."

"ಐವತ್ತು ಇದೆ. ಆದರೆ ಕನ್ಯಾಮಂದಿರಕ್ಕೆ ಪುದುವಟ್ಟು ಏನೂ ಇಲ್ಲದಿದ್ದರೆ ಹೇಗೆ?"

"ಅವೊತ್ತೇ ನಾನು ಹೇಳೋಣ ಅಂತಿದ್ದೆ. ನನಗೇನೂ ಮಕ್ಕಳಿಲ್ಲ; ಮರಿಯಿಲ್ಲ. ಅವೊತ್ತೇ ಹೇಳಿದ್ದೆ ದೊಡ್ಡರಾಯರಿಗೆ ಚಿಕ್ಕರಾಯರಿಗೆ ವರ್ಷಕ್ಕೆ ಎರಡು ಎರಡು ಸಾವಿರ ಕೊಡುತ್ತೀನಿ ಅಂತ. ನಮ್ಮ ರಾಯರು ಹೂಂ ಅಂದರೆ ಒಟ್ಟು ನಾಲ್ಕು ಸಾವಿರ ನಾನಿರುವವರೆಗೂ ಕನ್ಯಾಮಂದಿರಕ್ಕೆ ಕೊಟ್ಟುಬಿಡೋದು."

ಪ್ರಾಣೇಶನು ಇಷ್ಟವಿಲ್ಲದಿದ್ದರೂ ಆಗಬಹುದು ಎಂದನು. ಜೀವಣ್ಣರಾಯನು, "ಈಗ ಸದ್ಯದಲ್ಲಿ ಇರುವ ಐವತ್ತು ಅಂಗಡಿ ಕಟ್ಟುವುದಕ್ಕೆ ಹಾಕಿಬಿಟ್ಟರೆ, ಮೂಲಧನ ಇಲ್ಲದೆ ಹೋಗುತ್ತದೆ ಅಂತ ಅಲ್ಲವೆ ಸ್ವಾಮಿ? ನನ್ನದೊಂದು ಐದು ಸಾವಿರ ಬರೆದುಕೊಳ್ಳಿ. ಅದು ಮೂಲಧನವಾಗಿ ನಿಂತಿರಲಿ. ಗೌಡರದು ಸೇರಿ ವರ್ಷದ ಖರ್ಚು ಕಳೆದುಹೋಯಿತು."

"ಆರಂಭ ಯಾವಾಗ ಮತ್ತೆ?

"ದೀಪಾವಳಿ ಆಗುತ್ತಲೂ ಆರಂಭಿಸಿ."

"ಅಲ್ಲಿ ಪಾಠಗೀಟ ಎಲ್ಲ ಹೊಸದು ಮಾಡಬೇಕು ಅಂತಿದ್ದರಲ್ಲ?''

"ಅದೆಲ್ಲ ನಮಗೇನ್ರೀ ತಿಳೀತದೆ? ಈ ಪ್ರೊಫೆಸರ್, ಆ ಸೀತಮ್ಮನವರು, ಸೆಕ್ರೆಟರಿಗಳು, ಮ್ಯಾನೇಜರ್, ಕೂತುಕೊಂಡು ಅದೆಲ್ಲ ಮಾಡಲಿ. ಬೇಕಾದರೆ ಅದೇ ಒಂದು ಕಮಿಟಿ ಮಾಡಿಬಿಡಿ. ಅವರು ಆದಷ್ಟು ಬೇಗ ತಮ್ಮ ಕೆಲಸ ಪೂರೈಸಲಿ; ನಾವು ಅದನ್ನು ಒಪ್ಪಿಕೊಳ್ಳೋಣ. ನಾವೇನು

ರ್ಯಾರ ಕೈಯೂ ನಂಬಬೇಕಾಗಿಲ್ಲ. ಶುರುಮಾಡಿಬಿಡಿ.” ಎಲ್ಲರೂ ಒಪ್ಪಿದರು. ಅದರಂತೆ ಠರಾವು ಆಯಿತು. ಗೌಡನು ಕೊಟ್ಟ ನಾಲ್ಕು ಸಾವಿರ ಅಂಗೀಕರಿಸಿ, ಅದಕ್ಕಾಗಿ ವಂದಿಸುವ ಠರಾವು ಆಯಿತು. ಮೀಟಿಂಗ್ ಮುಗಿಯಿತು.

ಎಲ್ಲರೂ ಹೊರಟುಹೋದರು. ಗೌಡನೂ ಪ್ರಾಣೇಶ್ ಇಬ್ಬರೇ ಉಳಿದರು. “ಏನು, ಗೌಡರು ಊರಿಗೆ ಬಂದು ಎಷ್ಟು ದಿನವಾಯಿತು?” ಎಂದು ಕೇಳಿದನು.

“ಎಲ್ಲಪ್ಪಾ! ಅವೊತ್ತು ರಾಯರ ಮರಣ ವಿಚಾರಿಸೋಕೆ ಬಂದದ್ದೇ ತಿರುಗೀ ಬಂದೇ ಇಲ್ಲಾ!”

“ಅಲ್ಲರೀ, ಈ ಸಲ ಬಂದು ಎಷ್ಟು ದಿನವಾಯಿತು?”

“ನಿನ್ನೆಯೇ ಬಂದದ್ದು. ನಿಮ್ಮನ್ನ ಹುಡುಕಿಕೊಂಡು ಬಂದೆ. ನೀವೂ ಜೀವಣ್ಣರಾಯರೂ ಎಲ್ಲೋ ಹೋಗಿದ್ದೀರಿ ಅಂದರು. ಅಲ್ಲಿಗೆ ಹೋದೆ. ಅಷ್ಟೆ!

“ಅಲ್ಲೇನು ಸಮಾಚಾರ?”

“ತಾವು ದಯಮಾಡಿಸಿಯೇ ಇಲ್ಲವೇನೋ?”

“ಮೂರು ದಿವಸದ ಹಿಂದೆ ಹೋಗಿದ್ದೆ. ಆದರೆ ಅದೇನು ಹೋಗಾಟ? ಹೋದರೆ ಒಂದು ನಾಲ್ಕೈದು ಗಂಟೆ ಆದರೂ ಇರಬೇಕು. ಹೋದಪುಟ್ಟ, ಬಂದಪುಟ್ಟ, ಆಯಿತು. ನನಗೇ ತೃಪ್ತಿಯಿಲ್ಲ.”

“ಅವಳೇನಂದಳು ಗೊತ್ತೇನು?”

“ಹೇಳಿ.”

“ನಮ್ಮ ಲುಚ್ಚಾ ಇನ್ನೆಲ್ಲೋ ಹೊಸ ಬೇಟೆ ಹುಡುಕುತಿದೆ ಅಂದಳು.”

“ಕಂಪೆನಿಗೆ ಛೇರ್‌ಮನ್ ಆಗಿದ್ದೀನಿ. ಅದನ್ನು ರಿಜಿಸ್ಟರ್ ಮಾಡಿಸಬೇಕು. ಒಂದು ಕೋಟಿ ರೂಪಾಯಿ ಷೇರ್ ಸಂಪಾದಿಸಬೇಕು; ಆ ಕೆಲಸದಲ್ಲಿದ್ದೀನಿ. ಅವಳಿಗೇನು?”

"ಆವರಮ್ಮನಿಗೂ ನಿಮಗೂ ಏನೋ ಸಂಬಂಧವಂತಲ್ಲ, ಅದೇನು?"

"ಅಲ್ಲಿ ನಿಮ್ಮ ಊರಲ್ಲಿ ಸ್ವಾಮಿಗಳು ಹೇಳಿದ್ದರಲ್ಲ! ಅವಳ ಮಗಳು ಇವಳ ತಾಯಿ."

"ಅದರಿಂದಲೇ ಅವಳನ್ನು ನೀವು ಹುಡುಕಿಸಿದ್ದು. ಏನು ಅವಳಿಗೇನಾದರೂ ಕೊಟ್ಟು ತಾಯಿಗಾಗಿ ಮಗಳ ಹತ್ತಿರ ರಾಜಿ ಮಾಡಿಕೋಬೇಕು ಅಂತಲೋ? ಅಂತೂ ಒಳ್ಳೆಯ ಲಾಯರಿ ಬುದ್ಧಿ ಕಣಪ್ಪಾ! ರಾಜಿಗೇನು ಕೊಡಬೇಕು ಅಂತ ಇದ್ದೀರಿ?"

"ನೀವೇ ತಾನೇ ಫೈಸಲ್ಮಾಡೋರು."

"ಇಲ್ಲ. ನನ್ನ ಕರೀಬ್ಯಾಡಿ."

"ಅದೇನು?"

"ನಾನು ಏನೂ ತಿಳಿದಂಗೆ ಇದ್ದುಬಿಡುತ್ತೀನಿ."

"ಯಾವೊತ್ತು ಬರತಾಳಂತೆ?"

"ಅಲ್ಲೀದೆಲ್ಲ ಬಿಟ್ಟದ್ದು ಬಿಟ್ಟಂಗೆ ಬರೋದಕ್ಕಾಗೋದಿಲ್ಲ. ಆದರಿಂದ ಅಲ್ಲಿ ಕೊಂಚ ನೋಡಿಕೊಂಡು ಬರುತೀವಿ ಅಂತ ಬರೆದಿದ್ದಾಳಂತೆ. ನಾಳೆಯೋ ನಾಡಿದ್ದೋ ಇನ್ನೊಂದು ಕಾಗದ ಬರಬೋದು. ಆದಿರಲಿ, ಈ ಕಂಪೆನೀಲಿ ತಮ್ಮದೇನು?"

"ಕ್ಯಾಪಿಟಲ್ ಒಂದು ಕೋಟಿ. ಅದರಲ್ಲಿ ಜೀವಣ್ಣನದು ಒಂದು ಲಕ್ಷ. ನನ್ನ ಒಂದು ಹಾಕು ಎಂದ. ನನ್ನ ಹತ್ತಿರ ಹತ್ತು ಇವೆ; ಅವರ ಮೇಲೆ ಏನೂ ಇಲ್ಲ ಎಂದೆ. ಕೊನೆಗೆ ಈಗ ಇಪ್ಪತ್ತೈದು ಕೊಡುವುದು ಅಂತಾ ಆಗಿದೆ. ಮುಂದೆ ಷೇರ್ ಕ್ಯಾನ್ವಾಸಿಂಗ್‌ನಲ್ಲಿ ಬಂದದ್ದನ್ನು ಸೇರಿಸಿ ಒಂದು ಪೂರ್ತಿ ಮಾಡತೀನಿ ಅಂತಾನೆ."

"ಅಂತೂ ಮೊದಲೇ ಎಪ್ಪತ್ತೈದು ಗಿಟ್ಟಿದ ಹಾಗೆ."

"ಕ್ಯಾನ್ವಾಸಿಂಗ್‌ಗೆ ಶೇಕಡ ೨ ತೆಗೆದಿಟ್ಟಿದೆ. ಅದರಲ್ಲಿ ಮೂರನೆಯ

ಒಂದು ಪಾಲು ಇಲ್ಲ. ಆಯಿತು. ಗೌಡರು ಎಷ್ಟು ಕೊಡುತ್ತಾರೆ; ಎಷ್ಟು ಕೊಡಿಸುತ್ತಾರೆ?"

"ಎಷ್ಟು ಬಡ್ಡಿ ಕೊಡುತೀರಿ?"

"ಪ್ರಿಫರೆನ್ಸ್ ಷೇರಿಗೆ ಡಿವಿಡೆಂಡ್ ಶೇಕಡ ೬; ಬೋನಸ್ ಶೇಕಡ ೩ ಕೊಡುತ್ತೇವೆ."

"ಪರವಾ ಇಲ್ಲ; ಯೋಚಿಸಬಹುದು. ಆಗಲಿ, ನಮ್ಮದು ಒಂದಿರಲಿ."

"ಚೆನ್ನಾಯಿತು, ಚೆನ್ನಾಯಿತು"

ಹೀಗೇ ಅಷ್ಟು ಹೊತ್ತು ಒದ್ದಾಡಿ ಗೌಡನು ಎರಡು ಲಕ್ಷದ ಷೇರು ತೆಗೆದುಕೊಳ್ಳುವುದು; ಇಪ್ಪತ್ತು ಲಕ್ಷದ ಷೇರು ಕೊಡಿಸುವುದು ಎಂದು ಗೊತ್ತಾಯಿತು.

"ಆಯಿತು, ನಾನಿನ್ನು ಹೊರಡಲೋ?"

"ಏನು ಜೊತೇಲಿ ಬರಬೇಕೇನು?"

"ಇನ್ನೂ ಯಾಕೆ ಮತ್ತೆ ಇಷ್ಟು ಹೊತ್ತೂ ಕಾದದ್ದು?"

"ಆಫೀಸ್ ಕೆಲಸ ಇನ್ನೂ ಇದೆಯಲ್ಲಪ್ಪ!"

"ಆಫೀಸಿನ ಕೆಲಸ!........ಏಳು ಏಳು. ಏಳಯ್ಯಾ ಅಂದ್ರೆ?"

ಇನ್ನೊಂದು ಕಾಲು ಗಂಟೆಯೊಳಗಾಗಿ ಒಂದು ಕಾರು ಮೇರಿಯ ಮನೆಯ ಕಾಂಪೌಂಡಿನಲ್ಲಿರುವ ಗೆರೇಜ್‌ನಲ್ಲಿ ನಿಂತಿತು. ಇಬ್ಬರು ಅವಳ ಮನೆಯ ಹೊಕ್ಕರು.

ವೆಂಕಟೇಶಯ್ಯ ಮನೆಯಲ್ಲಿ ಇದ್ದಾನೆ. ಇವೊತ್ತು ಬಾಡಿಗೆಯವನು ಬರುತ್ತಾನೆ. ಇನ್ನೂ ಪ್ರೇಷರ್ ಪೇಪರ್‌ಗಳು ಬಂದಿಲ್ಲ. ಅವು ಬರುವವರೆಗೂ ತನ್ನ ಹತ್ತಿರ ಹಣವೆಲ್ಲಿಯದು? ಅವನಿಗೆ ಅದೇ ಯೋಚನೆ. ಬಂದರೇನು ಹೇಳುವುದು? ಸಾಹುಕಾರನಿಗೆ ಈ ಬಾಡಿಗೆ

ಹಣ ಬಂದು ಜೀವನ ನಡೆಯಬೇಕಾಗಿಲ್ಲ. ತನಗೆ ಈಗ ಜೀವನಕ್ಕೇ ಅಭಾವವಾಗಿದೆ. ಅವನೂ ಮೂರು ತಿಂಗಳಿಂದ ವಾಯಿದೆ ಹೇಳಿ ಹೇಳಿ ಸಾಕಾಗಿ ಹೋಗಿದ್ದಾನೆ. ಅವನು ಬರುವ ವೇಳೆಗೆ ಮನೆಯಾದರೂ ಬಿಟ್ಟು ಹೋಗೋಣ ಅಂದರೆ, ಮನೆಯವಳ ಮೇಲೆ ಹಾರಾಡುತ್ತಾನೆ. ಬರುವ ಆಳೋ ಸಾಹುಕಾರನಿಗಿಂತ ನಿಷ್ಠುರ. ಏನು ಮಾಡಬೇಕು? ಇದುವರೆಗೂ ಏನೇನೋ ಹೇಳಿದ್ದಾನೆ. ಇನ್ನು ಏನೂ ಸಬಬು ಹೇಳುವಂತಿಲ್ಲ. ಭೂಮಿಗಿಳಿದುಹೋಗಿದ್ದಾನೆ.

ಜೊತೆಗೆ ಹೆಂಡಿತಿ ಬೇರೆ ಪ್ರಾಣ ಹಿಂಡುತ್ತಿದ್ದಾಳೆ. ಕೇಷನ್ ಇವೊತ್ತು ತರಿಸದಿದ್ದರೆ ಈ ವಾರದ ರೇಷ್ಠ ಹೋಗುತ್ತದೆ? ಏನು ಮಾಡುವುದು? ಯಾರ ಬಳಿ ಹೋಗುವುದು? ತನಗೆ ತಿಂಗಳಿಗೆಲ್ಲ ಬೇಕಾದುದು ಐವತ್ತು ರೂಪಾಯಿ. ಅದಷ್ಟು ಸಂಪಾದಿಸಿಕೊಳ್ಳದಿದ್ದರೆ ತಾನು ಇಷ್ಟು ದಿನ ಬದುಕಿ ಫಲವೇನು?

ಹೀಗೆ ಯೋಚನೆ ಮಾಡುತ್ತ ಕುಳಿತಿರುವಾಗ ತಾನು ಮಾದನ ಹಳ್ಳಿಯಲ್ಲಿ ಸ್ಕೂಲ್ ಮಾಷ್ಟರಾಗಿದ್ದಾಗ ತನಗೆ ಊರವರೆಲ್ಲ ಸೇರಿ ಕೊಟ್ಟಿದ್ದ ಮಾನಪತ್ರ ಕಣ್ಣಿಗೆ ಬಿತ್ತು. ವೆಂಕಟೇಶಯ್ಯನಿಗೆ ಅದನ್ನು ನೋಡಿ ನಗುವು ಬಂತು. "ಯಾರೋ ಕೆಲವರು ಉತ್ಸಾಹಿಗಳು ಸೇರಿ ಒಂದು ದಿನ ನೂರಾರು ರೂಪಾಯಿ ಖರ್ಚು ಮಾಡಿ ಈ ಮಾನಪತ್ರ ಕೊಟ್ಟರು. ಅವೊತ್ತು ಡಿ. ಇ. ಒ. ಸಾಹೇಬರ ಘನ ಅಧ್ಯಕ್ಷತೆ. ಊಟಕ್ಕೆ ಏನಿಲ್ಲ ಎಂದರೂ ಸುಮಾರು ಎರಡೂವರೆ ಮೂರು ಪಲ್ಲ ಅಕ್ಕಿ ಬಿದ್ದಿತ್ತು. ಆ ಅಕ್ಕಿಯಲ್ಲಿ ಇವೊತ್ತು ಹತ್ತು ಸೇರೂ ಬೇಡ ಕೊನೆಗೆ ಐದು ಸೇರು ಇದ್ದಿದ್ದರೆ, ಹೀಗೆ ಹೆಂಡಿತಿ ಬಳಿಯಲ್ಲಿ ನಿಷ್ಠೂರ ವಾಗುತ್ತಿರಲಿಲ್ಲ."

"ಆ ಹಾಳು ಪರ್ಷ ಪೇಪರ್‌ಗಳು. ಆ ಜನ ಆಫೀಸಿನಲ್ಲಿ ಅದೇನು ಮಾಡುತ್ತಿರುತ್ತಾರೋ? ಅವರಿಗೆ ತಿಳಿಯದೆ ಇಂಥವನು ಇಂಥಾ ದಿನ ರಿಟೈರಾಗುತ್ತಾನೆ ಅಂತ? ಅವತ್ತಿಗೆ ಸರಿಯಾಗಿ ಅವನನ್ನು

ಮನೆಗೆ ಕಳುಹಿಸುವ ದಿನ "ನಿನ್ನ ಪೇಪರ್ ಇಷ್ಟು" ಎಂದು ಗೊತ್ತು ಮಾಡಿ ಒಂದು ಆರ್ಡರ್ ಕಳುಹಿಸಿದರೆ ಆ ಬಡಪಾಯಿಗಳಿಗೆ ಎಷ್ಟು ಅನುಕೂಲವಾದೀತು! ಆಫೀಸಿನ ಹತ್ತಿರ ಹೋದರೆ, ಆ ಜಬರ್‌ದಸ್ತು ಏನು ಇನ್ನೂ ಬರಲಿಲ್ಲರಿ ನಿಮ್ಮ ಪೇಪರು ಅಂದರೆ ಎಲ್ಲಾ ಮುಗೀತು. ಛೀ! ಏನು ಪ್ರಾರಬ್ಧ; ಐವತ್ತೈದು ವರ್ಷದವರೆಗೂ ಏನೋ ಇದ್ದುದ ರಲ್ಲಿ ಮಾನವಾಗಿದ್ದು ಈಗ ಈ ಸಣ್ಣಪುಟ್ಟದಕ್ಕೆಲ್ಲ ಮಾನ ಕಳೆದು ಕೊಳ್ಳುವ ಪ್ರಸಂಗ ಬಂದಿದೆ."

"ಬಾಡಿಗೆಯವನು ಏನೂ ಬಿಡುವುದಿಲ್ಲ. ಆದರೆ ಹಾದಿ ರಂಪು ಬೀದಿ ರಂಪು ಆಗಿ ಆಮೇಲೆ ಕೊಡುವುದಾಗುತ್ತೆ. ರೇಷನ್ ಅಷ್ಟೇ! ಉಪವಾಸವೇನೂ ಇರುವುದಿಲ್ಲ. ಆದರೂ ಪಜೀತಿ ಆದಮೇಲೆ ಬರುತ್ತೆ. ಇದನ್ನು ತಪ್ಪಿಸಿಕೊಬೇಕು."

ಒಳಗಿಂದ ಹೋಂ ಮೆಂಬರು ಕೂಗಿದರು: "ಇದೇನು ದೇವರ ಪೂಜೆಯೂ ಇಲ್ಲವೇಂದರೆ ಇವೊತ್ತು?"

ವೆಂಕಟೇಶಯ್ಯನು "ಹೂಂ, ಏಳುತೀನಿ" ಅಂದು ಮತ್ತೆ ತನ್ನ ಯೋಚನೆಯಲ್ಲಿ ಮುಳುಗಿದನು. "ಈ ದೇವರ ಪೂಜೆ ಕೂಡ ಎಲ್ಲೋ ನನಗೆ ನಶ್ಯ, ಸಿಗರೇಟುಗಳ ಹಾಗೆ ಪಾಠವಾಗಿಹೋಗಿದೆ. ಏನೋ ಮಾಡಬೇಕು ಮಾಡುತ್ತೇವೆ, ಅಷ್ಟೇ ಇರಬೇಕು. ಇಲ್ಲದಿದ್ದರೆ ಇಷ್ಟೆಲ್ಲ ಪೂಜೆ ಪುನಸ್ಕಾರ ಅಂತ ಒದ್ದಾಡುತಿದ್ದರೂ ನನಗೇಕೆ ಈ ಪಾಡು? ಅಥವಾ ಆಫೀಸರ್‌ಗಳು ಬದಲಾಗೋ ಹಾಗೆ ಹಿಂದಿನ ದೇವತೆಗಳು ರಿಟೈರ್ ಆಗಿ ಹೊಸ ದೇವತೆಗಳೇನಾದರೂ ಬಂದಿರಬಹುದೋ? ಶ್ರೀನಿವಾಸ, ನೀನು 'ಸತಾಂಗತಿ'ಯಂತೆ! ನಾನು ಸತ್ಪುರುಷನಲ್ಲದಿದ್ದರೂ ಪಾಪಿಯಲ್ಲ. ಪಾಪ ಮಾಡಿದ್ದರೂ ಬೇಕೆಂದು ಪಾಪ ಮಾಡಿದವನಲ್ಲ. ನೀನು ಕಾಯದಿದ್ದರೆ, ಈ ದಿನ ನಿಜವಾಗಿ ಗತಿಯಿಲ್ಲ. ನೀನೇ ಭಯಕೃತ್--ನೀನೇ ಭಯನಾಶನ. ಮನಸ್ಸಿಗೆ ಧೈರ್ಯ ಕೊಡು" ಎಂದು ಏನೇನೋ ಹೇಳಿಕೊಳ್ಳುತ್ತಿದ್ದಾನೆ. ಕಣ್ಣಲ್ಲಿ ಒಂದೆರಡು ಸಲ ನೀರೂ ಬಂದಿದೆ.

ವೆಂಕಟೇಶಯ್ಯನಿಗೆ ಬೇಸರವೋ ಬೇಸರ. "ಏನೋ ದೈವಚಿತ್ತ. ನಮ್ಮ ಅದೃಷ್ಟ. ಮಕ್ಕಳಾಗಲಿಲ್ಲ. ಅವೂ ತೊಪ್ಪೆಯಲ್ಲಿ ಬೀಳುವ ಹುಳದಂತೆ ಒಂದರಮೇಲೊಂದು ಆಗಿ ಮನೆ ತುಂಬಿಹೋಗಿದ್ದರೆ, ಶಿವ, ಶಿವ, ಅದೇ ಒಂದು ನರಕ ಆಗಿಹೋಗುತ್ತಿತ್ತು. ಏನೋ ಎಂತೋ ಮಕ್ಕಳಾಗಲಿಲ್ಲ. ಬಹುಶಃ ನಮಗೆ ಇಂತಹ ಕಷ್ಟ ಬರುತ್ತೆ ಅಂತಲೇನೋ ಆಗಲಿಲ್ಲ. ಈಗ ನೋಡಿದರೆ ಆಗದಿರುವುದೇ ಸುಖವಾಯಿತು."

"ಹಾಗಾದರೆ, ಈ ಪೆನ್ಷನ್ ಬರದಿರುವುದೂ ಏನೋ ಸುಖಕ್ಕೆ ಇರಬಹುದೆ? ಇರಲಾರದು. ಈಗ ಎರಡು ತಿಂಗಳಿಂದ ಮಳೆ ನಿಂತು ಹೋಗಿದೆ. ಇದೂ ಏನೋ ಸುಖಕ್ಕೇನು? ಯಾವ ಸುಖವೋ ಅದು? ಅಂತೂ ಪೈರು ಒಣಗುತ್ತಿದೆ. ಇಟ್ಟ ಪೈರು ಹೋದರೆ ಕ್ಷಾಮ ತಪ್ಪುವುದಿಲ್ಲ. ಮತ್ತೆ ಟೆನ್ಷನ್ ತಪ್ಪುವುದಿಲ್ಲ. ನೊಂದವನಿಗೆ ಇನ್ನೊಂದು ಗುದ್ದು. ಛೇ! ಯಾಕಾದರೂ ದೇವರು ಹೀಗೆ ಮಾಡುತಾನೆಯೋ? ಅವೊತ್ತು ಅವನು ಕೇಳಿದಾಗ ಹತ್ತು ರೂಪಾಯಿ ಅತ್ತ ಕಡೆ ಎಸೆದಿದ್ದರೆ ಒಂದು ತಿಂಗಳೊಳಗಾಗಿ ಪೇಪರ್ ವಾಪಸು ಬಂದು ಪೆನ್ಷನ್ ಕೈಗೆ ಬಂದುಬಿಡುತ್ತಿತ್ತೊ? ನಿಸೂರಾಗಿ ಇರಬಹುದಾಗಿತ್ತೋ?"

"ನಾವು ಲಂಚ ಕೊಟ್ಟರೆ ಅಪರಾಧ; ಕೊಡದಿದ್ದರೆ ಕೆಲಸ ನಡೆಯೋದಿಲ್ಲ. ಅಯ್ಯೋ ನಾವಂತೀವಿ. ಆ ಹಾಳು ಕ್ಲಾರ್ಕ್‌ಗಳಿಗೆ ತಾನೇ ಮಕ್ಕಳುಮರಿ ಇರುವುದಿಲ್ಲವೆ? ಬರೋ ಮೂವತ್ತು ನಲವತ್ತು ರೂಪಾಯಿಯಲ್ಲಿ ಅವರು ಕಾಫಿ—ಅದು ನಾಲ್ಕೈದೂ ಸಲ— ಕುಡಿಯೋದೇನು? ಮನೆಗೆ ಕೊಡೋದೇನು? ಅವರ ಕೈಗೆ ಐದೋ ಹತ್ತೋ ಹಾಕಿ ನಮ್ಮ ಕೆಲಸ ಮಾಡಿಕೊಂಡರೆ ಯಾರಪ್ಪನ ಮನೇ ಗಂಟೇನು ಹೋದದ್ದು? ಈಗ ಹೀಗೆ ಐದಾರು ತಿಂಗಳಿಂದ ಒದ್ದಾಡಿತಿರೋದು ನಾನು ಸರಿಯಾಗಿರಬೇಕೆಂದು ಹಟ ಹಿಡಿದಿದ್ದಕ್ಕೆ! ಇದು ಕಲಿಯುಗ, ಈ ಕಾಲದಲ್ಲಿ ಎಲ್ಲವೂ ಏನುಪೇರು, ಅನ್ನುವುದು ಮನಸ್ಸಿಗೆ ಬಂದಿದ್ದರೆ!

ಥೇ, ಅದೇ ಮರೆತೆ! ಬಹುಶಃ ಈ ಯುಗದಲ್ಲಿ ದೇವರಿಗೂ ಲಂಚ ಬೇಕೇನೋ! ಇರಬೇಕು, ಇರಬೇಕು ದಾಸರಾಯರು ಕೂಡ ಹೇಳಿಬಿಟ್ಟಿದ್ದಾರೆ. "ತಿರಿದುಂಬ ದಾಸರಲಿ ತಿರಿದ ಕಪ್ಪವ ಕೊಂಬೆ! ಕಡುಲೋಭದಾ ನಮ್ಮಪ್ಪ! ತಿರುಪತಿಯ ತಿಮ್ಮಪ್ಪ!" ಎಂದು. ಇನ್ನೇನು ಬೇಕು? ನಾನೂ ಇವೊತ್ತು ಮುಡಿಯುಟ್ಟುಕೊಂಡು ಹರಕೆ ಯಾದರೂ ಕಟ್ಟುತ್ತೇನೆ. ಏನೋ ಆ ತಿಮ್ಮಪ್ಪನ ದಯವೇ ಇರಬೇಕು. ಸಾಹುಕಾರನ ಆಳು ಬರಲಿಲ್ಲ." ಎಂದು ಇನ್ನೂ ಏನೇನೋ ಯೋಚನೆ ಮಾಡಿಕೊಂಡು ವೆಂಕಟೇಶಯ್ಯನು ಸ್ನಾನಕ್ಕೆ ಎದ್ದನು.

ಪೋಸ್ಟ್ ವರ್ರ್‍ಯಾ ಆ ಬೀದಿಗೆ ಬಂದು ಹೋದ. ಅದನ್ನು ಕಾಯುದ್ದು ಕೊಂಡಿದ್ದ ಹೆಂಡಿತಿ ಬಂದು ಗಂಡನಿಗೆ "ಇವೊತ್ತೂ ಪೋಸ್ಟ್‌ನಲ್ಲಿ ಬರಲಿಲ್ಲ." ಎಂದು ವರದಿಮಾಡಿದಳು. ಗಂಡನೂ ಅವಳ ಆಶಾಭಂಗವನ್ನು ತಾನೂ ಪಡಿಸಿಕೊಳ್ಳುತ್ತ "ಹೋಗಲಿ, ಬಿಡು. ಮೋಡಕವಿದ್ದೂ ಮಳೆ ಬರಲಿಲ್ಲ. ಅಂದರೆ ಅದೃಷ್ಟ" ಎಂದನು.

"ಏನೋ ಭಂಡಬಾಳಾಗಿದೆ ಅಂದರೆ, ತಲೆಸುತ್ತಲೂ ಸಾಲಮಾಡಿ ಕೊಂಡು. ಈ ಪ್ರಾರಬ್ಧ ಯಾವೊತ್ತಿಗೆ ಮುಗಿಯುತ್ತೋ?"

"ಅಲ್ಲ. ಈಗ ಒಂದು ಎರಡು ತಿಂಗಳಿಂದ ಹೀಗೆ ಮುಗ್ಗಟ್ಟಾಗಿದೆ. ಆದರೇನು? ಎಲ್ಲಾ ಸರಿ ಹೋಗುತ್ತೆ. ಸಮಾಧಾನವಾಗಿರೋಣ. ನೀನೇ ಹೀಗಂದರೆ, ನಿನಗಿಂತ ಬಡವರಾಗಿರೋರ ಗತಿ ಏನು?"

"ಅವರಿಗೆ ಅದೇ ಅಭ್ಯಾಸವಾಗಿ ಹೋಗಿರುತ್ತೆ. ಗಂಜಿಗೆ ಉಪ್ಪಿಲ್ಲ ದವರೂ ಇದ್ದಾರೆ ನಿಜ. ಹಾಗಂತ ಹಾಲಿಗೆ ಸಕ್ಕರೆಯಿಲ್ಲ ಅನ್ನೋರ ಕಷ್ಟ ಕಡಿಮೆಯಾಗುತ್ತೆಯೇ?"

"ನೋಡು—ಅಂತಹ ಕಷ್ಟ ಬಂತು ಅಂದುಕೊ. ಈಗ ನಮಗೆಲ್ಲ ಆಗಿರೋದು ಒಂದು ನೂರು–ನೂರಿಪ್ಪತ್ತರ ಸಾಲ. ಯಾವುದಾದರೂ ಒಂದು ಒಡವೆ ತೆಗೆದುಕೊಂಡು ಹೋಗಿ ಮಾರಿ ಕಷ್ಟ ನೀಗಿದ. ಬಹುಶಃ ಅಷ್ಟಕ್ಕೆ ಹೋಗಲ್ಲ. ದೇವರು ಇದ್ದಾನೆ."

"ದೇವರು ಇದ್ದಾನೆ ಅಂತೀರಿ. ಕಂಡೋರಿಲ್ಲ. ನಂಬಿದೋರಿಲ್ಲ."

ಅವನಿಗೂ ಹಾಗೇ ಅನ್ನಿಸಿತು. ಆದರೂ ತಾನು ಒಂದು ಗಳಿಗೆ ಮುಂಚೆ ಅಂದುಕೊಂಡಿದ್ದ ನಾಸ್ತಿಕಭಾವನೆಯು ಅವಳಿಗೆ ಹತ್ತಿತೇನೋ ಅದಿನ್ನೆಲ್ಲಿಯಾದರೂ ಬಲವಾಗಿ ಹೋದೀತು ಎಂದು ಅದನ್ನು ಅಲ್ಲಿಯೇ ತುಳಿಯಲು ಯತ್ನಿಸಿರುವವನಂತೆ "ಹಾಗನ್ನಬಾರದು. ಮನುಷ್ಯನ ಮನಸ್ಸು ಚಂಚಲ, ದುರ್ಬಲ. ಒಂದು ಗಳಿಗೆ ದೃಢವಾದರೆ ಸಾಕು; ಪರುಷದ ಕಲ್ಲಾಗಿ ಮುಟ್ಟಿದ್ದನ್ನೆಲ್ಲ ಚಿನ್ನ ಮಾಡುತ್ತದೆಯಂತೆ" ಎಂದ. ಅವನ ಮನಸ್ಸೇ "ನಿನ್ನ ಮಾತು ನೀನೇ ನಂಬುವೆಯಾ?" ಎನ್ನುತ್ತಿತ್ತು; ವಿವೇಕ "ನಂಬಲೇಬೇಕು" ಎನ್ನುತ್ತಿತ್ತು. "ನಂಬಲೇಬೇಕು ಅನ್ನೋದು ಬೇರೆ. ನಂಬಿರೋದು ಬೇರೆ. ಅದನ್ನು ಮರೆತೀಯೆ" ಎಂದು ಇನ್ನೂ ಒಂದು ಸಲ ಮನಸ್ಸು ಒತ್ತಿ ಒತ್ತಿ ಹೇಳಿತು.

ವೆಂಕಟೇಶಯ್ಯ ಆ ಅರೆಮನಸ್ಸಿನಲ್ಲಿಯೇ ಸಂಧ್ಯಾವಂದನೆ ಮಾಡಿದ. ದೇವರಪೂಜೆಯೂ ಆಯಿತು. ಊಟಕ್ಕೆ ಬಡಿಸುವ ವೇಳೆಗೆ ಎಲೆಯ ಮುಂದೆ ಉಪನಿಷತ್ತು ಹೇಳುತ್ತ ಕುಳಿತಿರುವುದು ಪದ್ಧತಿ. ಅಂದೂ ಉಪನಿಷತ್ತು ಆರಂಭಿಸಿದ. "ಬ್ರಹ್ಮವಿದಾಪ್ನೋತಿಪರಂ| ತದೇಷಾಭ್ಯುಕ್ತಾ ಸತ್ಯಂ | ಜ್ಞಾನಮನಂತಂ ಬ್ರಹ್ಮ | ಯೋ ವೇದನಿಹಿತಂ ಗುಹಾಯಾಂ ಪರಮೇವ್ಯೋಮನ್ | ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ?"

ಏಕೋ ಪಾರಾಯಣ ಅಲ್ಲಿಗೇ ನಿಂತು ಹೋಯಿತು: ಖಸೋಽಶ್ನುತೇ ಸರ್ವಾನ್ ಕಾಮಾನ್—ಎಂದಿದೆಯಲ್ಲ. ಸಮಸ್ತ ಕಾಮನಗಳೂ ಪೂರ್ಣವಾಗುವುವು ಎಂದ ಮೇಲೆ ಈ ಸಣ್ಣಪುಟ್ಟವಕ್ಕೆಲ್ಲಾ ಒದ್ದಾಡುವುದು ನಮ್ಮದೇ ತಪ್ಪೇನು? ಇರಬೇಕು. ಆದರೆ, ದೊಡ್ಡವರ ಹತ್ತಿರ ಮಾತನಾಡುವಾಗ ಮನಸ್ಸು ಏಕಾಗ್ರಕ್ಕೆ ಬಂದು ಮಿಕ್ಕೆಲ್ಲವನ್ನೂ ಮರೆತು ಬಿಡುತ್ತದೆಯಲ್ಲ ಹಾಗೇ ಬ್ರಹ್ಮಸಾಕ್ಷಾತ್ಕಾರವಾದಾಗ ಆಗುವುದೇನೋ? ಆಗ ಇವೆಲ್ಲ ಮರೆತುಹೋಗುವುದೇನೋ? ಆಯಿತು. ನಾವು ಮರೆತರೆ

ಇತರರೂ ಮರೆಯುತ್ತಾರೆಯೋ? ಅಥವಾ ನಮಗೆ ಬ್ರಹ್ಮ ಸಾಕ್ಷಾತ್ಕಾರ ವಾದಾಗ ಎಲ್ಲರ ಕಣ್ಣಿಗೂ ನಾವು ಬ್ರಹ್ಮವಾಗಿ ಕಂಡು ಅವರು ಸುಮ್ಮ ನಾಗುವರೋ? ಎಂದು ಏನೇನೋ ಯೋಚನೆಗೆ ಬಂತು.

ಹೆಂಡಿತಿಯು "ಬಡಿಸಿ ಆಯಿತು ಊಟಕ್ಕೆ ಕುಳಿತುಕೊಳ್ಳಿ. ಏನೋ ಯೋಚನೆಯಿದ್ದೇ ಇದೆ. ಹೇಗೋ ಆಗುತ್ತೆ. ಸಮಾಧಾನವಾಗಿ ಊಟಮಾಡಿ" ಎಂದಳು.

ವೆಂಕಟೇಶಯ್ಯನು ಊಟಕ್ಕೆ ಕುಳಿತನು. ಅವನಿಗೆ ಬ್ರಹ್ಮದ ಯೋಚನೆ ಒಂದು ಪಾಲಾದರೆ ಬಾಡಿಗೆಯವನು ಎಲ್ಲಿ ಬರುತ್ತಾನೋ ಎಂಬ ಯೋಚನೆ ಹತ್ತುಪಾಲು. ಊಟವಾಗುತ್ತಿರುವಾಗ ನರಸಿಂಹಯ್ಯನ ಮಗ ಶ್ರೀನಿವಾಸ ಬಂದ.

ಶ್ರೀನಿವಾಸ ಬಂದವನೇ ನಮಸ್ಕಾರಮಾಡಿದ.

"ಏನಯ್ಯಾ, ಸಮಾಚಾರ? ಏನೋ ಬಹಳ ನಗುತಾ ಬಂದಿದ್ದೀಯಲ್ಲ?"

"ರಿಸಲ್ಟ್ಸ್ ಬಂತಲ್ಲಾ ಮೇಷ್ಟರೆ?"

"ಪ್ಯಾಸಾಯಿತೋ? ಕೇಳೋದೇನು? ನಿನ್ನ ಮುಖವೇ ಹೇಳುತ್ತಿದೆ. ಯಾವ ಕ್ಲಾಸ್?"

"ಫಸ್ಟ್‌ಕ್ಲಾಸ್ ಮೇಷ್ಟರೆ".

"ಭೇಷ್, ಭೇಷ್. ಮುಂದಕ್ಕೇನು ಮಾಡುತೀಯೆ? ಓದುತ್ತೀಯಷ್ಟೆ?"

"ನನಗೇನೋ ಬೇಡ. ಇಂಗ್ಲೀಷಿಗೆ ಸಲಾಂ ಹಾಕಿ ಸಂಸ್ಕೃತ ಓದಬೇಕು ಅಂತ ಇದ್ದೀನಿ."

"ನನ್ನ ಮಾತು ಕೇಳು. ಇದು ಇಂಗ್ಲಿಷಿನ ಕಾಲ. ಇನ್ನು ನಾಲ್ಕು ವರ್ಷ ಓದಿಬಿಡು. ಬಿ.ಎ. ಅಂತ ಆಗಿಹೋಗಲಿ."

"ರಾಮಕೃಷ್ಣರು ಯಾವ ಕಾಲೇಜಿಗೆ ಹೋಗಿದ್ದರು ಮೇಷ್ಟರೆ?"

"ಆದರೆ ನಾವು ಅವರ ಅಂತಸ್ತಲ್ಲ. ನೀನು ಅವರ ಹಾಗೆ ಆದರೆ ನಾನು ಬೇಡ ಎನ್ನುವುದಿಲ್ಲ. ಆದರೆ, ರಾಮಕೃಷ್ಣರ ಹಾಗೆ ಆಗಬೇಕಾದರೆ ಸಂಸ್ಕೃತ ತಾನೇ ಯಾಕೆ ಬೇಕು ?"

"ಅದೂ ನಿಜ. ಹಾಗಾದರೆ ಏನು ಮಾಡಬೇಕು ಅಂತೀರಿ ?"

"ನೋಡು ಶ್ರೀನಿವಾಸ, ನೀನು ಹೋಗಿ ಆ ಸನ್ಯಾಸಿಗಳ ದರ್ಶನ ಮಾಡಿ ಬಂದದ್ದೇ ಬದಲಾಯಿಸಿ ಹೋಗಿದ್ದೀಯೆ. ನಮ್ಮ ಮಾತೆಲ್ಲ ಕೇಳಬೇಡ. ಇವೊತ್ತು ಮನೆಗೆ ಹೋಗಿ ರಾತ್ರಿ ಏನೂ ತಿನ್ನಬೇಡ. ಒಂದಷ್ಟು ಹಾಲು ಕುಡಿದು ಅವರ ಹೆಸರು ಹೇಳಿ ಮಲಗಿಕೊಂಡು ಬಿಡು. ಅವರೇನು ಹೇಳಿದರೆ ಅದು ಮಾಡು."

"ನೀವು ಹಾಗಂತೀರಿ. ಅಪ್ಪ ಒಪ್ಪಬೇಕಲ್ಲ ?"

"ಅವರನ್ನೊಪ್ಪಿಸೋ ಭಾರ ನನಗಿರಲಿ. ಆಯಿತು. ಎಲ್ಲಿ ಈಚೆಗೆ ನರಸಿಂಹಯ್ಯನವರನ್ನು ಕಾಣೋದೆ ಕಷ್ಟವಾಗಿದೆಯಲ್ಲ ?"

"ಅವರು ನಿಮಗೆ ಈ ಕಾಗದ ಕಳುಹಿಸಿದ್ದಾರೆ."

"ಏನಯ್ಯಾ, ಅದು ?"

"ನಾನೇನು ಬಲ್ಲೆ ?"

ವೆಂಕಟೇಶಯ್ಯ ಕಾಗದವನ್ನು ತೆಗೆದುಕೊಂಡು ಓದಿದ. ಮೊಕ ಮೊರದಗಲವಾಯಿತು. "ಹಚ್ಚೇ ವೆಂಕಟೇಶನಿಗೆ ಒಂದು ತುಪ್ಪದ ದೀಪ" ಎಂದು ಹೆಂಡತಿಯ ಕಡೆಗೆ ಕಾಗದವನ್ನು ಎಸೆದ.

ಅವಳೂ ಕಾಗದ ನೋಡಿದಳು: ವೆಂಕಟೇಶಯ್ಯನವರನ್ನು ಸನ್ಯಾಸಿಮಠದ ಮ್ಯಾನೇಜರಾಗಿ ನೇಮಿಸಲಾಗಿದೆ. ತಿಂಗಳಿಗೆ ೩೦ ರೂ. ಸಂಬಳ ಮತ್ತು ಮನೆ ಮುಫತ್ತಾಗಿ. ಅಡಿಷನಲ್ ಸೆಕ್ರೆಟರಿ ಮೋಹನ ಬಾಯಿಯವರ ಬಳಿ ಮುಂದಿನ ವಿಚಾರಗಳನ್ನೆಲ್ಲಾ ತಿಳಿಯುವುದು. ಕಳೆದ ಮೂರು ತಿಂಗಳ ಹಿಂದೆಯೇ ಈ ನೇಮಕವಾಗಬೇಕಾಗಿತ್ತಾಗಿ. ಆ ಮೂರು

ತಿಂಗಳ ಅವಧಿಗೆ ಸಂಭಾವನೆಯಾಗಿ ಐವತ್ತು ರೂಪಾಯಿ ಕಳುಹಿಸ ಲಾಗಿದೆ. ಚೆಕ್ ತಲಪಿದ್ದಕ್ಕೆ ರಸೀತಿ ಕಳುಹಿಸುವುದು.

ನರಸಿಂಹಯ್ಯ,
ಸೆಕ್ರೆಟರಿ.

"ಹೋಗಲಿ ಬಿಡಿ, ದೇವರು ದೊಡ್ಡ ಮನಸ್ಸುಮಾಡಿ ಬಾಡಿಗೆ ತಗಾದೆ ತಪ್ಪಿಸಿದ."

"ಇದೇ ನೋಡು, ನಮಗೆ ತಿಳಿಯೋಲ್ಲ ಅನ್ನೋದು, ಇದು ಎಂಟು ದಿವಸ ಮೊದಲಾಗಿದ್ದರೆ ?"

"ಆ ಬಾಡಿಗೆಯವನ ಕೈಲಿ ಅಷ್ಟು ಮಾತು ಕೇಳಬೇಕಾಗಿತ್ತಲ್ಲ."

* * * *

ಅಂದಿನ ಸಂಜೆ ನಾಲ್ಕು ಗಂಟೆ ಇರಬಹುದು, ಸೀತಮ್ಮನವರು ಪ್ರೊಫೆಸರ್ ಶತಾನಂದಂ ನೋಡಲು ಹೋದರು. ಸ್ವಾಗತೋಪಚಾರ ಗಳಾದ ಮೇಲೆ ಮಾತುಕತೆಗಾರಂಭವಾಯಿತು.

"ನೀವೇನಂತೆ ವೆಂಕಟೇಶಯ್ಯನ್ನ ಸಲೆಕ್ಟ್‌ಮಾಡಿದ್ದು ?"

"ಹೌದು. ಸಲೆಕ್ಟ್ ಅನ್ನೋಕಿಂತ ಅಪ್ರೂವ್ ಅನ್ನೋದು ಸರಿ."

"ನರಸಿಂಹಯ್ಯನವರು ಸಲೆಕ್ಟ್ ಮಾಡಿದರು. ಅವರ ಮಗ ಶ್ರೀನಿವಾಸನಿಗೆ ಅವರು ಪಾಠ ಹೇಳುತ್ತಿದ್ದುದು ನೋಡಿ, ಮೆಚ್ಚಿ, ಈ ಕೆಲಸಕ್ಕೆ ಈತ ಸರಿ ಅಂತ ರಮೇಶ್ ಕೈಲಿ ಹೇಳಿದರು. ಅವರು ನಾನೂ ಒಪ್ಪಬೇಕೆಂದರು. ಇಲ್ಲಿಗೆ ಬಂದಿದ್ದರು; ಮೂರು ಗಂಟೆ ಹೊತ್ತು ಇದ್ದರು; ಸಂತೋಷವಾಯಿತು; ಒಪ್ಪಿದೆ."

"ಆಯಿತು. ಮುಂದಿನ ಪ್ರೋಗ್ರಾಂ ವಿಚಾರ ಏನು?"

"ಮಂದಿರ ಏಡೆಡ್ ಇನ್ಸ್ಟಿಟ್ಯೂಷನ್ ಆಗುವುದು ನನಗೆ ಸಮ್ಮತವಿಲ್ಲ.

ನಾವೇ ಇಂಡಿಪೆಂಡೆಂಟ್ ಆಗಿ ಒಂದು ಸಿಲಬಸ್ ಮಾಡೋಣ. ಮಕ್ಕಳನ್ನು ಪರೀಕ್ಷೆಗೆ ಕಳುಹಿಸೋಣ. ಮಿಡಲ್ ಸ್ಕೂಲ್, ಎಸ್. ಎಸ್. ಎಲ್. ಸಿ. ಮಾಡಿಸೋಣ ಅಲ್ಲಿಂದ ಸಾಧ್ಯವಾದರೆ ಮದುವೆಮಾಡಿ ಗಂಡನ ಮನೆಗೆ ಕಳುಹಿಸೋಣ."

"ಸರಕಾರ ಕೊಡುವ ಗ್ರಾಂಟ್ ಯಾಕೆ ಬಿಡಬೇಕು ?"

"ಗ್ರಾಂಟ್ ತೆಗೆದುಕೊಂಡರೆ ಅವರು ಹೇಳಿದ ಹಾಗೆ ಕೇಳಲೇ ಬೇಕು. ಈಗ ದೇಶದಲ್ಲಿ ಬೇಕಾದಷ್ಟು ಎಕ್ಸ್‌ಪೆರಿಮೆಂಟ್ ನಡೆಯಬೇಕು. ಈಗ ನಾವು ಹ್ಯಾಂಡಿಕ್ಯಾಪ್ ಒಪ್ಪಿಕೋಬಾರದು."

"ಹಾಗಾದರೆ ವೆಂಕಟೇಶಯ್ಯ ಇರಬಹುದು."

"ಇಲ್ಲದಿದ್ದರೆ?"

"ಗ್ರಾಂಟ್ ಕೇಳುವ ಹಾಗಿದ್ದರೆ ಗ್ರಾಜ್ಯುಯೆಟ್ ಮ್ಯಾನೇಜರ್ ಬೇಕಾಗುತ್ತೆ."

"ಹಾಗೆ ಬಂದರೂ ವೆಂಕಟೇಶಯ್ಯ ಸಾಮಾನ್ಯನಲ್ಲ; ಸೀತಮ್ಮಾ! ನಾನು ನೋಡಿದೆ. ವಿದ್ಯಾವಂತ, ಸಂಸ್ಕೃತ ಚೆನ್ನಾಗಿ ಓದಿದ್ದಾನೆ. ಇಂಗ್ಲಿಷ್‌ನಲ್ಲಿ ಪಾಠ ಹೇಳಿ ಶ್ರೀನಿವಾಸನಿಗೆ ಎಸ್. ಎಸ್. ಎಲ್. ಸಿ. ಪ್ಯಾಸ್ ಮಾಡಿಸಿದ್ದಾನೆ. ನಮ್ಮ ಮಂದಿರಕ್ಕೆ ಅಷ್ಟು ಯೋಗ್ಯತೆ ಸಾಕು. ನಾನು ಸರ್ಟಿಫೈ ಮಾಡಿದ್ದೇನೆ ಅಂವಮೇಲೆ ಇನ್ನೇನು?"

"ನಾಳೆ ನೀವೇ ಡಿ ಪಿ. ಐ. ಆದಿರಿ ಅಂದುಕೊಳ್ಳೋಣ. ಆಗಲಾದರೂ ಗ್ರಾಂಟ್ ಕೊಡುತ್ತೀರೋ?"

"ಕೂಡದರೀ! ಡೆಮೊಕ್ರಸಿ ಅಂದಾಗ, ಸರಕಾರಕ್ಕಿಂತ ಜನ ಈ ವಿಚಾರಗಳಲ್ಲಿ ಮುಂದೋಡುತ್ತಿರಬೇಕು. ಎಜುಕೇಷನ್, ಇಂಡಸ್ಟ್ರಿ, ಮೊದಲಾದ ನೇಷನ್ ಬಿಲ್ಡಿಂಗ್ ಆಕ್ಟಿವಿಟೀಸ್‌ನಲ್ಲಿ ಜನ ಮುಂದೆ, ಸರಕಾರ ಹಿಂದೆ ಅನ್ನೋ ಹಾಗೆ ಮಾಡಿಕೊಳ್ಳದಿದ್ದರೆ, ಆ ಡೆಮಾಕ್ರಸಿ ಯಾಕೆ? ಕಿತ್ತು ತಿಪ್ಪೆಗೆ ಎಸೆದು ಸುಖವಾಗಿರೋಣ. ಸರಕಾರ, ಸರಕಾರ ಅಂತ

ವಲ್ಲದಕ್ಕೂ ಸರಕಾರದ ಕೈ ಕಾಯ್ದು ಕುಳಿತಿರೋದು ಹಿಂದಿನ ಯುಗದ ಗುರುತು. ತಲೆಯ ಮೇಲೆ ಕಾಲಿಟ್ಟು ತುಳಿದು ಆಳುತ್ತಿದ್ದ ಸರಕಾರ ವಿದ್ದಾಗ, ಒಬ್ಬರ ಮೇಲೆ ಒಬ್ಬರಿಗೆ ಸಂಶಯ. ಜನರು ಏನು ಮಾಡಿ ದರೂ ಅದೆಲ್ಲಿ ಸರಕಾರದ ವಿರುದ್ಧವಾದ ಚಳುವಳಿಯಾದೀತು ಎಂದು ಸರಕಾರಕ್ಕೆ ಸಂದೇಹವಿದ್ದಾಗ ಇದ್ದ ಮೆಂಟಾಲಿಟಿ ಈಗಲೂ ಇರೋದೆ. ಆಗ ರೆಕಾಗ್ನಿಷನ್, ಗ್ರ್ಯಾಂಟ್ ಇದೆಲ್ಲ ಎಜುಕೇಷನಲ್ ಆಕ್ಟಿವಿಟೀಸ್ ಕೊಲ್ಲೋಕೆ ಹೂಡಿದ್ದ ಆಟ. ಈಗೇಕರೀ ಅವೆಲ್ಲ! ದೇವರ ದಯದಿಂದ ನಮಗೆ ಒಂದು ಛಾನ್ಸ್ ಸಿಕ್ಕಿದೆ. ಲೆಟ್ ಅಸ್ ಪ್ರೂವ್ ಅವರ್‌ಸೆಲ್ವ್ಸ್, ಎಲ್ಲರೂ ಎಜುಕೇಷನ್ನಲ್ಲಿ ರೆವೆಲ್ಯೂಷನ್ ಆಗಬೇಕು ಅನ್ನುತ್ತಿದ್ದಾರೆ. ಮಾಡಿ ತೋರಿಸಿಬಿಡೋಣ."

"ಹಣ ಸಾಕು ಅಂತೀರಾ?"

"ನಾನು ಇದುವರೆಗೆ ಹೇಳಿಲ್ಲ. ನನಗೆ ಮಕ್ಕಳಿಲ್ಲ, ಮರಿಯಿಲ್ಲ. ಇರೋರು ನಾವಿಬ್ಬರು. ನಾವಿಬ್ಬರೂ ಆಗಲೇ ಮಾತನಾಡಿಕೊಂಡಿದ್ದೇವೆ. ಇಕೋ ಅವರೇ ಬಂದರು ಕೇಳಿ. ಏನ್ರಿ? ನಾವು ಕನ್ಯಾಮಂದಿರದ ವಿಚಾರ ಏನು ಮಾತನಾಡಿಕೊಂಡೆವು?"

"ಅದೇ? ರಿಟೈರಾದಮೇಲೆ ನಾವು ಕನ್ಯಾಮಂದಿರವನ್ನು ಕೈಗೆ ತೆಗೆದುಕೊಳ್ಳುವುದು; ನಮಗೆ ಇರುವುದನ್ನೆಲ್ಲ ಅದಕ್ಕೆ ಒಪ್ಪಿಸುವುದು; ಅದನ್ನು ಒಂದು ಐಡಿಯಲ್ ಇನ್‌ಸ್ಟಿಟ್ಯೂಷನ್ ಮಾಡುವುದು ಅಂತ ಅಂದು ಕೊಂಡಿದ್ದೀವಿ."

"ಆಯಿತು. ನಿಮ್ಮ ಐಡಿಯಲ್ ಏನು?"

"ಅದು ಬಹುಶಃ ನಿಮಗೆ ಒಪ್ಪುತ್ತೆಯೊ ಇಲ್ಲವೊ?"

"ಪ್ರೊಫೆಸರ್ ಶತಾನಂದಂ ಹೇಳಿದರೂ ಒಪ್ಪೋಲ್ಲವೇ?"

"ನಾವು ನಿಮ್ಮ ವಿಚಾರ ಏನೇನೋ ಕೇಳಿದೇವೆ. ಅದರಿಂದ ಹಾಗೆ ಹೇಳಿದೆ. ಏನೂ ಅಂದುಕೊಳ್ಳಬೇಡಿ. ನಮ್ಮ ಕರ್ಣಾಟಕದೇವಿಯೇ

ನಮ್ಮ ಗುರಿ. ಆಕೆಗೆ ತಲೆಯೊಂದೇ ಆದರೂ ಕೈಗಳೆಷ್ಟು ನೋಡಿ. ಆಕೆ ಹುಟ್ಟಿದ್ದು ರಕ್ಷಣೆಗೆ. ಹಾಗೆ ಪಾಲನೆಯೇ ಮುಖ್ಯ ಲಕ್ಷ್ಯವಾಗುಳ್ಳ ಶಸ್ತ್ರ ಶಾಸ್ತ್ರವೆರಡೂ ಬಲ್ಲ ಆರ್ಟಿಸ್ಟ್ ಫಿಲಾಸಫರ್ ಮದಾಲಸೆಯಂತಹ ವೈಫ್–ಮದರ್ ನಮ್ಮ ಐಡಿಯಲ್."

"ಪ್ರೊಫೆಸರ್, ನಾನು ಹೋದ ಹೋದ ಕಡೆಯಲ್ಲೆಲ್ಲಾ ನಾನೇ ಮೊದಲಿಂದ ಕೊನೆಯ ವರೆಗೂ ಹರಟುತ್ತಿದ್ದವಳು ಈ ದಿನ ನಿಮ್ಮ ಹತ್ತಿರ ನೋಡಿರಿ ನಾಯಿಮರಿಯ ಹಾಗೆ ಇದ್ದೀನಲ್ಲ!"

"ನಾವು ನಿಮ್ಮನ್ನು ಹೆದರಿಸಿದೆವೇನಪ್ಪ, ಹಾಗಾದರೆ?"

"ಇಲ್ಲ. ನಿಮ್ಮ ಬಳಿ ಬಂದರೆ, ಟಾಗೂರ್, ಗಾಂಧಿ ಇಂಥವರ ಹತ್ತಿರ ಹೋದ ಹಾಗೆ ಆಗುತ್ತರಿ. ಏನೋ ನನಗೆ ನನ್ನ ಹರಟೆಗಿಂತಲೂ ನಿಮ್ಮ ಉಪದೇಶ ಕೇಳಬೇಕು ಅನ್ನಿಸಿತು ಅಲ್ಲದೆ, ನೀವು ಬಲ್ಲವರು, ಓದಿದವರು. ನಿಮ್ಮ ಮಾತು ಕೇಳಬೇಕು ಎಂದೇ ಗೊತ್ತುಮಾಡಿ ಕೊಂಡೇ ಹೊರಟೆ."

"ಆಯಿತು. ಮೋಹನಬಾಯಿ ಏಕೆ ಬರಲಿಲ್ಲ?"

"ವರ್ಷ ಆಗುವ ವರೆಗೂ ಎಲ್ಲೂ ಬರಬಾರದು ಎಂದಿದ್ದಾರೆ."

"ನೀವೂ ಅದಕ್ಕೆ ಒಪ್ಪುತ್ತೀರಾ! ನಮ್ಮ ಮನೆಗೆ ಮೊದಲು ಕರೆದು ಕೊಂಡು ಬನ್ನಿ, ನಾವು ಇಂಗ್ಲಿಷ್ ಓದಿದವರು. ನಮಗೆ ಹಳೆಯ ಕಾಲದ ಆಚಾರಗಳಲ್ಲಿ ನಂಬಿಕೆಯಿಲ್ಲ."

"ನನಗೂ ಹಾಗೆಯೇ ಅನ್ನಿ. ನಾನೂ ಬಲವಂತಮಾಡಿ ನಮ್ಮ ಸಮಾಜಕ್ಕೆ ಕರೆದುಕೊಂಡು ಹೋಗಿದ್ದೆ. ಅಲ್ಲಿ ಕೆಲವು ಕಂದಾಚಾರವು ಇವೆ. ಆದರೆ ಮೊದಲೇ ಹೇಳಿದ್ದೆ. ಕಂದಾಚಾರಗಳು ಬಂದಿರಲಿಲ್ಲ. ಅಲ್ಲದೆ ನೋಡಿ, ಪ್ರೊಫೆಸರ್, ಆಕೆ ಬಂದರೆ ಆಕೆ ನೋಡಿದರೆ ತಮ್ಮ ಮಾಂಗಲ್ಯಕ್ಕೆ ಚ್ಯುತಿ ಬಂದೀತು ಎಂದು ಎಷ್ಟು ಜನ ತಪ್ಪಿಸಿಕೊಂಡಿದ್ದಾರೆ ಗೊತ್ತೆ? ಏನೋ ನಾವು ರಿಫಾರ್ಮ್ಸ್ ಅನ್ನುತ್ತೇವೆ. ಇನ್ನೂ ನಮ್ಮ

ಜನ ರಿಫಾರ್ಮ್ ಆಗಿಲ್ಲ. ಆಗಿರೋದೆಲ್ಲ ಪೌಡರ್, ಪೋಮೇಡ್, ಸ್ನೋ, ಸೋಪ್, ಇಷ್ಟೆ! ಒಳಗಡೆ ಮನಸ್ಸು ಬ್ರಾಹ್ಮಣರು ಪೂಜೆ ಮಾಡುವ ಸಾಲಗ್ರಾಮಕ್ಕಿಂತ ಗಟ್ಟಿಯಾಗಿದೆ."

"ಹೌದು; ಹೌದು. ಯಾವಾಗಲೂ ಬದಲಾವಣೆ ಮೇಲೆಮೇಲೆ ಆಗೋದು. ಆ ಕೋರ್, ಅಂದರೆ ಹೃದಯ ಬದಲಾವಣೆ ಆಗೋಕೆ ಅವತಾರಿಗಳು ಬರಬೇಕು. ಈಗ ನೋಡಿ ಗಾಂಧಿ ಶಿಷ್ಯರ ಹಾವಳಿ. ಗಾಂಧಿಯವರು ಇದ್ದಾಗ ಹೇಗಿದ್ದರು? ಈಗ ಹೇಗಿದ್ದಾರೆ?"

"ಇದಕ್ಕೇನು ಮಾಡೋದು ಪ್ರೊಫೆಸರ್"

"ಸೀತಮ್ಮ, ದೀಪ ಹಚ್ಚುವವರೆಗೂ ಕತ್ತಲು ಹೋಗೋದಿಲ್ಲರಿ. ಕೊಳೆ ಹೋಗಬೇಕಾದರೆ ಸೋಪ್ ಹಾಕಬೇಕರಿ. ಹಾಗೆ ವಿದ್ಯ, ವಿದ್ಯ, ವಿದ್ಯ. ಹಿಂದಿನ ಬ್ರಾಹ್ಮಣ ಯುಗದಲ್ಲಿದ್ದಹಾಗೆ ಶೀಲ, ನಡತೆ, ತಿದ್ದೋ ವಿದ್ಯಬೇಕು; ಈಗಿನ ಹಾಗೆ ಎಲ್ಲರಿಗೂ ವಿದ್ಯ ಅಂತ ಯಾರಿಗೂ ಬೇಡ ವಾದ ಈ ಕ್ಲರ್ಕ್ ಮಾಡೋ ವಿದ್ಯ ಹೇಳಿದರೆ ನೇಷನ್ ಉದ್ಧಾರವಾಗು ತ್ತಯೆ? ಈ ಸಲ ನೋಡಿ ನಮ್ಮಲ್ಲಿ ಸುಮಾರು ಮೂರು ಸಾವಿರ ಜನ ಡಿಗ್ರಿ ಪ್ಯಾಸ್ ಮಾಡಿದಾರೆ, ಇವರೆಲ್ಲ ಆಫೀಸ್‌ಗಳಿಗೆ ಅಪ್ಲಿಕೇಷನ್ ಹಿಡಿದು ಕೊಂಡು ಓಡುವ ಮಹಾನುಭಾವರೇ! ಇವರಿಂದ ನೇಷನ್ ಉದ್ಧಾರ ವಾಗುತ್ತೇನ್ರಿ! ಧೈರ್ಯವಾಗಿ, ಈ ಜನ್ಮಕ್ಕೆ ಈ ಗುರಿ ಸಾಧಿಸಿ ನನಗೂ ನನ್ನ ದೇಶಕ್ಕೂ ಕೀರ್ತಿ ತರುತ್ತೇನೆ ಅನ್ನೋ ಧೀರ ಬಂದರೆ ನಾವು ಬದುಕೋದು."

"ಈಗ ಸದ್ಯ ನೆಹ್ರೂ ಒಬ್ಬರಿದ್ದಾರೆ: ಅಂಥಾವರು."

"ಅಗೋ ಅಲ್ಲಿ ನೋಡಿ. ನೆಹ್ರೂ ಪೂಜೆ ನಮ್ಮಲ್ಲಿ ನಡೆಯುತ್ತಿದೆ. ಆ ರಕ್ತ, ಆ ವಂಶ, ಘನವಾದ್ದು. ಆದರೂ ಆತ ವೆಸ್ಟರ್ನ್ ಇನ್ ಮೈಂಡ್. ಬಹುಶಃ ಅವರೊಡನೆ ಹೋರಾಡೋಕ್ಕೆ ಆತನೇ ಬೇಕಾಗಿತ್ತೇನೋ? ನಮ್ಮ ಜನ ನೆಹ್ರೂ ಉಪಕಾರ ಮರೆಯೋಕೆ ಆಗದಷ್ಟು ಆಗಿದೆ ಆತ ನಿಂದ. ನಿಜ. ಆದರೂ, ಆದರೂ, ಸೀತಮ್ಮ, ಇಂಡಿಯದ ಐಡಿಯಲ್ ನೆಹ್ರೂ ಐಡಿಯಲ್‌ಗಿಂತ ದೊಡ್ಡದು."

"ಹಾ! ಹಾಗೆನ್ನುತ್ತೀರಾ?"

"ಅನ್ನುವುದಿಲ್ಲ. ಈ ಎದೆಯಲ್ಲಿ ಅದು ಖಚಿತವಾಗಿದೆ; ಈ ಬ್ರೇಯಿರ್ನಲ್ಲಿ ಅದು ಹಿಡಿದಿದೆ. ಆದರೆ ಅದನ್ನು ಸಾಧಿಸುವುದು ಹೇಗೆ ತಿಳಿಯದು, ಅಷ್ಟೇ!"

"ನೀವೇ ಹೀಗಂದರೆ ಇತರರ ಪಾಡೇನು?"

"ಪಾಡೇನು? ಮಿಕ್ಕವರು ತಿಳಿಯದೆ ನಂಬಿ ಹಾರಾಡುತ್ತಾರೆ. ನಾವು ತಿಳಿದು ನಂಬಲಾರದೆ ಹಾರಾಡುತ್ತೇವೆ. ಅಷ್ಟೇ ವ್ಯತ್ಯಾಸ!"

ಆರು ಗಂಟೆ ಹೊಡೆಯಿತು. ಸೀತಮ್ಮನು "ಇನ್ನು ನಾನು ಹೋಗುತ್ತೇನೆ. ಮೋಹನಬಾಯಿ ಕಾದಿರುತ್ತಾರೆ. ಅಂತೂ ಬೇಗ ಕನ್ಯಾಮಂದಿರ ಆರಂಭಿಸುವ ಹಾಗೆ ಮಾಡಿಬಿಡಿ." ಎಂದು ಹೇಳಿ ಹೊರಟಳು. ಆ ದಂಪತಿಗಳು ಬಾಗಿಲವರೆಗೂ ಬಂದು ಅವಳನ್ನು ಬಿಟ್ಟುಹೋದರು.

ಮೋಹನಬಾಯಿ ಮನೆಯಲ್ಲಿ ಕಾದಿದ್ದಳು. ಸೀತಮ್ಮ ಬರುವ ವೇಳೆಗೆ ವೀಣೆಯೂ ಬಂದಳು. "ದೊಡ್ಡಮ್ಮಾ! ನಮ್ಮ ಯಜಮಾನರಿಗೆ ಪ್ಯಾಸ್! ಫಸ್ಟ್‌ಕ್ಲಾಸ್!" ಎಂದು ಒಳಕ್ಕೆ ಓಡಿ ಹೋದಳು.

ಒಳಗೆ ವಿಚಾರಿಸಿದರೆ ಯಜಮಾನರು ಶ್ರೀನಿವಾಸ ಎಂದು ತಿಳಿಯಿತು. ಅವೊತ್ತು ವೀಣೆಯು ಒಂದು ತಟ್ಟೆ ಹಣ್ಣು, ಒಂದು ಹಾರ, ತೆಗೆದುಕೊಂಡು ಹೋಗಿ ಶ್ರೀನಿವಾಸನಿಗೆ ಹಾರಹಾಕಿ ಹಣ್ಣು ಕೊಟ್ಟು ಒಂದು ಹಣ್ಣು ತಿನ್ನಿಸಿ ಬಂದಳು.

ಆ ಸುದ್ದಿ ಕೇಳಿ ಪ್ರಾಣೇಶನಿಗೆ ಏಕೋ ಹೊಟ್ಟೆಯಲ್ಲಿ ಮೆಣಸಿನಕಾಯಿ ಕಿವಿಚಿದಂತಾಯಿತು. ಮಗನಿಗೆ ಫೇಲಾದ ಉರಿ ಒಂದು, ವೀಣಾ ಕೆಲಸದಿಂದ ಹೊತ್ತಿರುವ ಉರಿ ಒಂದು, ಎರಡೂ ಸೇರಿ ಅವನಿಗೆ ಆ ದಿನವೆಲ್ಲ ಮನಸ್ಸಿಗೆ ಕಸವಿಸಿಯಾಗಿತ್ತು.

## ೧೮

ಮೇರಿಯು ತಾಯಿಯನ್ನು ಕರೆದುಕೊಂಡುಬರಲು ಜಲಾರ್‌ಪೇಟೆಯವರೆಗೂ ಹೋಗಿದ್ದಳು. ಅಲ್ಲಿ ತಾಯಿ ಮಕ್ಕಳ ಭೇಟಿ ಬಹಳ ವಿಚಿತ್ರವಾಗಿ ನಡೆಯಿತು. ತಾಯಿಗೆ ಮಗಳ ಪರಿಚಯವಿಲ್ಲ; ಮಗಳಿಗೆ ತಾಯಿಯ ಪರಿಚಯವಿಲ್ಲ. ಇಬ್ಬರೂ ಒಬ್ಬರನ್ನೊಬ್ಬರು ನೋಡಿರುವುದು ಫೋಟೋಗಳಲ್ಲಿ. ಆದರೂ ಅಲ್ಲಿ ಸ್ಟೇಷನಲ್ಲಿ ಆ ರೈಲು ಬಂದು ನಿಲ್ಲುತ್ತಿದ್ದ ಹಾಗೆಯೇ, ಯಾವುದೋ ಒಂದು ಅನಿರ್ವಚನೀಯ ಶಕ್ತಿಯು ಮೇರಿಯನ್ನು ತಾಯಿಯಿರುವ ಗಾಡಿಗೇ ನೇರವಾಗಿ ಕರೆದುಕೊಂಡುಹೋಯಿತು. ತಾಯಿಮಕ್ಕಳಿಬ್ಬರೂ ಪರಸ್ಪರ ದರ್ಶನಾನಂದದಲ್ಲಿ ಒಂದು ಗಳಿಗೆ ಮೈ ಮರೆತಿದ್ದರು. ಕಣ್ಣೀರು ಕರೆದು ತಮ್ಮ ಹಿಂದಿನ ಅಪರಿಚಯವನ್ನು ತೊಳೆದವರಂತೆ, ಒಬ್ಬರನ್ನೊಬ್ಬರು ಕುಶಲ ಪ್ರಶ್ನೆಗಳಿಂದ ಗೌರವಿಸಿ ಬೆಂಗಳೂರಿಗೆ ಹೊರಟರು.

ತಾಯಿಯು ಮಗಳಿಗೆ ತಮ್ಮ ಯಜಮಾನರನ್ನು ಭೆಟ್ಟಿ ಮಾಡಿಸಿದಳು. ಆತನ ಹೆಸರು ಶಂಕರನಾಯರ್—ಆತನು ಮುಸಿಮುಸಿ ನಗುತ್ತಿರುವ ಸ್ವಭಾವದವನು. ಬೇಕೆಂದರೆ ಒಂದು ಗಂಟೆಯಲ್ಲ; ಒಂದು ದಿನವಲ್ಲ; ಒಂದು ವಾರ, ಒಂದು ತಿಂಗಳು ಕೂಡ ಸುಮ್ಮನಿದ್ದು ಬಿಡುವನು. ಜಾನಮ್ಮನ ಪರಿಚಯವಾಗಿ ಹದಿನೈದು ವರ್ಷವಾಗಿದೆ. ಆತ ಒಳ್ಳೆಯ ಭಾರಿಯ ಸಂಸ್ಕೃತ ವಿದ್ವಾಂಸ; ಜೊತೆಗೆ ವೈದ್ಯ. ವೈದ್ಯವೇ ವೃತ್ತಿ. ಜಾನಮ್ಮನಿಗೆ ಹದಿನೈದು ವರ್ಷದ ಹಿಂದೆ ಮರಣಾಂತಕವಾಗಬಹುದಾದ ರೋಗ ಬಂದಿತ್ತು; ಇಂಗ್ಲಿಷ್ ಡಾಕ್ಟರುಗಳೆಲ್ಲ ಕೈ ಬಿಟ್ಟರು. ಆಗ ನಾಯರ್ ಅವಳಿಗೆ ಗುಣ ಮಾಡಿ, ಅವಳ ಗುಣಕ್ಕೆ, ರೂಪಿಗೆ, ಮನಸೋತು ಅವಳನ್ನು ತನ್ನ ಮನೆಯಲ್ಲೇ ಇಟ್ಟುಕೊಂಡಿದ್ದನು. ಹಲವಾರು ಕಾಯಿ ನೋಡಿ ಬೇಸತ್ತಿದ್ದ ಜೋನಮ್ಮನ ಮನಸ್ಸು ಈ ಹಣ್ಣು ಕಂಡು ಆತ್ಮಾರ್ಪಣ ಮಾಡಿತ್ತು.

ನಾಯರ್ ಜಾನಮ್ಮನನ್ನು ಅವಳ ಹಿಂದಿನ ಹೆಸರಿನಿಂದ ಕರೆಯುವನು. ತನ್ನ ಅವಳ ಸಂಬಂಧವನ್ನು ಅವಳ ಮಗಳಿಗೆ ಹೇಳುವಾಗ "ನೋಡು ಮರಿಯಮ್ಮ, ನಮ್ಮ ದೇಶದ ತೋಟಗಳಲ್ಲಿ ಕೆಂಪಗೆ ಸೊಗಸಾದ ಕಿತ್ತಳೆ ಹಣ್ಣಿದೆ. ಚಿನ್ನದ ಗುಂಡುಗಳಂತಿರುವ ಚಕ್ಕೋತ ಹಣ್ಣುಗಳಿವೆ. ಹೀಗಂದರೆ ರಸ ಸುರಿಯುವ ಹಲಸು ಇದೆ. ಕಣ್ಣಿಗೆ ಬಣ್ಣವಾಗಿ ಒಪ್ಪುವ ಮಾವು ಇದೆ. ಅದೆಲ್ಲ ಬಿಟ್ಟು ಈ ಶಂಕರ, ಈ ನೇರಿಳೇ ಹಣ್ಣಿಗೆ ಬಾಯಿಬಿಟ್ಟು ಒಪ್ಪಿಕೊಂಡ. ನೋಡಿದೆಯಾ ?" ಎಂದನು. ಎಲ್ಲರೂ ಕಿಲಕಿಲ ನಕ್ಕರು.

ಮೇರಿಯ ಜೀವನದ ವಿವರಗಳೆಲ್ಲ ಪೂರ್ಣವಾಗಿ ಅಲ್ಲದಿದ್ದರೂ ಅರ್ಧಾರ್ಧವಾಗಿ ಅವರಿಬ್ಬರಿಗೂ ಗೊತ್ತಿತ್ತು. ಆದರೂ ಅವರಿಬ್ಬರಲ್ಲಿ ಯಾರೂ ಅಸಮಾಧಾನ ಪಡಲಿಲ್ಲ. ತನ್ನ ಮಗಳು ಸಿಕ್ಕಿದಳು ಎಂಬ ಸಂತೋಷ ಜಾನಮ್ಮನಿಗೆ. ಒಬ್ಬ ಬಂಧು ದೊರೆಯಿತೆಂಬ ಭಾವ ನಾಯರ್‌ಗೆ. ಅಂತೂ ಇಬ್ಬರೂ ಸಂತುಷ್ಟರಾಗಿದ್ದರು.

ಮೇರಿಗಂತೂ ವಿಚಿತ್ರವಾಗಿತ್ತು. ಒಬ್ಬಂಟಿಗಳಾಗಿ, ನೀನೇ ಎನ್ನುವರಿಲ್ಲದ ಜೀವನಕ್ಕೆ ಇಂದು ಏನೋ ಹೊಸ ಕಳೆ ಬಂದಿತ್ತು. ಅವಳಿಗೆ ಮಕ್ಕಳು ಎಂದರೆ ಏನೋ ದಿಗಿಲು. ಅವಳು ತನಗೆ ಮಕ್ಕಳಾಗ ದಿರುವುದಕ್ಕೆ ಏನೇನು ಬೇಕೋ ಅದೆಲ್ಲ ಮಾಡಿಕೊಂಡಿದ್ದಳು. ಭಾರಿ ಯಾದ ರೋಗರುಜಿನಗಳೇನಾದರೂ ಬಂದರೆ, ಯಾರಿಗೂ ಹೇಳದೆ ವಿಷ ತೆಗೆದುಕೊಂಡು ಪ್ರಾಣ ಬಿಟ್ಟುಬಿಡುವುದು ಎಂದು ಅವಳ ನಿರ್ಧಾರ. ಅವಳಿಗೆ ತಾನು ಹೋದಮೇಲೆ ತನ್ನ ಹೆಸರು ಉಳಿಯಬೇಕು ಎನ್ನುವ ಆಸೆಯೂ ಇಲ್ಲ; ಹಾಗೆಯೇ, ಇರುವಾಗ ಹತ್ತು ಜನರ ಜೊತೆಯಲ್ಲಿ ಇರಬೇಕು ಎನ್ನುವ ಆಸೆಯೂ ಇಲ್ಲ. ಅವಳ ಆಸೆಯೆಲ್ಲ ಇದ್ದಾಗ ಚೆನ್ನಾಗಿ ಇರಬೇಕು ಅಷ್ಟೆ! ಸುಖವಾಗಿದ್ದು ಪ್ರಾಣ ಬಿಡಬೇಕು, ಎಂಬ ಭಾವದವಳು. ಅವಳಿಗೆ ಕೀರ್ತಿ ಬೇಕಿಲ್ಲ; ಪುಣ್ಯ ಪಾಪದ ಯೋಚನೆಯಿಲ್ಲ. ಅದೊಂದು ವಿಚಿತ್ರ ಮೃಗ.

ಆದರೆ ತಾಯಿಯು ಬರುವಳು ಎಂದು ಗೊತ್ತಾದ ಮೇಲೆ ಅವಳ ಹೃದಯದಲ್ಲಿ ಏನೋ ಪರಿವರ್ತನವಾದಂತಿದೆ. ಅವಳ ಜೀವನದಲ್ಲಿ ಅವಳಿಗೆ ಗೊತ್ತಿದ್ದುದು ಒಂದೇ ಒಂದು: ಅದು ಮೋಹ. ಮೋಹ ಸಾಗರದ ಮೊದಲನೆಯ ತೆರೆ ತನ್ನನ್ನು ಹೊತ್ತುಕೊಂಡುಹೋಗಿ ಯಾವನ ಮಡುಲಿಗೋ ಹಾಕಿ ಆ ಮಿಷನ್‌ನಿಂದ ಓಡಿಹೋದ ದಿನ ಆರಂಭವಾದ ಆ ವಿಚಿತ್ರ ಜೀವನ ಅದೇ ಹಾದಿಯಲ್ಲಿ, ಅದೇ ವಿಧವಾಗಿ, ಕೊಂಚ ಹೆಚ್ಚುಕಡಿಮೆ, ಒಂದೇ ಅಚ್ಚಿನಲ್ಲಿ ಓಡುತ್ತಿದೆ. ಆದರೆ ಇಂದು ಒಂದು ವ್ಯತ್ಯಾಸ. ರಮೇಶ್ ಹೋದನೆಂದು ಒಂದು ದುಃಖ: ತಾಯಿ ಬಂದಳೆಂದು ಒಂದು ಸುಖ: ಎರಡೂ ಬಂದು ಅವಳಿಂದು ಬೇರೇ ಮೇರಿಯಾಗುತ್ತಿದ್ದಾಳೆ. ಆ ದುಃಖದಲ್ಲಿ ತನಗೊಂದು ಊರುಗೋಲು ಬೇಕು ಎಂದು ಕ್ರಿಸ್ತನ ಪಟವನ್ನು ತಂದ ಮೇರಿ, ತನ್ನ ಮನೆಗೆ ಬಂದಿರುವ ತಾಯಿಯೆಂಬ ಸೌಭಾಗ್ಯವನ್ನು ಇತರರಿಗೂ ತೋರಿಸ ಬೇಕೆಂದು ತನ್ನ ಮನೆಗೆ ಇತರರನ್ನು ಕರೆಯಬೇಕು ಎನ್ನುವ ಘಟ್ಟಕ್ಕೆ ಮುಟ್ಟಿದ್ದಾಳೆ.

ಮೊದಲನೆಯ ಕರೆ ಕುಟ್ಟಿಯಮ್ಮನಿಗೆ. ಮೇರಿ ಇಲ್ಲ ಎನ್ನದೆ ತಿಂಗಳಿಗೊಮ್ಮೆ ಅವಳಿಗೆ ಬಿಲ್ ಕೊಡುವಾಗ ಅವಳೊಡನೆ ಮಾತನಾಡು ತ್ತಿದ್ದಳು. ಈಗ ಅವಳನ್ನು ಕರೆದು “ನಿನಗೆ ಒಂದು ರೂಮು ಕೊಡು ತ್ತೇನೆ; ನೀನು ಈ ಮನೆಯಲ್ಲಿಯೇ ಇರು” ಎಂದು ಹೇಳುವ ಮಟ್ಟಿಗೆ ತಗ್ಗಿದ್ದಾಳೆ. ಇದುವರೆಗೆ ಕೋಆಪರೇಟಿವ್ ಬ್ಯಾಂಕ್‌ಗೆ ಹೋದರೆ—ಹಣ ಕಟ್ಟುವುದಕ್ಕೆ ಮಾತ್ರ ಅವಳು ಹೋಗುತ್ತಿದ್ದುದು—ಮೌನವಾಗಿ ನಿಂತಿದ್ದು ಬರುತ್ತಿದ್ದವಳು ಇಂದು ಯಾರಾದರೂ ತನ್ನನ್ನು ನೋಡಿದರೆ ಮಾತನಾಡುವುದಕ್ಕೆ ಇಷ್ಟವಿರುವವಳಂತೆ ನಗುತ್ತಾಳೆ. ಆದರೂ ಬಹು ದಿನದಿಂದ ಬಂದಿರುವ ‘ಗುಡುಂತನ’ ಇಷ್ಟು ಬೇಗ ತಪ್ಪಿಹೋದೀತೆ?

ತಾಯಿಯು ಮಗಳ ಮನೆಯಲ್ಲಿ ಇರುವ ವ್ಯವಸ್ಥೆಯನ್ನು ನೋಡಿ ದಳು. ಅವಳಿಗೆ ಆಶ್ಚರ್ಯವಾಯಿತು. ಅವಳ ಮನೆಯಲ್ಲಿ ಹಾಲಿನ

ಸುತ್ತಲೂ ನಾಲ್ಕು ಕೋಣೆಗಳು. ಹಿಂದೊಂದು ಮುಂದೊಂದು ವರಾಂಡಾಗಳು. ಅದರ ಅತ್ತಕಡೆ ಗ್ಯಾರೇಜ್, ಅಡುಗೆಯ ಮನೆ, ಬಚ್ಚಲ ಮನೆ. ಎರಡಕ್ಕೂ ನಡುವೆ ಅಂಗಳ. ಅವಳು ಕ್ರಿಶ್ಚಿಯನ್ ಆದರೂ ಅಲ್ಲೆಲ್ಲ ತುಳಸಿಯ ಗಿಡಗಳು. ಒಂದು ಭಾರಿಯ ಜಾಜಿಯ ಗಿಡ.

ಅವಳಿಗೆ ಆಶ್ಚರ್ಯವಾಯಿತು. ಮೈಸೂರಲ್ಲಿ ತಮ್ಮ ತಾಯಿಯ ಮನೆ ಇದ್ದುದೇ ಹಾಗೆ! ಅವಳೂ ತನ್ನ ಪ್ರಿಯರಿಗೆ ಒಬ್ಬೊಬ್ಬರಿಗೆ ಒಂದೊಂದು ಕೋಣೆ ಮೀಸಲು ಮಾಡಿದ್ದಳು. ಒಬ್ಬರ ಕೋಣೆಯೊಳಗೆ ಇನ್ನೊಬ್ಬರು ಅಪ್ಪಣೆಯಿಲ್ಲದೆ ಪ್ರವೇಶ ಮಾಡುವಂತಿಲ್ಲ. ಇಸ್ಪೀಟು ಪಗಡೆ ಚದುರಂಗ ಅವಳ ಮೆಚ್ಚಿನ ಆಟಗಳು. ಮಗಳೂ ಚದುರಂಗ ಚೆನ್ನಾಗಿ ಆಡುತ್ತಾಳೆ. ಅವಳ ಚದುರಂಗದ ಆಟದ ಚದುರೇ ಪಿಳ್ಳೇಗೌಡನಿಗೆ ಬಿದ್ದಿರುವ ಬಲೆ.

ಮೈಸೂರಲ್ಲಿಯೂ ಜಾಜಿ ಗಿಡ ಇತ್ತು. ಅದೂ ಅಂಗಳದಲ್ಲಿಯೇ! ಅಲ್ಲಿಯೂ ಹೀಗೆಯೇ ತುಳಸಿಯ ವನ. ಆ ಗಿಡಗಳಲ್ಲಿ ಒಂದು ತೆನೆ ತೆಗೆಯುವುದೂ ಕೂಡ ಅವರಮ್ಮನಿಗೆ ಸೈರಿಸದು. ಅದಪ್ಪೂ ಮಗಳಿಗೆ ಹೇಳಿದಳು. "ಯಾರಿಗೆ ಗೊತ್ತು ನಮ್ಮಮ್ಮನೇ ನನ್ನ ಹೊಟ್ಟೆಯಲ್ಲಿ ಹುಟ್ಟಿದಳೇನೋ? ಇವಳು ಹುಟ್ಟುವ ವೇಳೆಗೆ ಅವಳು ಹೋಗಿ ಐದು ವರ್ಷವಾಗಿತ್ತು." ಎಂದು ನಾಯರ್ ಬಳಿ ಹೇಳಿದಳು. ಆತನು, "ಹಾಂ, ಹಾಂ, ಹಾಗೆ ಆಗುವುದೂ ಉಂಟು." ಎಂದನು.

ತಾಯಿಯು ಬರುವ ವೇಳೆಗೆ ಎರಡು ಕೋಣೆಗಳು ಆಕೆಗೆ ಸಿದ್ಧವಾಗಿದ್ದುವು. ರಮೇಶನ ಕೋಣೆಯೊಂದು, ಜೊತೆಗೆ ಅದರ ಮಗ್ಗುಲಲ್ಲಿ ತಾನು ಒಬ್ಬಳೇ ಇದ್ದಾಗ ಮಲಗುತ್ತಿದ್ದ ಕೋಣೆಯೊಂದು, ಎರಡೂ ತಾಯಿಗೆ ಕೊಟ್ಟಳು. ಗೆರೇಜ್ ಮಗ್ಗುಲಲ್ಲಿದ್ದ ಸಣ್ಣ ಕೊಠಡಿಯಲ್ಲಿ, ಕುಟ್ಟಿಯಮ್ಮನು ನಿಂತಳು. ಈಗ ಅಡುಗೆ ಮನೆಯಲ್ಲಿ ಮೇರಿಯು ತಾಯಿ, ನಾಯರ್ ಜೊತೆಯಲ್ಲಿ ಕುಳಿತು ಊಟ ಮಾಡುತ್ತಾಳೆ. ಆ ಊಟದಲ್ಲಿ ಏನೋ ಸ್ವಾರಸ್ಯವಿದೆ. ಒಮ್ಮೊಮ್ಮೆ "ರಮೇಶ್

ಸತ್ತುಹೋಗಿ, ಕ್ರಿಸ್ತನನ್ನು ಕರೆತಂದ. ಕ್ರಿಸ್ತನು ಬಂದಮೇಲೆ ಈ ಮನೆಗೆ ತಾಯಿ ಬಂದಳು ಇಬ್ಬರೂ ಬಂದು ತನಗೆ ಅದುವರೆಗೆ ಇಲ್ಲದ ಸೌಖ್ಯವನ್ನು ತಂದರು" ಎನ್ನಿಸಿ, ಸುಖದುಃಖಮಯವಾದ ಆ ಭಾವದಲ್ಲಿ ಬಿಸಿಲು ಕಾಯುತ್ತಿರುವಾಗ ಬಂದ ಮಳೆಯಂತೆ ಏನೋ ಆಗಿ ಮೈಮರೆಯುತ್ತಾಳೆ. ಈಗ ಅವಳಿಗೆ ಯಾರು ಬಂದರೂ ಯಾರು ಬರದಿದ್ದರೂ ಚಿಂತೆಯಿಲ್ಲ; ಅವಳಿಗೆ ಆ ತಾಯಿಯ ಸಂಗವೊಂದಿದ್ದರೆ ಸಾಕು. ಅದನ್ನು ಕಾಪಾಡಿಕೊಳ್ಳಲು ಏನುಬೇಕಾದರೂ ಮಾಡಲು ಸಿದ್ಧ.

ಹೀಗೆ ಅಷ್ಟು ದಿನ ಕಳೆಯುವುದರೊಳಗಾಗಿ ಕನ್ಯಾಮಂದಿರದ ಆರಂಭೋತ್ಸವವು ಬಂತು. ಮೇರಿಗೆ, ಜಾನಮ್ಮನಿಗೆ, ನಾಯರ್‌ಗೆ, ಆಹ್ವಾನಗಳು ಬಂದಿವೆ ಮೋಹನಬಾಯಿಗೆ ಬದಲಾಗಿ ಸೀತಮ್ಮನು ನಿಂತು ಎಲ್ಲರನ್ನೂ ಬರಮಾಡಿಕೊಳ್ಳುತ್ತಿದ್ದಾಳೆ. ಮೇರಿಯು ಬಂದುದನ್ನು ಕಂಡು ಪ್ರಾಣೇಶನು ಓಡಿಬಂದು ಸ್ವಾಗತ ನೀಡಿ, "ಇವರೇ ಮೋಹನಬಾಯಿ, ರಮೇಶರ ಹೆಂಡತಿ. ಇವರು ಮನಸ್ಸು ಮಾಡಿದರಾಗಿ ಈ ಕನ್ಯಾಮಂದಿರ ಸ್ಥಾಪನೆಯಾಯಿತು." ಎಂದು ಪರಸ್ಪರ ಪರಿಚಯ ಮಾಡಿಕೊಟ್ಟನು. ಮೋಹನಬಾಯಿ ತಾಯಿಮಕ್ಕಳು ಇಬ್ಬರನ್ನೂ ತನ್ನ ಮಗ್ಗುಲಲ್ಲಿಯೇ ಕೂರಿಸಿಕೊಂಡಳು. ಮೇರಿಗೆ ವೀಣಾ ಕಂಡು ಆದ ಆನಂದ ಅಷ್ಟಿಷ್ಟಲ್ಲ; ರಮೇಶನೇ ಎದ್ದು ಬಂದಂತಿರುವ ಆ ಮಗುವನ್ನು ಕಂಡು ಅವಳಿಗೆ ಅದುವರೆಗೆ ಇಲ್ಲದ ಭಾವವೊಂದು ಹೊಸದಾಗಿ ಮೂಡಿತು. ತನಗೂ ಅಂತಹ ಒಂದು ಮಗು ಇದ್ದಿದ್ದರೆ! ಎನ್ನಿಸಿತು. "ಇನ್ನು ಬೇರೆ ಮಕ್ಕಳು ನನಗೆ ಬೇಡ. ಈ ಮಗುವೇ ನನ್ನ ಮಗು. ಬೇರೆಯವರ ಹೊಟ್ಟೆಯಲ್ಲಿ ಹುಟ್ಟಿದ್ದರೇನು? ಅದಕ್ಕೆ ನನ್ನ ಮೇಲೆ ಅಭಿಮಾನವಿಲ್ಲದಿದ್ದರೇನು? ಅದು ನನ್ನ ಅಭಿಮಾನವನ್ನು ತಿರಸ್ಕರಿಸದೆ ಇದ್ದರೆ ಸಾಕು" ಎಂದೂ ಎನ್ನಿಸಿತು.

ಇನ್ನಷ್ಟು ಹೊತ್ತಿನೊಳಗಾಗಿ ಕಾರ್ಯಕ್ರಮವು ಆರಂಭವಾಯಿತು. ಮಂತ್ರಿಗಳು ಬಂದಿದ್ದಾರೆ. ಈ ಉತ್ಸವಕ್ಕಾಗಿ ಹಾಕಿರುವ ವಿಶಾಲವಾದ

ಮಂಟಪದಲ್ಲಿ ಅತಿಥಿಗಳು ಬೇಕಾದಹಾಗೆ ತುಂಬಿದ್ದಾರೆ. ವೀಣಾ ಸ್ವಾಗತ ಪದ್ಯಗಳನ್ನು ಓದಿದಳು. ಎಲ್ಲರಿಗೂ ಆಶ್ಚರ್ಯವಾಯಿತು. ಎಲ್ಲರೂ ಯಾರು ಈ ಮಗು, ಯಾರು ಈ ಮಗು? ಎನ್ನುವರೇ! ಅವಳೇ ವೀಣಾ! ಅವಳದೇ ಈ ಕನ್ಯಾಮಂದಿರ ಎಂದು ತಿಳಿದಮೇಲಂತೂ ಅವರ ಆಶ್ಚರ್ಯಕ್ಕೆ ಮೇರೆಯೇ ಇಲ್ಲವಾಯಿತು. ಪ್ರೆಸಿಡೆಂಟ್ ಪ್ರಾಣೇಶ್‌ರು ಸ್ವಾಗತ ಭಾಷಣ ಮಾಡುತ್ತ, ಹೇಗೆ ವೀಣಾದೇವಿಯ ಮರುಕ ಈ ಕನ್ಯಾಮಂದಿರಕ್ಕೆ ಕಾರಣವಾಯಿತು ಎಂದು ವಿವರಿಸಿದಾಗ, ಆ ಮಗುವನ್ನು ಬಾಯಿತುಂಬಾ ಮನಸ್ಸು ತುಂಬಾ ಹರಸದವರೇ ಇರಲಿಲ್ಲ ಆ ಸಭೆಯಲ್ಲಿ.

ಆಮೇಲೆ ಜಾನಮ್ಮನ ಸಂಗೀತ. ಸಂಪ್ರದಾಯ ಶುದ್ಧವಾಗಿ ಚೌಕವರ್ಣದಿಂದ ಆರಂಭವಾಗಿ ಕೀರ್ತನೆ, ರಾಗ, ಪಲ್ಲವಿಗಳಾಗಿ ಪಲ್ಲವಿಸಿ ಜಾವಡಿ ದೇವರನಾಮಗಳೆಂಬ ಫಲಗಳನ್ನು ಬಿಟ್ಟ ಆ ಸಂಗೀತಕಚೇರಿಯು ಮೊದಮೊದಲು ಮಲ್ಲಿಗೆ ಪಾದರಿಹೂವಿನ ದಂಡೆಯಂತಿದ್ದು, ಜಾಜಿ ಪಚ್ಚೆತೆನೆಯ ದಂಡೆಯಾಗಿ, ಕೊನೆಗೆ ಗುಲಾಬಿ ಸಂಪಗೆಯ ಹಾರದಂತಾದ್ದನ್ನು ಕಂಡು ಸಭಿಕರು ತಲೆದೂಗಿದರು. ಜಾವಡಿಗಳನ್ನು ಕೇಳಿಯೂ ಅರಿಯದ ಎಷ್ಟೋ ಜನ, ಇದೆಷ್ಟು ಅಪರೂಪವಾಗಿದೆ ಈ ಭಾವವಿನ್ಯಾಸದೊಡನೆ ಸೇರಿರುವ ರಾಗರಸವೈಖರಿ! ಈಗಿನ ನಮ್ಮ ಮಾಡರ್ನ್ ಪೊಯಿಟ್ರಿ ಇದ್ದ ಹಾಗೆ ಇದೆಯಲ್ಲ ಎಂದು ಸಂತೋಷಪಟ್ಟರು. ಹಿಂದಿನ ರಸಿಕರು "ಈ ಜಾತಿ ಜಾವಡಿ ಹಾಡು ಕೇಳದೆ ಕಿವಿಗಳೆಲ್ಲ ನೀರ ಬಿದ್ದು ಹೋಗಿತ್ತಪ್ಪ! ಇದು ನಮ್ಮ ಶುದ್ಧ ಮೈಸೂರು ಸಂಪ್ರದಾಯ! ಶೇಷಣ್ಣನವರು ಹೋದಮೇಲೆ ಈ ಜಾತಿ ಸಂಗೀತವೇ ಕೇಳಿರಲಿಲ್ಲ" ಎಂದು ಕುಣಿದಾಡಿದರು. ಅಷ್ಟೇನು? ಜಾನಮ್ಮನ ಸಂಗೀತ ಕೇಳಿ ಸಂತೋಷಪಡದವರಿಲ್ಲ. ಅದರಲ್ಲೂ ಆಕೆ ಕ್ರಿಶ್ಚಿಯನ್ ಅಂದಮೇಲೆ ಇನ್ನೂ ಆಶ್ಚರ್ಯ!

ಪ್ರೊಫೆಸರ್ ಶತಾನಂದಂ ಅವರು ಅಡ್ರೆಸ್ ಓದಿದರು: "ಓದುವುದಕ್ಕೆ ಬನ್ನಿ ಅನ್ನುತ್ತೀರಿ. ಮಕ್ಕಳು ಬಂದರೆ ಅವರಿಗೆ ಕುಳಿತುಕೊಳ್ಳ

ವುದಕ್ಕೆ ಸ್ಥಳವಿಲ್ಲ; ಪಾಠ ಹೇಳುವ ಮೇಷ್ಟರಿಲ್ಲ. ಬರಿಬರಿದೆ ಅಂಕಿಗಳನ್ನು ತೋರಿಸಿ ಮೋಸ ಮಾಡುವ ಬದಲು, 'ಮಿಡಲ್ ಸ್ಕೂಲ್ ವರೆಗೆ ನಮ್ಮ ಹೊಣೆ; ಅಲ್ಲಿಂದಾಚೆಗೆ ಸಮಾಜ ಬೇಕಿದ್ದರೆ ಓದಿಸಲಿ; ಇಲ್ಲದಿದ್ದರೆ ಬಿಡಲಿ ಎಂದು ಧೈರ್ಯವಾಗಿ ಹೇಳಿಬಿಡಿ. ಇಲ್ಲದಿದ್ದರೆ ಸರ್ಕಾರ ಮುಂದೆ ವಿದ್ಯಾಭ್ಯಾಸವನ್ನು ಕೈಯಲ್ಲಿಟ್ಟುಕೊಳ್ಳುವುದು ಸಾಧ್ಯವಿಲ್ಲ. ಈಗ ಐ ಎ. ಎಸ್. ಮೊದಲಾದ ಸರ್ವಿಸ್‌ಗಳಿಗಿರುವಂತೆ, ತಾಲ್ಲೋಕು ಆಫೀಸ್ ಗುಮಾಸ್ತೆಯಿಂದ, ಪ್ರೈಮರಿ ಸ್ಕೂಲ್ ಟೀಚರ್ ವರೆಗೆ ನಿಮ್ಮ ಡಿಪಾರ್ಟ್‌ಮೆಂಟಲ್ ಪರೀಕ್ಷೆಗಳನ್ನು ಏರ್ಪಡಿಸಿಕೊಂಡು ಅಲ್ಲಿ ಪ್ಯಾಸಾದವರಿಗೆ ಆ ನೌಕರಿ ಕೊಡಿ. ಪ್ರೌಢ ವಿದ್ಯಾಭ್ಯಾಸ ಸರಕಾರದ ಕೈಯಲ್ಲಿರುವ ವರೆಗೂ ಫ್ಯಾಕ್ಟರಿ ಬೇಸಿಸ್ ತಪ್ಪುವುದೇ ಇಲ್ಲ. ಮಹಾಜನರೂ ಅಷ್ಟೆ! ಪ್ರತಿಯೊಂದಕ್ಕೂ ಸರಕಾರದ ಕಡೆ ನೋಡಿಕೊಂಡು ಕೂತಿದ್ದರೆ ಮಳೆ ನೋಡಿಕೊಂಡು ಮಾಡುವ ಬೇಸಾಯದಂತೆ ಇರುತ್ತದೆ. ಈಗ ಮನುಷ್ಯನು ಸ್ವತಂತ್ರನಾಗಿ ತನಗೆ ಬೇಕಾದ್ದು ಮಾಡಿಕೊಳ್ಳಬೇಕೆಂದಿರುವ ಈ ಕಾಲದಲ್ಲಿ ಇನ್ನೊಬ್ಬರ ಕೈಗಾಯುವ ನೀತಿಯೇಕೆ? ಸ್ವಾತಂತ್ರ್ಯ ಬಂದಿದೆಯೆಂದು ಸಂತೋಷಪಡುವ ಜನ ಆ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು ಸರ್ವಸ್ವವನ್ನೂ ತೆರಲೂ ಸಿದ್ಧರಾಗಿರಬೇಕು. ಇವೊತ್ತಿನ ದಿನದ ಲಾ, ಆರ್ಡರ್, ಶಾಂತಿ, ಸುಖಗಳನ್ನು ಕಾಪಾಡಿಕೊಳ್ಳಲು ಪೋಲೀಸಿನವರನ್ನು ಇಟ್ಟುಕೊಂಡಿರುವಂತೆ, ಮುಂದಿನ ದಿನಗಳಲ್ಲಿ ಲಾ, ಆರ್ಡರ್, ಶಾಂತಿ, ಸುಖಗಳನ್ನು ಕಾಪಾಡುವುದಕ್ಕೆ ಇಂದಿನ ಮಕ್ಕಳ ಬುದ್ಧಿಯನ್ನು ತಿದ್ದಬೇಕು. ನಮ್ಮ ಸರ್ವಸ್ವವನ್ನೂ ನಮ್ಮ ಮಕ್ಕಳಿಗೆ ಬಿಟ್ಟು ಹೋಗುವೆವು. ಇದನ್ನು ಯಾರು ಕಾಣರು? ಆದರೆ, ಅದನ್ನು ಅವರು ಸರಿಯಾಗಿ ಉಪಯೋಗಿಸಲು ಅವರಿಗೆ ಬೇಕಾದ ಬುದ್ಧಿಯನ್ನು ತಿದ್ದುವ ಕೆಲಸ ಮಾತ್ರ ಇತರರಿಗೆ ಬಿಡುವೆವು. ಇದು ತಪ್ಪು, ಮಕ್ಕಳನ್ನು ಹೆತ್ತ ತಾಯಿಯು ಅವರ ಬುದ್ಧಿಯನ್ನು ತಿದ್ದುವ ಕಾರ್ಯವನ್ನು ವಹಿಸಿಕೊಳ್ಳಲು ಸಿದ್ಧಳಾಗಬೇಕು. ಆಗ ಜನಾಂಗವು ಕಂಬಿಗಳ ಮೇಲೆ ಓಡುವ ಟ್ರೇಯಿನಂತೆ ಸುಖವಾಗಿ ನಡೆಯುವುದು.

ಸ್ವಾತಂತ್ರ್ಯ, ಸದ್ಬುದ್ಧಿ ಎರಡೂ ತಾಯಿಯಿಂದಲೇ ಕಲಿಯಬೇಕಾದ ಸದ್ಗುಣಗಳು. ಇಂತಹ ಸದ್ಗುಣಗಳನ್ನು ಕಲಿಸುವ ತಾಯಂದಿರನ್ನು ಸೃಷ್ಟಿಸುವ ಸದುದ್ದೇಶದಿಂದ ಈ ಕನ್ಯಾಮಂದಿರವನ್ನು ಸ್ಥಾಪಿಸಲಾಗಿದೆ. ನಾವು ಸರಕಾರದಿಂದ ಅಪೇಕ್ಷಿಸುವುದು ದ್ರವ್ಯಸಹಾಯವನ್ನಲ್ಲ; ನಮ್ಮ ಉದ್ದೇಶದ ಸಾಧನೆಗಾಗಿ ನಮ್ಮ ಮಾರ್ಗವನ್ನು ನಾವು ನಿರೂಪಿಸಿಕೊಂಡು ಹೋಗುವುದರಲ್ಲಿ ಅಡ್ಡಿ ಬರದೆ ಇರುವುದು ಎಂಬ ಸಹಾಯವನ್ನು" ಎಂದು ಮುಂತಾಗಿ ವಿಸ್ತಾರವಾಗಿ ಹೇಳಿದರು.

ಮಂತ್ರಿಗಳೂ ಯಥೋಚಿತವಾಗಿ ಉತ್ತರವಿತ್ತು ಭಲೆ ಪರವಾ ಇಲ್ಲ ಎನ್ನಿಸಿಕೊಂಡರು. ವೈಸ್ ಪ್ರೆಸಿಡೆಂಟ್ ಪಿಳ್ಳೇಗೌಡರು ವಂದನಾರ್ಪಣಕ್ಕೆ ಎದ್ದು ನಿಂತುಕೊಂಡರು. ವಂದನೆಗಳನ್ನು ಸಮರ್ಪಿಸಿ, ಕೊನೆಯ ಮಾತಾಗಿ ಹೇಳಿದರು: "ನೋಡಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಿದೆ. ಒಂದು ಹತ್ತು ಜನ ಕಟ್ಟಿಕೊಂಡು ಪಾಳೆಯಗಾರರಾದರೆ, ಅಂದರೆ ಪಾರ್ಲಿಮೆಂಟಿನಲ್ಲಿ ನಿಮ್ಮ ಕಡೆ ಓಟು ಮಾಡುವವರು ಹತ್ತು ಜನರಿದ್ದರೆ, ನಿಮ್ಮ ಹೆಸರು ಹೇಳಿ ಜೈ ಅನ್ನೋರು ಹತ್ತು ಜನರಿದ್ದರೆ, ನೀವೂ ಮಂತ್ರಿಗಳಾಗಬಹುದು. ಆದರೆ ಒಂದು ನೆನೆಪಿರಲಿ. ಮಂತ್ರಿಗಳಾಗುವುದಕ್ಕೆ ಮುಂಚೆಯೂ ಜನ ನಿಮ್ಮನ್ನು ಇಂಥ ಪಬ್ಲಿಕ್ ಫಂಕ್ಷನ್‌ಗಳಿಗೆ ಕರೆಯಬೇಕು; ನೀವು ರಿಟೈರ್ ಆದಮೇಲೂ ಕರೆಯುವಹಾಗಿರಬೇಕು. ಅಂಥಾ ಯೋಗ್ಯತೆ ಪಡೆದುಕೊಳ್ಳಿ. ಅದಿಲ್ಲದೆ, "ಮಂತ್ರಿಗಳಾಗಿದ್ದಾರೆ; ಕರೆಯದಿದ್ದರೆ ನಮಗೇನಾದರೂ ಚಿಕ್ಕರ್ ಬಿದ್ದೀತು" ಅನ್ನೋ ಲೋಭಕ್ಕೆ ಕರೆಯೋ ಹಾಗೆ ಮಾಡಿಕೋಬೇಡಿ. ಇವೊತ್ತು ಮಂತ್ರಿಗಳನ್ನ ನಾವೂ ಕರೆದಿದ್ದೇವೆ. ತಾವೆಲ್ಲ ಕಂಡಹಾಗೆ ಇವರಿಂದ ನಾವೇನೂ ಬಯಸಿಲ್ಲ. ಘುಸ್ ಅನ್ನದೆ ನಿನ್ನ ಪಾಡಿಗೆ ನೀನಿರು ನಾಗಪ್ಪ ಎಂದು ಪ್ರಾರ್ಥನೆ ಮಾಡೋಕೆ ಕರೆದಿದ್ದೇವೆ. ಅದರಿಂದಲೇ ಇವರು ಯೋಗ್ಯರು ಅನ್ನುವುದು ತಮಗೆ ಗೊತ್ತಿರಬೇಕು. ತನಗೇ ಗತಿಯಿಲ್ಲದ ದೇವರು ತಮ್ಮಡಿಗೆ ಏನು ವರ ಕೊಟ್ಟೀತು ಅಂದಹಾಗೆ, ತಾವೇ ನೇರವಾಗಿಲ್ಲದ ಮಂತ್ರಿಗಳು ಲೋಕಾನಾದರೂ ಏನು ನೇರವಾಗಿಟ್ಟಾರು! ಹಾಗಾಗದೆ ಇರಲಿ. ನಮ್ಮ ಈ ಮಂತ್ರಿಗಳ ಹಾಗೇ

ಇರುವ ಮಂತ್ರಿಗಳನ್ನ ಪಡೆಯೋ ಭಾಗ್ಯ ನಮ್ಮ ಸಮಾಜಕ್ಕೆ ಬರಲಿ. ಸಮಾಜದ ಯೋಗ್ಯತೆಗೆ ತಕ್ಕಂತಹ ಮಂತ್ರಿಗಳೇ ಬರುತ್ತಾರಂತೆ; ಅದರಿಂದ ಸಮಾಜದ ಯೋಗ್ಯತೆ ಬೆಳೆಯಲಿ. ಅಂತಹ ಯೋಗ್ಯತೆ ಬೆಳೆಸುವುದಕ್ಕೆ ನಮ್ಮ ಈ ಕನ್ಯಾಮಂದಿರ ಸಹಾಯ ಮಾಡಲಿ. ರಮೇಶ್ ದಂಪತಿಗಳು ಈ ಮಂದಿರಕ್ಕೆ ಒಂದು ಲಕ್ಷ ಕೊಟ್ಟಿದ್ದಾರೆ. ಈ ರಮೇಶ ದಂಪತಿಗಳನ್ನು ಕೊಂಡುಕೊಳ್ಳಬಲ್ಲ ಶ್ರೀಮಂತರು ನಮ್ಮ ನಗರದಲ್ಲಿ ನಮ್ಮ ದೇಶದಲ್ಲಿ ಸಾವಿರಾರು ಜನ ಇದ್ದಾರೆ. ಆದರೂ ಅವರಿಗೆ ದಾನದ ದೊಡ್ಡತನ ಗೊತ್ತಿಲ್ಲ. ತನ್ನ ಕಡೆಗೆ ಮಣ್ಣು ಎಳೆದುಕೊಳ್ಳೋದು ಹೆಗ್ಗಣಕ್ಕೂ ಗೊತ್ತಿದೆ. ಆದರೆ ತನ್ನ ಜೀವರಕ್ತವನ್ನು ಮಗುವಿಗೆ, ತನ್ನ ಮುಂದಿನ ಪೀಳಿಗೆಗೆ ಕೊಡುವುದು ತಾಯಿಗೆ ಮಾತ್ರ ಗೊತ್ತು. ಅಂಥ ತಾಯಿಯರನ್ನು ಈ ಕನ್ಯಾಮಂದಿರ ಹೆರಲಿ, ನಾನೂ ಅಷ್ಟು ಹಣ ಇಟ್ಟುಕೊಂಡಿರುವವನು. ಇತರರಿಗೆ ದಾನದ ದೊಡ್ಡತನ ಗೊತ್ತಿಲ್ಲ ಅಂದೆ. ನನಗೂ ಅಂತಹ ಅಪಕೀರ್ತಿ ಬರದಿರಲಿ ಅಂತ, ಇದೋ, ನಾನೂ ಈ ಕನ್ಯಾಮಂದಿರಕ್ಕೆ ಒಂದು ಲಕ್ಷವನ್ನು ಕೊಟ್ಟಿದ್ದೇನೆ. ಜೊತೆಗೆ ಈ ಕನ್ಯಾಮಂದಿರದ ಟ್ರಸ್ಟಿಗಳು ನನಗೆ ಒಂದು ಮಾತು ಹೇಳಬೇಕೆಂದು ಅಪ್ಪಣೆ ಮಾಡಿದ್ದಾರೆ; ಆ ಮಾತು ನಾನು ನನ್ನ ಪರವಾಗಿ ಹೇಳಿದರೆ, ಅದು ಜಂಭ ಅನ್ನಕೋಬಾರದು ತಾವು. ಯಾರಾದರೂ ನಮ್ಮ ಈ ಕೆಲಸ ನೋಡಿ ಸಂತೋಷಪಟ್ಟರೆ, ಅಂಥಾವರು ನಮಗೆ ಸಹಾಯ ಮಾಡೋಕೆ ಬರಬೇಕಿ. ನಮಗೆ ಮಾಡಬೇಕು ಅಂತ ಇರೋ ಸಹಾಯ ಉಪಯೋಗಿಸಿಕೊಂಡು ಇಂಥಾ ಕನ್ಯಾಮಂದಿರ ಇನ್ನೊಂದು ಕಟ್ಟಿ. ಒಂದು ಮರ ಇದ್ದರೆ ತೋಪಲ್ಲ; ಒಂದೇ ಜಾತಿ ಮರ ಇದ್ದರೆ ತೋಟವಲ್ಲ." ಎಂದು ಹೇಳಿ ಎಲ್ಲರಿಗೂ ವಂದನೆಗಳನ್ನು ಸಮರ್ಪಿಸಿದರು.

ಸಭೆಯು ಮುಗಿಯಿತು. ಎಲ್ಲರೂ ಹೊರಟರು. ಮಂತ್ರಿಗಳು ಪಿಳ್ಳೇಗೌಡರನ್ನು ಕರೆದು "ಏನು ಗೌಡರೆ, ನಮ್ಮನ್ನು ಸಾರಿಸುವ ಬಟ್ಟೆ ಮಾಡಿಬಿಟ್ಟಿರಲ್ಲ?" ಅಂದರು. ಗೌಡರು ಎಂದರು: "ಸ್ವಾಮಿ, ಆಗ ಮಾಡಲಿಲ್ಲ, ಈಗ ಮಾಡುತ್ತೇನೆ. ಓಟು ಕೇಳುವಾಗ ನಿಮಗೆ ಇರೊ

ವಿನಯ ಓಟು ಬಂದಮೇಲೆ ಎಲ್ಲಿ ಹೋಗ್ತದೆ? ನೀವು ಮಂತ್ರಿಗಳಾಗೋಕೆ ಮುಂಚೆ ನಿಮ್ಮನ್ನು ಯಾರಾದರೂ ಮೀಟಿಂಗಿಗೆ ಬನ್ನಿ ಅಂತ ಕರೀತಿದ್ದಿರಾ? ಅದು ಮರೆತು ನೀವು ಏನೋ ಆಕಾಶದಿಂದ ಬಿದ್ದೋರ ಹಾಗೆ ಆಡಿದರೆ ನ್ಯಾಯವಾ? ಇನ್ನು ಬೇರೇ ಮಾತು ಬೇಡಿ. ಇದಿಷ್ಟು ಹೇಳಿ. ನಿಮ್ಮನ್ನು ಆಗಲೂ ಅನ್ನಲಿಲ್ಲ; ಈಗಲೂ ಅನ್ನೊಲ್ಲ. ಆದರೆ ನಿಮ್ಮ ಜೊತೆಯೋರು ಇದ್ದಾರಲ್ಲ! ಆಹಾಹಾಹಾ, ಏನು ಹೇಳಲಿ. ಕೋಪ ಮಾಡಿಕೋಬೇಡಿ ದೇವರು, ಉದ್ದಿಗೂ ಹೆಸರಿಗೂ ವೆತ್ಯಾಸ ಗೊತ್ತಿಲ್ಲದ ಜನ ಅದು. ಬಿಡಿ. ತಮಗೆ ಕೋಪ ಬರಬಾರದು. ಬಂದಿದ್ದರೆ ಇಗೋ ಕೈಮುಗಿತೀನಿ, ಕ್ಷಮಿಸಿ."

ಮಂತ್ರಿಗಳಾದರೆ ತಾನೇ ಏನು? ಬೇಕು ಅಂದಾಗ ಮುಕ್ತ ಹಸ್ತನಾಗಿ ಸಹಾಯ ಮಾಡುವ ನೆಚ್ಚಿನ ಗೆಳೆಯನ ಮಾತಿಗೆ ಪ್ರತಿಯಾಡುವುದಕ್ಕುಂಟೆ? ಅದರಿಂದ ಸಮಾಧಾನ ಮಾಡುತ್ತ "ಇಷ್ಟು ರೇಗಿದ್ದಕ್ಕೆ ಏನು ಒಂದು ಲಕ್ಷ ಕೊಟ್ಟದ್ದು? ಹಾಗೇನಾದರೂ ಆಗಿದ್ದರೆ, ತಮಗೆ ದೇವರು ದಿನದಿನವೂ ರೇಗೋ ಭಾಗ್ಯ ಕೊಡಲಿ. ಅದು ನಮ್ಮ ದೇಶದ ಅದೃಷ್ಟವಾಗುತದೆ." ಎಂದರು.

ಗೌಡರು "ಸರಿ, ಸರಿ. ತಾವು ಹೇಳೋದು. ಹಿರಿಯರಬೆಲ್ಲ ಕೊಟ್ಟು ಜಂಗಮಯ್ಯನಾಗಿ ಬಾ ಅಂತಲೋ?" ಅಂತ ನಕ್ಕರು.

ಮಂತ್ರಿಗಳು "ನೀವು ಕೊಟ್ಟು ಜಂಗಮರಾದರೆ, ಎಲ್ಲರ ಹತ್ತಿರಲೂ ಕಕ್ಕಿಸುವ ಗುರುಗಳೂ ಆಗುತೀರಿ." ಅಂದರು.

ಎಲ್ಲರೂ ನಕ್ಕರು. ಎಲ್ಲರೂ ಒಬ್ಬರನ್ನೊಬ್ಬರು ಬೀಳ್ಕೊಟ್ಟರು.

ಗೌಡನು ನರಸಿಂಹಯ್ಯನನ್ನು ಕರೆದು "ಎಲ್ಲಪ್ಪಾ, ನಮ್ಮ ಮರಿಸ್ವಾಮಿಗಳು?" ಎಂದು ಶ್ರೀನಿವಾಸನನ್ನು ಕರೆಯಿಸಿಕೊಂಡನು. ಆತನು ಆ ಹುಡುಗನೊಡನೆ ಮಾತನಾಡುವುದನ್ನು ನೋಡಿದರೆ ಶ್ರೀಮಂತನ ಬಳಿ ನಿಂತು ಸಾಲಕೇಳಲು ಅನುಸಂಧಾನ ಮಾಡುವ ಬಡವನಂತಿತ್ತು. ಯೋಗಕ್ಷೇಮ ವಿಚಾರಿಸಿಕೊಂಡು, ಪರೀಕ್ಷೆಯಲ್ಲಿ ಪ್ಯಾಸಾದ್ದಕ್ಕೆ

ಸಂತೋಷ ಸೂಚಿಸಿ, ಒಂದು ನೂರು ರೂಪಾಯಿನ ನೋಟುಕೊಟ್ಟು "ತಾವು ಬಟ್ಟೆ ಹೊಲಸಿಕೋ ಬೇಕು ಬುದ್ಧಿ" ಎಂದು ಬಲವಂತ ಮಾಡಿದನು.

ಗದ್ದಲದಲ್ಲಿ ಪ್ರೊಫೆಸರ್ ಶತಾನಂದಂ ಹಿಂದೆ ಎಲ್ಲೋ ಇದ್ದರು. ಬಂದು ಗೌಡರನ್ನು ಕಂಡು "ವಿ. ಗೌಡರೇ, ಕನ್ಯಾಮಂದಿರ ಇಂದು ಭದ್ರವಾಗಿ ನಿಲ್ಲಲು ಅನುಕೂಲವಾಯಿತು. ಬಹುಶಃ ನಿಮ್ಮ ಹಾಗೇ ಇನ್ನೂ ಒಬ್ಬರು ಮುಂದೆ ಬರಬಹುದು." ಎಂದರು.

"ಯಾರು ?"

"ಯಾರೇನು ? ಅವರೇ! ಅವರೂ ತಮ್ಮ ಆಸ್ತಿಯನ್ನೆಲ್ಲ ಕನ್ಯಾಮಂದಿರಕ್ಕೆ ಕೊಡಬೇಕು ಅಂತ ಯೋಚಿಸಿದ್ದಾರೆ." ಎಂದು ಹೇಳುತ್ತ ಸೀತಮ್ಮನವರು ಬಂದರು. ಅವರ ಜೊತೆಯಲ್ಲಿ ಮೋಹನಬಾಯಿ, ವೀಣಾ ಇಬ್ಬರೂ ಬಂದರು.

ಗೌಡನಿಗೆ ವೀಣಾ ನೋಡಿ ಕಣ್ಣಲ್ಲಿ ನೀರು ಬಂತು. ಅದನ್ನು ತಡೆದುಕೊಂಡು "ಏನು, ವೀಣವ್ವ, ಬರತೀಯಾ ನಮ್ಮೂರಿಗೆ ?" ಎಂದು ಕೇಳಿದನು. ವೀಣೆಯು ಏನೋ ಬಹಳ ಭಾರ ವಹಿಸಿಕೊಂಡಿರುವಳಂತೆ "ಈ ಮಂದಿರ ಇವೊತ್ತು ಆರಂಭವಾಗಿದೆ ಇದನ್ನೆಲ್ಲ ಸರಿಪಡಿಸಿ, ಬರುತ್ತೇನೆ" ಎಂದಳು.

ಅಂದಿನ ಸಂಜೆ ಪ್ರೊಫೆಸರ್ ಶತಾನಂದಂ ಮನೆಯಲ್ಲಿ ಟ್ರಸ್ಟಿಗಳಿಗೂ ಇನ್ನು ಕೆಲವು ಸ್ನೇಹಿತರಿಗೂ ಒಂದು ಟೀ ಪಾರ್ಟಿ. ಅದಕ್ಕೆ ಮೇರಿ, ಜಾನಮ್ಮ, ಶಂಕರ ನಾಯರ್, ಬಂದಿದ್ದಾರೆ. ಎಲ್ಲರೂ ಜಾನಮ್ಮನನ್ನು ಹೊಗಳುವರೇ ? ಅವಳೂ ಮೈಸೂರಿನವಳು ; ಹೋಗಿ, ಮಲೆಯಾಳದಲ್ಲಿ ಇದ್ದಾಳು ಎಂದ ಮೇಲೆ ಎಲ್ಲರಿಗೂ ಏನೋ ಸಮಾಧಾನ.

ಅವರು ಇವರೂ ಮಾತನಾಡುತ್ತ ಆಡುತ್ತ ಮಾತು ಹೊರಳಿ, ಶಂಕರ ನಾಯರ್ ಮಾತನಾಡುವುದಕ್ಕೆ ಆರಂಭವಾಯಿತು. ಮಲೆಯಾಳ ಎಂದರೆ ಭೂತಗಳ ಬೀಡು; ವೈದ್ಯಶಿಖಾಮಣಿಗಳ ಮಾಂತ್ರಿಕರ ನಾಡು;

ಸೌಂದರ್ಯವತಿಯರ ಸೀಮೆಯೆಂದು ತಾನೇ ಹಲವರ ಅಭಿಪ್ರಾಯ
ಅದರಂತೆಯೇ ಅನೇಕರು ಮಲೆಯಾಳದಿಂದ ಬಂದ ನಾಯರ್‌ರನ್ನು ಕೇ
ತಮ್ಮ ಕುತೂಹಲವನ್ನು ತೃಪ್ತಿಪಡಿಸಿಕೊಳ್ಳಲು ಹವಣಿಸಿದರು.

ಮಾತು ಆರಂಭವಾಯಿತು.

"ಏನು ನಾಯರ್ರೇ, ನಿಮ್ಮಲ್ಲಿ ಅದ್ಭುತವಾದ ಚಿಕಿತ್ಸೆಗಳು ಇಂದಿಗ
ನಡೆಯುತ್ತಿ ಅನ್ನುತ್ತಾರಲ್ಲ ನಿಜವೆ?"

"ನಿಜ. ಸ್ವಾಮಿ!"

"ಹಾಗಾದರೆ ಆ ವೈದ್ಯರುಗಳು ಯಾಕೆ ಬಂದು ನಮ್ಮೂರಲ್ಲಿ
ಪ್ರಾಕ್ಟೀಸ್ ಆರಂಭಿಸಬಾರದು."

"ಮೊದಲನೆಯದು ಅವರಿಗಿರುವ ದೇಶಾಭಿಮಾನ. ಅವರು
ಸ್ವದೇಶವನ್ನು ಬಿಟ್ಟು ಯಾವ ಭಾಗ್ಯಕ್ಕೆ ಬರಬೇಕು? ಇಲ್ಲಿ ಬಂದ
ಲಕ್ಷಾಂತರ ಸಂಪಾದಿಸಿ ಆಗಬೇಕಾದುದೇನು? ಅಲ್ಲದೆ, ಆ ದೇಶದಲ್ಲಿ
ಒಗ್ಗಿದವರಿಗೆ ಆ ತೆಂಗು, ಆ ಬಾಳೆ, ಆ ಹಲಸು, ಆ ಅಡಕೆ, ಆ ವೀಳ್ಯ
ದೆಲೆ ತೋಟಗಳು ಬಿಟ್ಟು ಬರುವುದಕ್ಕೆ ಮನಸ್ಸಾಗುವುದಿಲ್ಲ. ಜೊತೆಗೆ
ನಮ್ಮ ಭರತಖಂಡದ ಜೀವ ಇನ್ನೂ ಇರುವುದು ಎಂದರೆ ನಮ್ಮ
ನಾಡಿನಲ್ಲಿ. ನಮ್ಮ ಜೀವಕ್ಕೆ ಬೇಕಾದ್ದು ಶಾಂತಿ, ತೃಪ್ತಿ. ಅಲ್ಲಿನ ಜನರಿಗೆ
ಹುಟ್ಟುತ್ತಲೇ ಅವೆರಡೂ ಬಂದಿರುತ್ತವೆ. ಆ ಪಶ್ಚಿಮ ಸಮುದ್ರದ ಗಾಳಿ
ಬೀಸುವಾಗ ಜನಕ್ಕೆ ಅದು ಶಾಂತಿ ತೃಪ್ತಿ ತಂದುಕೊಟ್ಟೋ ಕೊಟ್ಟೋ
ಆ ಬಡತನದಲ್ಲೂ ಸುಖವಾಗಿರುವುದು ಅವರಿಗೆ ಅಭ್ಯಾಸವಾಗಿಹೋಗಿದೆ.
ನಿಮ್ಮ ದೇಶದವರ ಹಾಗೆ ನಮಗೆ ಹೆಣ್ಣಾಗಲಿ, ಗಂಡಾಗಲಿ, ಒಬ್ಬೊಬ್ಬ
ರಿಗೆ ಒಂದೊಂದು ಜವಳಿ ಅಂಗಡಿ ಬೇಕಿಲ್ಲ. ಏನೋ ಆರು ಮೊಳ
ಉಡುವುದಕ್ಕೆ; ನಾಲ್ಕು ಮೊಳ ಹೊದಿಯುವುದಕ್ಕೆ ಆದರೆ ಸಾಕು.
ಹೀಗಿರುವಾಗ ಯಾತಕ್ಕೆ ನಮ್ಮವರು ಇಲ್ಲಿಗೆ ಬರಬೇಕು?"

"ಆಯಿತು, ನಿಮ್ಮ ಕೀರ್ತಿ ಬೆಳೆಯಬೇಡವೋ?"

"ಆ! ಕೀರ್ತಿಯೇ? ನಾವು ಗುಣ ಮಾಡಿದವರು ನಮ್ಮನ್ನು

ಹೊ ಗಳುವುದಿಲ್ಲವೋ ? ಜೊತೆಗೆ ಕೀರ್ತಿಗಿಂತ ಹೆಚ್ಚಾಗಿ ಇನ್ನೊಂದಿದೆ. ನಮ್ಮ ಸಾವಿರಾರು ರೂಪಾಯಿ ಸಂಬಳದ ಡಾಕ್ಟರುಗಳಿಗೆ ಸಾಧ್ಯವಾಗದ ರೋಗ ನಮ್ಮ ಒಂದೆರಡು ಮೂಲಿಕೆಗಳಿಂದ ಗುಣ ಮಾಡುತ್ತೇವಲ್ಲ; ಆಗ ನಮಗೆ ಆಗುವ ಸಂತೋಷಕ್ಕಿಂತ ನಿಮ್ಮ ಕೀರ್ತಿ ಹೆಚ್ಚೋ ?"

"ನೀವು ಅಂಥಾದ್ದು ಯಾವುದಾದರೂ ಗುಣ ಮಾಡಿದ್ದೀರಾ ?"

"ನಾವು ಗುಣ ಮಾಡಿದ್ದು ಏನೂ ಇಲ್ಲ. ಬಂದವರ ಅದೃಷ್ಟ ಇದ್ದರೆ, ನಾವು ಕೊಟ್ಟ ಮೂಲಿಕೆ ಅಮೃತವಾಗಿ ಕಾಪಾಡುತ್ತದೆ. ಅಲ್ಲನೆ, ನಾವು ವೈದ್ಯರು. ನಮಗೆ ರೋಗ ಗುಣ ಮಾಡುವುದು ಅಷ್ಟೇ ಕೆಲಸ. ಬದುಕಿಸುವುದು ನಮ್ಮಿಂದ ಸಾಧ್ಯವಿಲ್ಲ. ನವೈದ್ಯಃ ಪ್ರಭುರಾಯುಷಃ ಎಂದು ಶಾಸ್ತ್ರ."

"ಅಲ್ಲ, ಪಂಡಿತರೇ, ನಮ್ಮ ಪ್ರಶ್ನೆಗೆ ಉತ್ತರ ಕೊಡಲಿಲ್ಲವಲ್ಲಾ ?"

"ನೋಡಿ, ನಮ್ಮ ವೈದ್ಯರು ಯಾರೂ ನಾನು ಗುಣ ಮಾಡುತ್ತೇನೆ ಅಂತ ಹೇಳುವುದಿಲ್ಲ. ನಾವು ಹೇಳುವುದು ಈ ರೋಗಕ್ಕೆ ಮದ್ದು ನಮ್ಮಲ್ಲಿ ಇವೆ ಅಂತ. ರೋಗಕ್ಕೆ ಮದ್ದು ಖಾತ್ರಿಯಾದ್ದು ಕೊಡುತ್ತೇವೆ. ಫಲ, ಅಫಲ, ರೋಗಿಯ ಅದೃಷ್ಟ !"

"ಈಗ ಅಡ್ವರ್‌ಟೈಸ್‌ಮೆಂಟ್ ಯುಗ. ನೀವು ಓಬೀರಾಯನ ಕಾಲದ ಮಾತು ಆಡಿದರೆ ಹೇಗೆ ?"

"ಹಾಂ. ಹೌದು, ಅಡ್ವರ್‌ಟೈಸ್‌ಮೆಂಟ್ ಮಾಡುವರಿಗೆ ಬೇಕಾದ್ದು ಹಣವೋ ? ಗುಣವೋ ?"

"ಹಣ."

"ಆ ಹಣ ಸಂಪಾದಿಸುವುದಕ್ಕೆ ಈ ಸುಳ್ಳು ಹೇಳುವುದಕ್ಕಿಂತ ಬೇರೆ ದಾರಿಯಿಲ್ಲವೋ ?"

"ಹಾಗಾದರೆ, ನೀವೇನು ಮಾಡಬೇಕು ಅಂತಿದ್ದೀರಿ ?"

"ಸ್ವಾಮಿ, ಕೋಪ ಮಾಡಬಾರದು. ಗಂಗಾದೇವಿ, ಬನ್ನಿ, ನಿಮ್ಮ

ಹಾಪ ಕೀರ್ತಿನಿ ಅಂತ ಅಡ್ವರ್‌ಟೈಸ್‌ಮೆಂಟ್ ಹಾಕಿದ್ದಾರೋ? ವಿಶ್ವೇಶ್ವರ ಯಾವ ಪೇಪರಿನಲ್ಲಿ ಅಡ್ವರ್‌ಟೈಸ್ ಮಾಡಿದ್ದಾನೆ?"

"ಅವರು ಮಾಡದಿದ್ದರೂ ನಿಮ್ಮ ಪುರಾಣಗಳು, ಪುಣ್ಯಕಥೆಗಳು, ಭಕ್ತರ ಪವಾಡಗಳು, ಇವೆಲ್ಲ ಇವೆಯಲ್ಲ?"

"ಹಾಂ ಹಾಂ! ಅಲ್ಲಿ ನೀವು ತಪ್ಪಿದಿರಿ. ನೋಡಿ, ಅಡ್ವರ್‌ಟೈಸ್ ಮಾಡುವವ ತನ್ನ ಲಾಭಕ್ಕಾಗಿ ಆ ಕೆಲಸ ಮಾಡುತ್ತಾನೆ. ನಾವು ನಮ್ಮ ಪುರಾಣಗಳೆಲ್ಲ ವ್ಯಾಸರು ಬರೆದದ್ದು ಅನ್ನುತ್ತೇವೆ. ಈಗ ವ್ಯಾಸರು ಇದ್ದಾರೆ ಅಂತ ನಾವು ಅನ್ನುತ್ತೇವೆ; ಇಲ್ಲ ಅಂತ ನೀವು ಅನ್ನುತ್ತೀರಿ. ಹೀಗೆ ಗಂಗಾ, ವಿಶ್ವೇಶ್ವರ, ಕಾಶಿ, ಅಡ್ವರ್‌ಟೈಸ್ ಮಾಡಿದರೆ ವ್ಯಾಸರಿಗೆ ಏನು ಲಾಭ?"

"ಹಾಗಲ್ಲ ಪಂಡಿತರೆ, ಯಾರೋ ಬೇಕಾಗಿ ಇವೆಲ್ಲ ಬರೆದರು. ಅದಕ್ಕೆ ವ್ಯಾಸರ ಹೆಸರು ಇಟ್ಟರು."

"ಅಂದರೆ ಮೋಸಮಾಡಿದರು?"

"ಹೌದು."

"ಹಾಗೆ ಮೋಸಮಾಡಿ ಅವರಿಗೆ ಏನು ಲಾಭವಾಯಿತು?"

"ನಿಮಗೆ ಗೊತ್ತಿಲ್ಲ. ಅದೆಲ್ಲ ಒಂದು ಟ್ರಿಕ್. ಒಂದು ಗುಂಪಿಗೆ ಗುಂಪೇ ಆ ಕೆಲಸ ಮಾಡಿ ಮಿಕ್ಕವರಿಗೆಲ್ಲಾ ಟೋಪೀ ಹಾಕಿದೆ."

"ಈಗಲೂ ಅಂಥಾ ಕೆಲಸ ಸಾಧ್ಯ ಅನ್ನುತ್ತೀರಾ? ಅಲ್ಲದೆ, ಮೋಸ ಹೋದವರು ಸುಮ್ಮನಿದ್ದಾರೆ? ಮೇಲೆ ಬೀಳದೆ ಅಷ್ಟು ದಿನ ಇದ್ದಾರು? ಈ ಸಾವಿರಾರು ವರ್ಷ ಸುಮ್ಮನಿದ್ದು, ಇಂಗ್ಲಿಷರು ಬಂದ ಮೇಲೆ, ಅವರು ಹೊರಟು ಹೋಗುವವರೆಗೂ ಕಾದಿದ್ದು, ಈಗ ತಿರುಗಿ ಬಿದ್ದಿದ್ದಾರೆ ಅನ್ನೋಣವೋ?"

"ಹಾಗಾದರೆ, ನೀವೇನು ಅಂತೀರಿ?"

"ನಾವು ಏನೂ ಹೇಳುವುದಿಲ್ಲ. ನೀವು ಅವಿಭಕ್ತ ಕುಟುಂಬ

ನೋಡಿದ್ದೀರೋ ? ಒಂದು ಮನೆಯಲ್ಲಿ ಅಣ್ಣತಮ್ಮಂದಿರೆಲ್ಲ ಒಟ್ಟಿಗೆ ಇರಬೇಕಾದರೆ ಕಷ್ಟವೋ? ಬಿಟ್ಟು ಬೇರೆಬೇರೆಯಿರುವುದು ಕಷ್ಟವೋ."

"ಒಟ್ಟಿಗಿರುವುದು ಕಷ್ಟ."

"ಹಾಂ, ಹಾಗೇ, ಈಗ ಜನ ಒಟ್ಟಿಗಿರಲಾರರು. ಮನಸ್ಸು ದುರ್ಬಲವಾಗಿದೆ. ಅದರಿಂದ ಬೇರೆಬೇರೆ ಆಗುತ್ತಿದೆ. ಮನಸ್ಸು ಬಲವಾದರೆ ಮತ್ತೆ ಒಟ್ಟು ಸೇರುತ್ತಾರೆ."

"ಹಾಗೆ ಒಟ್ಟಾಗುವುದು ಯಾವಾಗ?"

"ಈಗ ನಮ್ಮ ಕೈಗೆ ಸಿಕ್ಕಿದಿರಿ. ನೋಡಿ, ಒಬ್ಬರೊಬ್ಬರ ರೋಗ ಗುಣಮಾಡುತ್ತೀರಾ? ಇನ್ನೊಬ್ಬರಿಂದ ಗುಣವಾಗದ ರೋಗ ಗುಣ ಮಾಡುತ್ತೀರಾ? ಗುಣ ಮಾಡಿದ್ದೀರಾ? ಎಂದು ಕೇಳಿದಿರಿ. ಈಗ ನೀವೆಲ್ಲಾ ಒಂದು ಸಮಾಜದ, ಒಂದು ದೇಶದ ರೋಗ ಗುಣವಾಗುವುದು ಯಾವಾಗ ಅಂತ ಕೇಳುತ್ತಿದ್ದೀರಿ ? ನಮ್ಮಲ್ಲಿ ನಂಬಿಕೆಯಿಟ್ಟು ಕೇಳುತ್ತಿದ್ದೀರಾ? ನಮ್ಮಲ್ಲಿ ನಂಬಿಕೆಯಿಡದೆ ಕೇಳುತ್ತಿದ್ದೀರಾ? ನಂಬಿಕೆಯಿಟ್ಟು ಕೇಳುತ್ತೀವಿ ಅಂದರೆ, ಹೇಳಬೇಕಾದ್ದು ನಮ್ಮ ಧರ್ಮ. ಹಾಗಿಲ್ಲ, ಏನೋ ಹೊತ್ತು ಹೋಗಲಿ ಅಂತ ಕೇಳಿದ್ದರೆ, ಮಾತನಾಡಿ ಆಯಾಸ ಪಡಬೇಕಾಗಿಲ್ಲ. ಏನು ಹೇಳುತ್ತೀರಿ?" "ಎಲೆಲಾ, ಚೆನ್ನಾಗಿ ಸಿಕ್ಕಿ ಹಾಕಿದರಲ್ಲ? ನಿಮ್ಮಲ್ಲಿ ನಂಬಿಕೆಯಿಟ್ಟು ಕೇಳುತ್ತೀವಿ. ಹೇಳಿ."

"ನೋಡಿ. ದೇಹಕ್ಕೆ ಬಲ ಪ್ರಾಣದಿಂದ. ಪ್ರಾಣ ಇದ್ದರೆ ಬದುಕಿರುವುದು. ಹೋದರೆ ಗೊತ್ತೇ ಇದೆ. ಪ್ರಾಣದ ಬಲದಿಂದ ದೇಹದ ಬಲ ಹೇಗೋ ಹಾಗೇ ಮನಸ್ಸಿನ ಬಲ. ಮನೋಬಲ ಇದ್ದರೆ ಬೇಕಾದ್ದರಲ್ಲಿ ಸಿದ್ಧಿ. ಅದರಿಂದ ಆಯುರ್ವೇದ ಹೇಳುತ್ತದೆ, ರೋಗಿಯ ಪ್ರಾಣಕ್ಕೆ ಚಿಕಿತ್ಸೆ ಮಾಡು ಅಂತ. ಹಾಗೆ ದೇಶಕ್ಕೆ ರೋಗ ಬಂದಿದ್ದರೆ ಅದಕ್ಕೂ ಇರುವ ಪ್ರಾಣಕ್ಕೇ ಚಿಕಿತ್ಸೆ ಮಾಡಬೇಕು. ದೇಶಕ್ಕೆ ರೋಗ ಬರುವುದು ಎಂದರೆ, ಆ ದೇಶದಲ್ಲಿ ಇರುವವರ ಮನಸ್ಸು ಸೋತಿರುವುದು. ಮನಸ್ಸು ಸೋತಿರುವುದು ಎಂದರೆ ತಮ್ಮಲ್ಲಿ ತಮಗೆ ನಂಬಿಕೆಯಿಲ್ಲದಿರುವುದು.

ನಮ್ಮಲ್ಲಿ ನಂಬಿಕೆಯಿಲ್ಲದಿರುವುದರ ಗುರುತು ಇನ್ನೊಬ್ಬರಲ್ಲಿ ನಂಬಿಕೆಯಿಲ್ಲದಿರುವುದು. ನಮ್ಮ ಗಾದೆಯಿಲ್ಲವೆ, ತಾ ಕಳ್ಳ ಇತರರನ್ನ ನಂಬ ಅಂತ. ಹಾಗೇ!"

"ಹಾಗಾದರೆ, ಇದಕ್ಕೆ ಏನು ಮಾಡಬೇಕು?"

"ನೀವು ಆಡಿದ್ದು ಹೇಗಾಯಿತು ಗೊತ್ತೇ? ಯಾರೋ ಒಬ್ಬ ಅಶ್ವತ್ಥ ಪ್ರದಕ್ಷಿಣೆ ಮಾಡಿದರೆ ಮಕ್ಕಳಾಗುತ್ತೆ ಅಂದರಂತೆ. ಅದನ್ನು ಕೇಳಿದವಳು ಒಬ್ಬಳು ತನಗೆ ಮಕ್ಕಳಾಗಲಿ ಎಂದು ಮರು ದಿವಸ ಅಶ್ವತ್ಥ ಪ್ರದಕ್ಷಿಣ ಮಾಡುವುದಕ್ಕೆ ಆರಂಭಿಸಿದಳು. ಒಂದು ಪ್ರದಕ್ಷಿಣವಾಗುತ್ತಲೂ ಹೊಟ್ಟೆ ಮುಟ್ಟಿ ನೋಡಿಕೊಂಡಳಂತೆ? ಹಾಗಾಯಿತು ನೀವು ಕೇಳಿದ್ದು. ನಾಡಿ ಹಿಡಿದು, ಅದರ ಗತಿ ನೋಡಿ, ಹೀಗಿರಬೇಕು ಅನ್ನುತ್ತಿರುವ ಹಾಗೆಯೇ ಔಷಧವೇನು ಎಂದು ಕೇಳುವುದೇ? ನಾವು ಹೇಳಿದ್ದು ನಿಮ್ಮ ಅನುಭವಕ್ಕೆ ಬಂದು ಹೌದು ಎನ್ನಿಸಬೇಕು. ರೋಗಿಗೆ ಮೊದಲು ವೈದ್ಯನಲ್ಲಿ ನಂಬಿಕೆ ಹುಟ್ಟಬೇಕು. ಅದು ಇಬ್ಬರಿಗೂ ಗಂಟು ಕಟ್ಟುವ ಸೂತ್ರ. "ವ್ಯತಿಷಜತಿ ಪದಾರ್ಥಾನ್ ಆಂತರಃ ಕೋಪಿ ಹೇತುಃ" ಇಬ್ಬರಿಗೂ ಋಣಾನು ಬಂಧ ಇರಬೇಕು. ಮದ್ದಲೆ ತಂಬೂರಿ ಎರಡೂ ಏಕಶ್ರುತಿಯಾದ ಮೇಲೆ ಸಂಗೀತ! ಹಾಗೆ ರೋಗಿ ವೈದ್ಯ ಇಬ್ಬರಿಗೂ ಹೃದಯ ಒಂದಾಗಿ ಮನಸ್ಸು ಒಗ್ಗಿದಮೇಲೆ ಔಷಧ. ಔಷಧ ಎಂದರೇನು ಬಲ್ಲಿರಾ? ಸಿದ್ಧನಾಗಿರುವ ವೈದ್ಯ ರೋಗಿಯನ್ನು ನೋಡಿದರೆ, ರೋಗಿಯನ್ನು ಮುಟ್ಟಿದರೆ, ಕಾಲುಪಾಲು, ಒಂದು ಪಾದ, ರೋಗ ಗುಣವಾಗಬೇಕು. ಹಾಗಂದರೇನು ಗೊತ್ತೆ? ವೈದ್ಯನ ಪ್ರಾಣ ರೋಗಿಯ ದೇಹಕ್ಕೆ ದರ್ಶನ ಸ್ಪರ್ಶನಗಳಿಂದಲೇ ವ್ಯಾಪಿಸಬೇಕು. ಆಗ ರೋಗ ಗತಿ ನಿರೋಧವಾಗಿ ಆರೋಗ್ಯ ಗತಿ ಹುಟ್ಟುವುದು. ಅನಂತರ ಔಷಧ. ಔಷಧ ಎಂದರೇನು? ಮಂತ್ರ ಜಪ ಮಾಡುತ್ತ ವೈದ್ಯನು ಮೂಲಿಕಾ ಗ್ರಹಣ ಮಾಡಿ ಅದರಲ್ಲಿರುವ ದೋಷವನ್ನು ಕಳೆದು ಗುಣವನ್ನು ವರ್ಧಿಸಿ ಅದನ್ನು ಪ್ರಾಣಮಯಕೋಶವನ್ನಾಗಿ ಮಾಡಿರುವನು. ಆ ಪ್ರಾಣದ ಗುಳಿಗೆ ಔಷಧ. ಅದು ಕಾಲುಪಾಲು ರೋಗವನ್ನು

ಹರಣ ಮಾಡುವುದು. ಪಥ್ಯವು ಇನ್ನೊಂದು ಪಾದವನ್ನೂ ಉಪಚಾರವು ಇನ್ನೊಂದು ಪಾದವನ್ನೂ ಕೊಲ್ಲುವುದು. ಇದು ಗುಣ ಮಾಡುವುದು ಎಂದರೆ ಈಗ ಇಂತಹ ಔಷಧ ನಮ್ಮ ದೇಶಕ್ಕೆ ಬೇಕಾಗಿದೆ. ದೇಶದ ಪ್ರಾಣಕ್ಕೆ ಗ್ರಹಣ ಹಿಡಿದಿದೆ. ಅದನ್ನು ಬಿಡಿಸುವ ವೈದ್ಯ, ಔಷಧ, ಪಥ್ಯ, ಉಪಚಾರ, ನಾಲ್ಕೂ ಬೇಕಾಗಿದೆ. ಇವೊತ್ತು ಇಲ್ಲಿಗೆ ಬಿಡುವ. ಇನ್ನೊಂದು ದಿವಸ ಆಗಲಿ. ಎಲ್ಲರೂ ಹೊರಡುತ್ತಿದ್ದಾರೆ."

ನಾಯರ್ ಮಾತು ಕೇಳಿದವರಿಗೆ ಬಹು ಸಂತೋಷವಾಯಿತು. ಆ ಗುಂಪಿಗೆ ಗುಂಪೇ ಪ್ರೊಫೆಸರ್ ಬಳಿ ಬಂದು ನಾಯರದು ಆಯುರ್ವೇದದ ಮೇಲೆ ಒಂದು ಲೆಕ್ಚರ್ ಇಡಿಸಬೇಕು ಎಂದು ಪ್ರಾರ್ಥಿಸಿದರು.

"ಹೌದು. ನನಗೂ ಹಾಗೆಯೇ ಎನ್ನಿಸಿತು. ನಾನೂ ನಡುನಡುವೆ ಅತ್ತ ಕಡೆ ಬಂದಾಗಲೆಲ್ಲ ಅವರ ಮಾತು ಅಷ್ಟಷ್ಟು ಕೇಳಿದೆ. ಸಂತೋಷವಾಯಿತು. ಆ ಲೆಕ್ಚರ್ ಕೆಲಸ ಪ್ರಾಣೇಶ್ ಮಾಡಬೇಕು. ಅವರಿಗೆ ಹೇಳೋಣ."

ಪ್ರಾಣೇಶ್ ಬಂದನು. ಅವನಿಗೂ ಆ ಸೂಚನೆ ಒಪ್ಪಿತು. ಆದರೆ ಅವನಿಗೆ ಅದನ್ನು ಕೂಡಲೇ ಒಪ್ಪುವುದಕ್ಕೆ ಇನ್ನೂ ಒಂದು ಕಾರಣವಿತ್ತು. ಅವನು ಒಪ್ಪುತ್ತಿದ್ದ ಹಾಗೆಯೇ ಮೋಹನಬಾಯಿ ಅಲ್ಲಿಗೆ ಬಂದಳು. "ಅನೇಕರು ಜಾನಮ್ಮನವರ ಸಂಗೀತ ಕೇಳಬೇಕು ಅಂತಿದ್ದಾರೆ. ಒಂದು ದಿನ ಕಚೇರಿ ಇಡಿಸಬೇಕು ಎಂದು ಹೇಳುತ್ತಿದ್ದಾರೆ" ಎಂದು ಸೂಚನೆ ಬಂತು. ಪ್ರಾಣೇಶನು ಅದಕ್ಕೂ ಒಪ್ಪಿದನು.

ಆದರೂ ತನ್ನ ಒಪ್ಪಿಗೆಗೆ ಒಂದು ಬಣ್ಣ ಏರಲಿ ಎಂದು ಅಲ್ಲಿಯೇ ಇದ್ದ ಸೀತಮ್ಮ, ಪಿಳ್ಳೇಗೌಡ ಇಬ್ಬರನ್ನೂ ಕೇಳಿದನು. ಇಬ್ಬರೂ ಸಂತೋಷದಿಂದ ಒಪ್ಪಿದರು. ಅಲ್ಲಿಯೇ ಅದೇ ಸ್ಥಳದಲ್ಲಿ ಜಾನಮ್ಮನವರ ಸಂಗೀತ, ನಾಯರ್‌ರವರ ಆಯುರ್ವೇದದ ಮೇಲೆ ಭಾಷಣ ಎರಡೂ ಏರ್ಪಾಡಾಯಿತು. ಎರಡೂ ಬೇರೆ ಬೇರೆಯಾಗಬೇಕೆಂದು ಇನ್ನೊಂದು

ಸಲಹೆ ಬಂತು. ಅದರಂತೆ ಮೊದಲನೆಯ ದಿನ ಸಂಗೀತ, ಎರಡನೆಯ ದಿನ ಭಾಷಣ ಎಂದೂ ಗೊತ್ತಾಯಿತು.

ಅಂದಿನ ರಾತ್ರಿ ಮೇರಿಯ ಮನೆಯಲ್ಲಿ ಕನ್ಯಾಮಂದಿರದ ಮಾತೇ ಮಾತು. ಎಲ್ಲದಕ್ಕಿಂತ ಹೆಚ್ಚಾಗಿ ಪಿಳ್ಳೇಗೌಡನ ಧಾರಾಳದ ಮಾತು. "ಒಂದು ಲಕ್ಷ ರೂಪಾಯಿ ಎಂದರೆ ಸಾಮಾನ್ಯವೇ? ಅದೂ, ತಾನಾಗಿ ಇನ್ನೊಬ್ಬರ ಪ್ರೇರಣೆಯಿಲ್ಲದೆ ಮತ್ತೊಬ್ಬರು ಮಾಡಿರುವ ದಾನಕ್ಕೆ ಕೊಟ್ಟಿರುವುದೆಂದರೆ ಅದು ಸುಮ್ಮನಲ್ಲ" ಎಂದು ಜಾನಮ್ಮ-ನಾಯಿರ್ ಇಬ್ಬರೂ ಆ ಮಲೆಯಾಳದಲ್ಲಿ ಮಾತನಾಡಿಕೊಳ್ಳುತ್ತಾರೆ. ನಡುನಡುವೆ ಎದುರಿಗಿರುವ ಮೇರಿಗೂ ಅರ್ಥವಾಗಲೆಂದು ಕನ್ನಡದಲ್ಲಿ ಮಾತನಾಡುತ್ತಾರೆ.

ರಾತ್ರಿ ಊಟವಾಯಿತು. ಸುಮಾರು ಒಂಬತ್ತೂವರೆ ಗಂಟೆ. ಮೇರಿಯು ತಂದೆತಾಯಿಗಳ ಮಾತು ಕೇಳಿ ಪ್ರೇರಣೆ ಇಲ್ಲದ ಧರ್ಮದ ಹಿಂದಿರುವ ಕಾಣದ ಕೈ ವಿಚಾರವನ್ನು ನೆನೆದು ಮುಸಿಮುಸಿ ನಗುತ್ತ ಕುಳಿತಿದ್ದಾಳೆ. ಕುಟ್ಟಿಯಮ್ಮ ಬಂದು ಕಾಣಿಸಿಕೊಂಡಳು.

ಮೇರಿಯು ಪಿಳ್ಳೇಗೌಡನ ಯೋಚನೆಯಲ್ಲಿದ್ದಳು. ಬಂದು ಎದುರಿಗೆ ನಿಂತಮೇಲೆ ಮಾತನಾಡಿಸದಿರುವುದು ಎಂತು? "ಏನಮ್ಮಾ?" ಎಂದು ಕೇಳಿದಳು.

"ತಮ್ಮೊಡನೆ ಒಂದು ಮಾತನಾಡಬೇಕಾಗಿದೆ."

"ಆಡು."

"ಯಜಮಾನರು ಹೇಳುತ್ತಿರುವುದು ಕಾಫಿತೋಟದ ಪಿಳ್ಳೇಗೌಡರನ್ನು ಏನು?"

"ಹೌದು. ಅವರು ನಿನಗೆ ಗೊತ್ತೇನು?"

"ಹೌದು, ಗೊತ್ತು."

"ಅದು ಹೇಗೆ?"

"ನಾನೂ ಅವರ ತೋಟದಲ್ಲಿ ಕೆಲವು ದಿನ ಇದ್ದೆ."

"ಏನಾಗಿ?" ಏಕೋ ಮೇರಿಗೆ ಎದೆ ನಡುಗಿತು ಉತ್ತರ ಬರುವುದರೊಳಗೆ ಅವಸರ.

"ಅವರ ಆಳು ಒಬ್ಬನ ಜೊತೆಯಲ್ಲಿ.''

ಮೇರಿಗೆ ಏನೋ ಸಮಾಧಾನವಾಯಿತು. ''ಈಗ ಅವರನ್ನು ಏಕೆ ಕೇಳಿದೆ?"

"ನಾನು ಅವರೊಡನೆ ಮಾತನಾಡಬೇಕು."

"ಅದಕ್ಕೆ ನಾನೇನು ಮಾಡಬೇಕು?"

"ನೀವು ಅಪ್ಪಣೆ ಕೊಡಬೇಕು."

"ನೀನು ಇದುವರೆಗೆ ಮಾತನಾಡಿಲ್ಲವೇನು?"

"ತೋಟದಲ್ಲಿ ಅವರ ಎದುರಿಗೆ ನಿಂತು ಮಾತನಾಡುವ ಧೈರ್ಯ ಭೂತಗಳಿಗೂ ಇಲ್ಲ."

ಮೇರಿಗೆ ಏನೋ ಸಮಾಧಾನ. ಇದ್ದುದರಲ್ಲಿಯೇ ಒಂದು ಸಂತೋಷ. ಯಾರಿಗೂ ಇಲ್ಲದ ಏನೋ ಒಂದು ಕೊಂಬು ತನಗೆ ಇದೆ ಎಂದು ಒಂದು ಹೆಮ್ಮೆ.

''ಇಲ್ಲಿ ಅವರು ಇನ್ನೊಬ್ಬರೊಡನೆ ಮಾತನಾಡುವುದಿಲ್ಲ."

''ನಾನು ಅವರೊಡನೆ ಮಾತನಾಡುವುದು ಅವರಿಗೇ ಒಳ್ಳೆಯದು."

''ಸಮಾಚಾರ ಏನು ನನಗೆ ತಿಳಿಸು ಮೊದಲು."

''ನೀವೂ ಎದುರಿಗೇ ಇರಬಹುದು."

ಮೇರಿಯು ಒಂದು ಗಳಿಗೆ ಯೋಚಿಸಿ, ಅದೇನು ತೋರಿತೋ ಏನೋ? "ಆಗಲಿ, ಅವರು ಬರುತ್ತಲೂ ಹೇಳುತ್ತೇನೆ" ಎಂದಳು. ಕುಟ್ಟಿಯು ಒಳಕ್ಕೆ ಹೋದಳು.

ಇನ್ನಷ್ಟು ಹೊತ್ತಿನಲ್ಲಿ ಗೌಡ, ಪ್ರಾಣೇಶ್ ಇಬ್ಬರೂ ಬಂದರು.

"ಇದೇನು? ಇಬ್ಬರೂ ಬಂದಿರಿ ಗೆಣೆಯರು? ನೀವಿಬ್ಬರೂ ಬರುತ್ತೀರಿ ಅನ್ನುವ ಹಾಗಿದ್ದರೆ ನೋ ವೇಕೆನ್ಸಿ ಬೋರ್ಡ್ ಹಾಕುತ್ತಿದ್ದೆ" ಎಂದಳು.

ಗೌಡನು ಹೇಳಿದನು: "ಇದಕ್ಕೇ ಮುಕ್ಕನ ಬುದ್ಧಿ ಹೆಣ್ಣು ಬುದ್ಧಿ ಅನ್ನೋದು. ಒಬ್ಬರು ಬಂದಿರೋದು ನಿನಗಾಗಿ; ಇನ್ನೊಬ್ಬರು ನಿಮ್ಮ ಅಮ್ಮನಿಗಾಗಿ. ಸರಿಯಾ?"

"ಬಾ. ನಿನಗೆ ಕಾದಿದೆ ಹಿಂದಿನದೊಂದು ಪ್ರಾರಬ್ಧ."

"ಹಾಗೆಂದರೆ?"

"ಕರಿಅನ್ನು ಕರೀತೀನಿ."

ಗೌಡನಿಗೆ ಎದೆ ಝಲ್ಲೆಂದಿತು. ಪ್ರಾಣೇಶನ ಪ್ರಾರಬ್ಧ ಸ್ವಾಮಿಗಳು ಎಲ್ಲವೂ ಒಂದೇ ಕ್ಷಣದಲ್ಲಿ ಮನೋಭಿತ್ತಿಯಲ್ಲಿ ಹಾದುಹೋಯಿತು. ಅವನಿಗೆ ಕರೀ ಎನ್ನುವುದಕ್ಕೆ ದೊಡ್ಡ ಉಸಿರೇ ಉಳಿದಿರಲಿಲ್ಲ.

ಪ್ರಾಣೇಶನು "ನಿಮ್ಮ ಅಮ್ಮ ಎಲ್ಲಿ?" ಎಂದು ಕೇಳಿದನು.

ಮೇರಿಗೆ ಇದೇನಿದು ಈ ಪ್ರಾರಬ್ಧ ಅಮ್ಮನನ್ನು ಕೇಳುತ್ತಾನೆ ಎಂದೆನ್ನಿಸಿತು. ಆದರೂ ಗುಟ್ಟುಬಿಡದೆ ಅದೋ ಅಲ್ಲಿ ನನ್ನ ರೂಂನಲ್ಲಿ ಇದ್ದಾಳೆ ಎಂದಳು.

ಆ ವೇಳೆಗೆ ಗೌಡನಿಗೆ ಉಸಿರು ಮಗುಚಿತ್ತು. ಮೇರಿಯು "ಕುಟ್ಟಿಯಮ್ಮಾ!" ಎಂದಳು. ಕುಟ್ಟಿಯು ಬಂದಳು. ಅಷ್ಟರೊಳಗಾಗಿ ಗೌಡನು ಕಿರುಮನೆಯೊಳಕ್ಕೆ ಹೋಗಿದ್ದನು.

ಕುಟ್ಟಿಯು ಬಂದು ಬಾಗಿಲಲ್ಲಿ ನಿಂತುಕೊಂಡಳು. ಮೇರಿಯು ಗೌಡನ ಮನವನ್ನು ಅತ್ತ ಸೆಳೆದಳು. ಗೌಡನು ನೂರಾರು ಆಳುಗಳನ್ನು ಆಳುವ ಅಭ್ಯಾಸವಿರುವವನ ಸಹಜವಾದ ದಿಟ್ಟತನದಿಂದ "ಯಾರದು?" ಎಂದನು. ಕುಟ್ಟಿಯು "ನಾನು ಬುದ್ಧಿ, ಕರಿಯನ ಹೆಂಡಿತಿ ಕುಟ್ಟಿ." ಎಂದಳು.

ಗೌಡನು, ಆ ಮಾತು ಕೇಳಿ ಏನಾಯಿತೋ ಏನೋ ಮಂಚದ ಮೇಲೆ ಕುಕ್ಕರಿಸಿದನು. ಅವನು ಸುಧಾರಿಸಿಕೊಳ್ಳುವುದಕ್ಕೆ ಒಂದು ಗಳಿಗೆ ಹಿಡಿಯಿತು. ಮೇರಿಯು ಅವನ ಆಯಾಸ ಕಂಡು ನೀರು ತಂದುಕೊಟ್ಟಳು. ನೀರು ಕುಡಿದು ಒಂದು ಕ್ಷಣ ಅನ್ಯಮನಸ್ಕನಾಗಿದ್ದು "ಏನು ಕುಟ್ಟಿ ? ಎಲ್ಲಿದ್ದೀ? ಏನು ಬಂದೀ? ಎಂದು, ಏನೂ ಆಗದಿದ್ದಂತೆ ಮಾತನಾಡಿಸಿದನು.

ಕುಟ್ಟಿಯು ಮಾತನಾಡಲು ಹಿಂತೆಗೆದಳು. ಮೇರಿ ಇದ್ದರೆ ಪರವಾಯಿಲ್ಲ ಹೇಳು ಅಂದಮೇಲೆ ಹೇಳಿದಳು :—

"ಕರಿಯ ದೆವ್ವವಾಗಿದ್ದಾನೆ. ಅವನೇ ಮೇರಿಯಮ್ಮನ ಮನೆ ಗುರುತು ಹೇಳಿಕಳುಹಿಸಿದ್ದು."

"ಹೂಂ"

"ತಾವು ಇಲ್ಲಿಗೆ ಬಂದಾಗ ವಿಷ ಹಾಕು ಅಂತ ಹೇಳಿದ್ದ."

"ಹೂಂ"

"ತಾವು ಈಪೊತ್ತು ಒಂದು ಲಕ್ಷ ದಾನ ಕೊಟ್ಟರಂತೆ"

"ಹೂಂ"

"ಇಂತಾ ದಣೀಗೆ ವಿಷ ಹಾಕಲು ನನ್ನ ಮನಸ್ಸು ಒಪ್ಪಲಿಲ್ಲ."

"ಹೂಂ."

"ನಾನು ವಿಷ ಹಾಕದಿದ್ದರೆ ನನ್ನ ಮುರುಕೋತೀನಿ ಅಂತ ಹೆದರಿಸ್ತಾನೆ."

"ಹಾಕಿಬಿಡು."

"ಉಂಟಾ ನನ್ನೊಡಯಾ ?"

"ನಾಯರ್ ಕರಿ."

ನಾಯರ್ ಬಂದರು. ಕಥೆ ಕೇಳಿದರು. ಮುಲೆಯಾಳದಲ್ಲಿ ಕುಟ್ಟಿ

ಯನ್ನು ಏನೇನು ಕೇಳಿದರು. "ಇರಲಿ. ಗೌಡರೇ, ಕುಟ್ಟಿಯಮ್ಮನ ಮಾತು ನನಗೆ ಬಿಡಿ" ಎಂದು ಹೊರಟುಹೋದರು.

ಇತ್ತ ಪ್ರಾಣೇಶನು ಹೋಗಿ ಜಾನಮ್ಮನ ಕಾಲಿಗೆ ಬಿದ್ದಿದ್ದಾನೆ. "ಕಾಪಾಡುತ್ತೇನೆ ಎಂದರೆ ಕಾಲು ಬಿಡುತ್ತೇನೆ. ಇಲ್ಲದಿದ್ದರೆ ಇಲ್ಲ" ಎಂದು ಅವಳ ಕಾಲು ಹಿಡಿದುಕೊಂಡಿದ್ದಾನೆ. ನಾಯರ್ ಬಂದು "ಇದೇನು? ಇದೇನು?" ಎನ್ನುತ್ತಿದ್ದಾನೆ. ನಾಯರ್ ಹಿಂದೆ ಗೌಡ, ಅವನ ಹಿಂದೆ ಮೇರಿ, ಇಬ್ಬರೂ ಬಂದು ಬಾಗಿಲಲ್ಲಿ ನಿಂತಿದ್ದಾರೆ.

ಜಾನಮ್ಮನು ಹಿಂದೆ ಮುಂದೆ ತಿಳಿಯದೆ, "ಇದೇಕಪ್ಪಾ? ಇದೇಕಪ್ಪಾ?" ಎನ್ನುತ್ತಿದ್ದಾಳೆ. ಕೊನೆಗೆ ಅವಳು ಅಭಿವಚನವಿತ್ತ ಮೇಲೆ, "ನಾನು ಯಾರು ಗೊತ್ತೆ?" ಎಂದು ಪ್ರಾಣೇಶನು ಕೇಳುತ್ತಾನೆ.

"ಇಲ್ಲ."

"ನಾರಾಯಣ್ ಮಗ"

"ಯಾವ? ಲಾಯರ್?"

"ಹೌದು"

"ಹಾಗೆಂದರೆ ನಮ್ಮ—?"

"ಹೌದು."

ಜಾನಮ್ಮನು ಯಾವಾಗಲೂ ಶಾಂತವಾಗಿರುತ್ತಿದ್ದವಳು. ಅವಳಿಗೂ ಈಗ ಏನಿಲ್ಲವೆಂದರೂ ಸುಮಾರು ನಲವತ್ತೈದು ವಯಸ್ಸು. ಸೌಮ್ಯವಾದ ಸಂಜೆಯಂತೆ, ಯಾವ ಉದ್ವೇಗವೂ ಇಲ್ಲದ ಅವಳ ಮುಖವೂ ಕೆಂಪಾಯಿತು. ಒಂದು ಕ್ಷಣ ಆ ಮುಖದಲ್ಲಿ ಏನೇನೋ ವಿರುದ್ಧ ಪ್ರಚಂಡ ಭಾವನೆಗಳೆಲ್ಲ ಮನಸ್ಸನ್ನು ಕಳವಳಗೊಳಿಸುತ್ತಿರುವುದು ಕಂಡು ಕೊನೆಗೆ ಮತ್ತೆ ಶಾಂತಸ್ಥಿತಿಗೆ ಬಂದಿದೆ. ಸಹಜಾವಸೆಗೆ

ಬಂದುದರ ಗುರುತಾಗಿ ಒಂದು ನಿಟ್ಟುಸಿರುಬಿಟ್ಟು "ಹಾಗಾದರೆ ನೀನು ನನ್ನ ತಮ್ಮ!" ಎಂದಳು.

"ಹೌದು"

"ಆಗಲಪ್ಪಾ! ಕಾಪಾಡಿದ್ದೇನೆ. ಕ್ಷಮಿಸಿದ್ದೇನೆ. ಈಗ ಹೇಳು"

"ಅಕ್ಕಾ! ಹಿಂದಿನದೆಲ್ಲ ಮರೆತುಬಿಡು. ಈಗ ಹತ್ತು ತೆಗೆದುಕೋ ನನ್ನನ್ನು ಮಡಿಲಿಗೆ ಹಾಕಿಕೊ."

"ಆಗಲೇ ಇಪ್ಪತ್ತಲ್ಲಾ?"

"ಆಗಲಿ. ಅದೂ ಆಗಲಿ. ನಿನ್ನ ಇಪ್ಪತ್ತೂ ತೆಗೆದುಕೊ."

"ಆಗಲಪ್ಪಾ!'' ಎಂದು ಪ್ರಾಣೇಶನನ್ನು ಹತ್ತಿರಕ್ಕೆ ಕರೆದು ಅಪ್ಪಿಕೊಂಡಳು. ಪ್ರಾಣೇಶನಿಗೆ ಏನೋ ಹೊಸದೊಂದು ರಕ್ಷಾ ಕವಚ ಸಿಕ್ಕಿದಂತಾಯಿತು.

ಪ್ರಾಣೇಶನು ಇಪ್ಪತ್ತು ಸಾವಿರಕ್ಕೆ ಒಂದು ಚೆಕ್ ಬರೆದು ಜಾನಮ್ಮನಿಗೆ ಕೊಟ್ಟನು. ಅವಳು ಒಂದು ಗಳಿಗೆ ಅದನ್ನು ಕೈಯಲ್ಲಿಟ್ಟುಕೊಂಡಿದ್ದು ಏನೋ ನೋವಿಂದ ನಾಯರ್ ಕೈಗೆ ಕೊಟ್ಟಳು. ಆತನು "ನನಗೇಕೆ ಇದು? ಮರಿಯಮ್ಮ! ತೆಗೆದುಕೊ ನಿಮ್ಮಮ್ಮನದು!" ಎಂದು ಅವಳ ಕೈಗೆ ಕೊಟ್ಟನು.

ಅಲ್ಲಿ ನಿಶ್ಶಬ್ದವು ತಾನೇ ತಾನಾಗಿತ್ತು. ಎಲ್ಲರೂ ಮೌನದಲ್ಲಿ ಅದ್ದಿ ತೆಗೆದಹಾಗೆ ಒಂದು ಗಳಿಗೆಯಿದ್ದರು. ಕೊನೆಗೆ ಪ್ರಾಣೇಶನು "ಅಕ್ಕಾ, ನನಗೆ ಇನ್ನು ಅಪ್ಪಣೆಯನ್ನು ಕೊಡು. ನೀನು ಇರುವವರೆಗೂ ಇಲ್ಲಿಯೇ ಇರಬೇಕು. ಇವೊತ್ತಿಗೆ ನನ್ನ ಮನಸ್ಸಿನಲ್ಲಿದ್ದ ಭಾರವೆಲ್ಲ ನೀಗಿತು." ಎಂದನು.

ಅವರೂ "ಆಗಲಪ್ಪ! ನಮ್ಮ ಸಂಬಂಧ ಮೂರು ತಲೆ ನಡೆಯಿತು. ನಾನು ತಾನೇ ಎಲ್ಲಿ ಹೋಗಬೇಕು? ಎಲ್ಲಾದರೂ ಚೆನ್ನಾಗಿರು." ಎಂದಳು.

ಎಲ್ಲರನ್ನೂ ಬೀಳ್ಕೊಂಡು ಪ್ರಾಣೇಶನು ಹೊರಟನು. ಗೌಡನು ಅವನನ್ನು ತನ್ನ ರೂಮಿಗೆ ಕರೆದುಕೊಂಡು ಹೋಗಿ ತನ್ನ ಕಥೆಯನ್ನೂ ಹೇಳಿ ಅವನೆದುರಾಗಿ ಕುಟ್ಟಿಯಮ್ಮನನ್ನು ಕರೆಸಿಕೊಂಡು ಅವಳಿಗೆ ಒಂದು ಸಾವಿರ ರೂಪಾಯಿ ಕೊಟ್ಟು ಹೇಳಿದನು: "ಇದು ಕರಿಯನಿಗೆ ತೃಪ್ತಿಯಾಗಲಿ ಅಂತ ಕೊಟ್ಟಿದ್ದೀನಿ. ನಿನ್ನ ಮೇಲೆ ಅವನಿಗೆ ಬಹಳ ಮೋಹ. ನೀನಿದ್ದರೆ ಅವನೆಂದಿಗೂ ಹಾಗಾಗತಾ ಇರಲಿಲ್ಲ. ಅವನೇನು ದಿನಾ ಕನಸಿನಲ್ಲಿ ಬರುತಾನಾ?"

"ಹೌದು. ದಿನಾ ಬರುತಾನೆ."

"ಸರಿ. ಇವೊತ್ತು ಹೇಳು. ಇನ್ನುಮೇಲೆ ಬುದ್ಧಿಯೋರ ಮೇಲೆ ರೋಷ ಬಿಡು—ಅನ್ನು. ನೀನು ಬರೋದಾದರೆ ತೋಟಕ್ಕೆ ಬಾ. ನೀನಿರೋಕೆ ಒಂದು ಮನೆ, ನೀನಿರೋಗಂಟ ನಿನಗೆ ಕುಡಿದ ನೀರು ಅಲ್ಲಾಡದಂಗೆ ಇರೋಕೆ ಬೇಕಾದ್ದೆಲ್ಲ ಮಾಡೋವ."

"ಆಗಲಿ. ಯೋಚನೆ ಮಾಡುತೀನಿ. ಇಲ್ಲಿ ಮರಿಯಮ್ಮ ನನ್ನ ಸುಖವಾಗಿಟ್ಟುಕೊಂಡಿದ್ದಾರೆ."

"ನಿನಗೆಲ್ಲಿ ಸುಖವೋ ಅಲ್ಲಿರು."

ಆ ರಾತ್ರಿ ಗೌಡನಿಗೆ ಏನೋ ದಿಗಿಲು. ಅದನ್ನು ಬಾಯಿಬಿಟ್ಟು ಹೇಳಲಾರ. ಆದರಿಂದ ಏನೇನೋ ಪುಸಲಾಯಿಸಿ ಪ್ರಾಣೇಶನನ್ನು ಅಲ್ಲಿಯೇ ನಿಲ್ಲಿಸಿಕೊಂಡನು. ಮೇರಿಯನಕ ಇದ್ದೇ ಇದ್ದಳು. ರಾತ್ರಿಯೆಲ್ಲ ಅಲ್ಲಿ ಗದ್ದಲವೋ ಗದ್ದಲ. ಅಂಕೆಶಂಕೆಯಿಲ್ಲದ ಸ್ಕೂಲ್ ಹುಡುಗರು ಸೇರಿಕೊಂಡಿದ್ದರೆ ಆಗುವಷ್ಟು ಗದ್ದಲ ಆಗುತ್ತಿತ್ತು. ಮೇರಿಯು ತನ್ನ ಪ್ರೇರಣೆಯಿಂದ ಗೌಡನು ಒಂದು ಲಕ್ಷ ಕೊಟ್ಟಿದ್ದು ಎಂದು ಪ್ರಾಣೇಶನಿಗೂ ಹೇಳಲಿಲ್ಲ.

## ೧೧

ಮೇರಿಯ ಮನೆಯ ನಡುಮನೆಯ ಬಲಮಗ್ಗುಲಲ್ಲಿದ್ದ ಎರಡು ಕೋಣೆಗಳು ಇಂದು ಅವಳ ತಾಯಿಗೆ ಮೀಸಲು. ಮೇರಿಗೆ ಪ್ರಾರ್ಥನೆ ಮಾಡಬೇಕು ಎನ್ನುವ ಹುಚ್ಚು ಈಗೀಗ ಬರುತ್ತಿದೆ. ವಾರಕ್ಕೆ ಒಂದೆರಡು ಸಲವಾದರೂ ಹೋಗಿ ಕ್ರಿಸ್ತನ ಪಟದ ಮುಂದೆ ಕುಳಿತುಕೊಳ್ಳುತ್ತಾಳೆ. ಅದೇನೋ ಅಂತು ಪ್ರಾರ್ಥನೆ ಅಂತ ಅಷ್ಟು ಹೊತ್ತು ಕಣ್ಣು ಮುಚ್ಚಿಕೊಂಡು ಕೂತಿದ್ದು ಬರುತ್ತಾಳೆ. ಅದಷ್ಟಾದರೆ ಅವಳಿಗೆ ಏನೋ ಹೊಸ ಜೀವನ ಬಂದಂತಾಗುತ್ತದೆ.

ಆ ಎರಡು ರೂಮಿನಲ್ಲಿ ನಾಯಿರ್ ದಿನವೂ ಜಪಕ್ಕೆ ಕುಳಿತುಕೊಳ್ಳುತ್ತಾರೆ. ಜಾನಮ್ಮನೂ ದಿನವೂ ಜಪಮಾಡುತ್ತಾಳೆ. ಬೆಳಗೆದ್ದು ಸ್ನಾನ ಮಾಡಿ ಜಪವಾಗುವವರೆಗೂ ಜಾನಮ್ಮನೂ ಕಾಫಿ ಕೂಡ ತೆಗೆದುಕೊಳ್ಳುವುದಿಲ್ಲ. ಆದರೆ ಇವೊತ್ತು ಜಾನಮ್ಮ ಇನ್ನೂ ಹಾಸುಗೆಯ ಮೇಲೆಯೇ ಮಲಗಿದ್ದಾಳೆ. ಅವಳಿಗೆ ನಿನ್ನೆಯ ರಾತ್ರಿ ಪ್ರಾಣೇಶನು ಬಂದು ಚೆಕ್ ಕೊಟ್ಟು ಹೋದುದು ಇನ್ನೂ ಮರೆತಿಲ್ಲ. ಇಪ್ಪತ್ತು ಮೂವತ್ತು ವರ್ಷಗಳ ಹಿಂದಿನ ಕಥೆಯೆಲ್ಲ ನೆನೆಪಾಗಿದೆ. ಅದೆಲ್ಲ ಸಿನೀಮಾ ಹಾಗೆ ಮನೋಭಿತ್ತಿಯಮೇಲೆ ಮೂಡಿ ಮೂಡಿ ಹೋಗುತ್ತಿದೆ.

ಆಗಾಗ ಅವಳಿಗೆ ಕನಸಿನಲ್ಲಿ ತಾಯಿಯು ಕಾಣಿಸಿಕೊಳ್ಳುವಳು. ಒಂದು ದಿನ ನನ್ನ ಬಾಳು ಹೀಗಾಯಿತು ಎಂದು ಅಳುವಳು. ಇನ್ನೊಮ್ಮೆ ತನ್ನ ದ್ವೇಷವನ್ನು ತೀರಿಸಿಕೊಂಡ, ತೀರಿಸಿಕೊಳ್ಳಬೇಕೆಂದಿರುವ ರೀತಿಯನ್ನು ಹೇಳುವಳು. ಈಗ ಮೂರು ತಿಂಗಳ ಹಿಂದೆ ಒಂದು ದಿನ ಬಂದು "ಕೆಂಪ, ನನ್ನ ಹಣದಲ್ಲಿ ಅರ್ಧವಾದರೂ ನಿನಗೆ ಕೊಡಿಸುತ್ತೇನೆ ಕಣೆ." ಎಂದು ಹೇಳಿದ್ದಳು. ಈಗ ಅದು ನಿಜವಾಯಿತು.

"ಕನಸಿನಲ್ಲಿ ತಾಯಿ ಬಂದು ಹೇಳಿದ್ದೇ ನಿಜವಾದ ಮೇಲೆ ಸನ್ಯಾಸಿಗಳು, ಹೇಳಿದ್ದೂ ನಿಜವಾಗಬೇಕು. ಆಗಬೇಕು ಎನ್ನುವುದೇನು?

ಆಗಲೇಬೇಕು" ಎಂದು ಯೋಚಿಸುತ್ತಾ ಮಲಗಿದ್ದಾಳೆ. ಯೋಚನೆಗಳಿಗೇನು? ಅಂಕೋಲೆ ಎಣ್ಣೆಯಲ್ಲಿ ಅದ್ದಿದ ಬೀಜ ನೆಲಕ್ಕೆ ಹಾಕಿ ನೀರು ಹುಯ್ದರೆ ಸಾಕು, ಹುಟ್ಟಿ ಚಿಗುರೊಡೆದು ಗಿಡವಾಗಿ ಹಣ್ಣು ಬಿಡುವುದಂತೆ! ಹಾಗೆಯೇ ಒಂದು ಯೋಚನೆ ಆರಂಭವಾದರೆ, ಅವಕ್ಕೆ ನೀರು ಬೇಡ, ಗೊಬ್ಬರ ಬೇಡ, ಬೆಳೆದುಬಿಡುತ್ತದೆ. ಒಂದರಿಂದ ಇನ್ನೊಂದು ಕವಲು ಒಡೆದು, ತಾನೇ ತಾನಾಗಿ ಹೋಗುತ್ತದೆ. ಸನ್ಯಾಸಿಗಳ ಭವಿಷ್ಯ ನಿಜವಾಗಬೇಕು ಎಂದು ಯೋಚಿಸುತ್ತಿರುವಾಗ ಅದೇನೋ ಹೊಳೆಯಿತು. ತಾನು ಮೈಸೂರಲ್ಲಿದ್ದುದು; ಅಲ್ಲಿಂದ ಪ್ರಿಯನೊಡನೆ ಪ್ರವಾಸ ಹೊರಟದ್ದು; ಹಾಗೆಯೇ ಆ ಯಾತ್ರಿಕಜೀವನವನ್ನು ನಿರ್ವಹಿಸುತ್ತಿದ್ದಾಗ ತನಗೆ ಪ್ರೇಮ ಫಲವು ದೊರೆತದು; ಅದನ್ನು ತಾನನುಭವಿಸಲಾರದೆ ಮಿಷನ್‌ಗೆ ಕೊಟ್ಟುದು; ಅದರ ರಕ್ಷಣಕ್ಕಾಗಿ ತಾನೂ ಕ್ರಿಶ್ಚಿಯನ್ ಆದುದು ಅಲ್ಲಿಂದ ಪ್ರಣಯವಿಯೋಗವಾಗಿ ತಾನು ಪಟ್ಟ ಕಷ್ಟನಿಷ್ಠುರಗಳು; ಕೊನೆಗೆ ನಾಯರ್ ಸಿಕ್ಕಿದ್ದು ಅವನೊಡನೆ ತಾನು ಸುಖವಾಗಿ ಕಾಲಕಳೆಯುತ್ತಿದ್ದಾಗ ಆದ ಸನ್ಯಾಸಿಯ ದರ್ಶನ; ಆತನು "ನೀನು ಮತ್ತೆ ನಿನ್ನ ದೇಶಕ್ಕೆ ಹೋಗು; ಅಲ್ಲಿ ಬಹು ಗೌರವವನ್ನು ಪಡೆದು ಸುಖವಾಗಿ ನಿನ್ನವರೊಡನೆ ಬಾಳುವೆ" ಎಂದು ಭವಿಷ್ಯ ಹೇಳಿದ್ದುದು ಎಲ್ಲವೂ ನೆನೆಪಾಗಿದೆ. ಜೊತೆಗೆ ತಾಯಿ ಮಾತೂ ನಿಜವಾಗಿದೆ.

ಇದೇ ಯೋಚನೆಯಲ್ಲಿ ಮಲಗಿರುವಾಗ ಅವಳಿಗೆ ಹೊತ್ತಿನ ನೆನೆಪೇ ಉಳಿಯಲಿಲ್ಲ. ಸುಮಾರು ಎಂಟು ಗಂಟೆಯಾಗಿದೆ. ನಾಯರ್ ಬೆಳಗಿನ ಸ್ನಾನ ಜಪ ಎಲ್ಲ ಮುಗಿಸಿಕೊಂಡು ಬಂದು ಒಗ್ಗಿ ನೋಡಿದರೆ ಇನ್ನೂ ಜಾನಮ್ಮ ಮಲಗಿಯೇ ಇದ್ದಾಳೆ.

"ಇದೇನಿದು? ಹಣಬಂತು ಇನ್ನು ದೇವರು ಗೀವರು ಯಾಕೆ ಅಂತ ಮಲಗಿದ್ದೀಯಾ?"

"ಇಲ್ಲ—ಏಳುತೀನಿ. ಅಮ್ಮನ ಮಾತು ನಿಜವಾಯಿತು. ಗುರುಗಳ ಮಾತು ಅರ್ಧ ನಿಜವಾಗಿದೆ. ಅಂತ ಯೋಚಿಸತಾ ಇದ್ದೆ."

"ಹಾಂ ಹಾಂ, ನಾನೂ ನಿನ್ನೆಯಿಂದ ಯೋಚಿಸುತ್ತಾ ಇದ್ದೇನೆ. ಗುರುಗಳು ಹೇಳಿದ್ದ ಎರಡು ರತ್ನದಲ್ಲಿ ಒಂದು ಗುರುತು ಸಿಕ್ಕಿತು. ಇನ್ನೊಂದು ಗುರುತು ಸಿಕ್ಕಲಿಲ್ಲವಲ್ಲ!"

"ಒಂದು ಯಾವುದು?"

"ಯಾವುದು ಎಂದರೆ, ಆ ಹೆಣ್ಣು ಮಗು. ನಿನ್ನೆ ಪ್ರಾರ್ಥನೆ ಮಾಡಲಿಲ್ಲವಾ? ಅದೇ ಹೆಣ್ಣು. ಅದಕ್ಕೆ ಇದ್ದರೆ ಎಂಟು ವರ್ಷ ಇರಬೇಕು. ಆದರೂ ಅದೆಷ್ಟು ಧೈರ್ಯವಾಗಿ, ದಿಟ್ಟವಾಗಿ, ಆ ಸಾವಿರಾರು ಜನದ ಮುಂದೆ ಪದ್ಯಗಳನ್ನು ಓದಿತು! ನಿನ್ನೆಯಿಂದ ನನಗೆ ಆ ಮಗುವಿನ ಮೇಲೆ ಗೀಳು ಹಿಡಿದಿದೆ. ಮರಿಯಮ್ಮನಿಗೆ ಹೇಳಿ ಆ ಮಗುವನ್ನು ಕರೆಸಬೇಕು ಎಂದು ಕೂಡಾ ಮನಸ್ಸಾಯಿತು. ಅದೊಂದು ಮುತ್ತು"

"ಹೌದು. ನನಗೂ ಹಾಗೇ ಅನ್ನಿಸಿತು. ನಾವು ಹೋದಾಗ ನಮ್ಮನ್ನು ಪ್ರಾಣೇಶ್ ಕರೆದುಕೊಂಡು ಹೋಗಿ ಆ ತಾಯಿಮಕ್ಕಳಿಗೆ ಭೆಟ್ಟಿಮಾಡಿಸಿದರು. ಆ ಮಗುವಿನ ಗತ್ತು, ವಿನಯ, ನೋಡಿ ನನಗೆ ಆಶ್ಚರ್ಯವಾಯಿತು. ರೂಪವೂ ಸೊಗಸಾಗಿದೆ. ಎಲ್ಲದಕ್ಕಿಂತ ಹೆಚ್ಚಾಗಿ ಆ ಮಗುವಿನ ಶಾರೀರ ನನಗ ಬಹಳ ಒಪ್ಪಿತು. ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗಂತೂ ಪಾಠ ಹೇಳುವುದು ನನ್ನ ಹಣೆಯಲ್ಲಿ ಬರೆದಿರಲಿಲ್ಲ. ಈ ಮಗುವಿಗಾದರೂ ಪಾಠ ಹೇಳುವ ಯೋಗ ಬಂದರೆ ಅದೇ ಒಂದು ಅದೃಷ್ಟ. ನನಗೆ ಪಾಠ ಹೇಳಿಕೊಟ್ಟ ಗುರುವಿನ ಋಣ ತೀರಿಸಿದ ಹಾಗಾಗುತ್ತೆ"

"ಇದಕ್ಕೇ ಹುಚ್ಚು ಅನ್ನುವುದು! ಮನುಷ್ಯ ಅಲ್ಲ, ಮೃಗಪಕ್ಷಿ ಹುಳುಹುಪ್ಪಟೆ ಹುಟ್ಟುವಾಗಲೂ ಅವುಗಳ ಜಾತಕ ಗೊತ್ತೆ. ನಿಮ್ಮ ಬೈಬಲ್ಲಿನಲ್ಲಿ ಕೂಡ ಗುಬ್ಬಚ್ಚಿಯ ಗರಿಗಳ ಲೆಕ್ಕ ಕೂಡ ಇದೆ ಅಂತ ಹೇಳಿಲ್ಲವೋ? ಇವೆಲ್ಲ ಗಹನ ವಿಷಯ, ಬಹಳ ಸೂಕ್ಷ್ಮ, ನಮಗೆ ತಿಳೀದು ಅಂತೀಯೆ. ಹೋಗಲಿ, ಆ ಗುರುಗಳ ಮಾತಾದರೂ ನಂಬಬೇಡವೋ? ಇಷ್ಟಾಯಿತು, ಇನ್ನಷ್ಟು ಆಗಬೇಕು, ಆಗತ್ತೆ"

"ನಿಜ, ಅನ್ನಿ, ಆದರೂ ಮನಸ್ಸು ನಾವು ಹೇಳಿದಹಾಗೆ ಸುಮ್ಮನಿರುತ್ತಯೇ? ಒಲೆಯ ಮೇಲಿಟ್ಟ ಎಸರಿನ ನೀರಿನ ಹಾಗೆ ಕುದೀತಿರುತ್ತೆ"

"ಹಾಗಾದರೆ ಕುದೀಲಿ ಬಿಡು. ನೀನು ಎದ್ದು ಮಡಿಗಿಡಿ ಉಟ್ಟುಕೊಂಡು ಬೆಳಗಿನ ಕೆಲಸ ಮಾಡೋದಿಲ್ವೊ?"

"ಈಗೇನಪ್ಪ ನಿನಗೆ ಸೇವೆಗೆ ಇನ್ನೊಬ್ಬಳು ಸಿಕ್ಕಿದಳು. ನಾನೂ ಮುದುಕಿಯಾಗುತ್ತಾ ಬಂದೆ. ನನ್ನ ಬಿಡಬಾರದಾ?"

"ಹಾಂಹಾಂ, ಅಲ್ಲೇ ನೀನು ಜಾರಿದ್ದು. ಕೆಲವು ಔಷಧಿ ಹೊಸದರಲ್ಲಿ ಗುಣ, ಕೆಲವು ಹಳೆದಾಗುತ್ತಾ ಗುಣ, ಇನ್ನು ಕೆಲವು ಇತರರು ಉಪಯೋಗಿಸಿ ಹಳದು ಮಾಡಿಕೊಟ್ಟರೆ ಗುಣ..............."

ನಾಯಿರ್ ಇನ್ನು ಏನೋ ಹೇಳುವದರಲ್ಲಿದ್ದ. ಜಾನಮ್ಮನು ನಿನ್ನ ತಲೆ ಎಂದು ದಿಂಬು ತೆಗೆದುಕೊಂಡು ಹೊಡೆದಳು. ನಾಯಿರ್ ತಪ್ಪಿಸಿಕೊಂಡು "ನನಗೆ ಗುರುಗಳ ಕೃಪೆಯಿದೆ. ನನಗೆ ಯಾವ ಏಟೂ ತಗಲುವುದಿಲ್ಲ. ಅದು ಈಗಲಾದರೂ ತಿಳೀತೋ?" ಎಂದನು.

ಇಬ್ಬರೂ ನಕ್ಕರು. ಜಾನಮ್ಮ ಎದ್ದು ಸ್ನಾನಕ್ಕೆ ಹೋದಳು.

ಆ ವೇಳೆಗೆ ಗೌಡನು ಎದ್ದು ಸ್ನಾನಮಾಡಿದ್ದಾನೆ. ಮೇರಿಯು ಸ್ನಾನಮಾಡಿ ಅವನ ಕೊಠಡಿಯಲ್ಲಿಯೇ ಒಂದು ಮೂಲೆ ಸಾರಿಸಿ ರಂಗವಲ್ಲಿ ಇಟ್ಟು ಒಂದು ಮಣೆ ಹಾಕಿದ್ದಾಳೆ. ಗೌಡನು ಅಲ್ಲಿ ಕುಳಿತು ಚೆನ್ನಾಗಿ ಶಿವಾರ್ಚನ ಮಾಡಿದ್ದಾನೆ. ರುದ್ರವನ್ನು ಘಂಟಾಘೋಷವಾಗಿ ಹೇಳಿ ಶಿವಪೂಜೆಯನ್ನು ಮುಗಿಸಿದ್ದಾನೆ.

ನಾಯರ್ ರುದ್ರವನ್ನು ಕೇಳಿದ. ಬಂದು ಬಾಗಿಲಲ್ಲಿ ನಿಂತುಕೊಂಡು ಕೇಳಿದ. "ಹೌದು ಗೌಡನ ಧ್ವನಿ. ಸಂದೇಹವಿಲ್ಲ. ಗೌಡ ಅಂದರೆ ಶೂದ್ರನಲ್ಲವೋ? ಇವನಿಗೆ ರುದ್ರ ಹೇಗೆ ಬಂತು? ಕೇಳಬೇಕು" ಅನ್ನಿಸಿತು. ನಡುಮನೆಯಲ್ಲಿಯೇ ಕುಳಿತಿದ್ದ. ಜಾನಮ್ಮನು ಮಡಿಯುಟ್ಟು ಬಂದಳು. "ಕೆಂಪ, ಕೆಂಪ, ಇಲ್ಲಿ ಬಾ" ಎಂದು ಕೂಗಿ ಕೊಠಡಿಯ ಕಡೆ ತೋರಿಸಿದ. ಅವಳು "ಯಾರು?" ಎಂದು ಕೇಳಿದಳು.

"ಗೌಡ"

''ನಿಜವಾಗಿಯೂ''

ನಾಯಿರ್ ತಲೆ ಅಲ್ಲಾಡಿಸಿದ. ಅವಳೂ ಮೆಚ್ಚಿಕೆಯ ತಲೆದೂಗಿ ಅಷ್ಟು ಹೊತ್ತು ನಿಂತಿದ್ದು ಅಭಿನಂದಿಸುತ್ತಾ ಹೋದಳು.

ಮೇರಿಯು ಗೌಡನ ಪೂಜೆ ಮುಗಿಯುವವರೆಗೂ ಮೌನವಾಗಿ, ಮರ್ಯಾದೆಯಾಗಿ, ಭಕ್ತಿಯಾಗಿ, ಕುಳಿತಿರುವಳು. ಪೂಜೆಯೆಲ್ಲಾ ಆದ ಮೇಲೆ ಅವನು ಅವಳಿಗೂ ತೀರ್ಥಪ್ರಸಾದ ಕೊಡುವನು. ಅವಳಿಗೆ ಅದನ್ನು ಸ್ವೀಕರಿಸುವುದರಲ್ಲಿ ಏನೂ ವ್ಯಂಗ್ಯ ತೋರುತ್ತಿರಲಿಲ್ಲ.

ಆ ದಿನವೂ ಪೂಜೆ, ಪ್ರಸಾದ ವಿನಿಯೋಗ, ಎಲ್ಲಾ ಆದಮೇಲೆ ಮೇರಿಯು ಉಪಕರಣಗಳನ್ನು ತೆಗೆದುಕೊಂಡು ಬಂದಳು. ನಾಯಿರ್ ಅವಳನ್ನು ಕರೆದು "ನಿಮ್ಮ ಗೌಡರು ದಿನಾ ಶಿವಪೂಜೆ ಮಾಡುತ್ತಾರೋ?" ಎಂದನು. "ಮೊದಲು ಇರಲಿಲ್ಲ. ಈಗ ಕೆಲವು ದಿನದಿಂದ ಮಾಡುತ್ತಾರೆ. ಇಲ್ಲಿಗೆ ಬಂದರೆ ನಾನೇ ಸ್ನಾನಮಾಡಿ ಅವರಿಗೆ ಎಲ್ಲಾ ಸಿದ್ಧಮಾಡಿಕೊಡ ಬೇಕು. ನನಗೆ ಎಲ್ಲಾ ಕಲಿಸಿಕೊಟ್ಟರು. ನೀನೂ ಮಾಡು ಎನ್ನುತ್ತಾರೆ, ನಾನು ಕ್ರಿಶ್ಚಿಯನ್ ಅಲ್ಲಾ ಅಂತ ಇನ್ನೂ ತಡೆದಿದ್ದೇನೆ. ನನಗೆ ಆಸೆ ಯಾಗುತ್ತಿದೆ."

"ಮಂತ್ರ?''

"ಅವರು ಕಲಿತಿದ್ದಾರೆ. ನನಗೂ ಕಲಿಸಿಕೊಡುತ್ತಾರೆ."

"ಹಾಗಾದರೆ ಮಾಡಿಬಿಡು."

"ನಾನು ಕ್ರಿಶ್ಚಿಯನ್ ಅಲ್ಲವೆ?"

"ಕ್ರಿಸ್ತ ದೇವರಪೂಜೆ ಮಾಡಬೇಡ ಅಂತ ಹೇಳಿಲ್ಲವಲ್ಲ?"

"ನೀವು ಹಿಂದೂಗಳು, ಹಾಗೆ ಹೇಳುತ್ತೀರಿ. ಕ್ರೈಸ್ತರು ಅದನ್ನು ಒಪ್ಪುತ್ತಾರೆಯೇ?"

"ಮರಿಯಮ್ಮ, ಒಂದು ಮರೆತೆಯಲ್ಲ. ಈ ಹಿಂದೂಸ್ತಾನದಲ್ಲಿ ಇರೋ ಕ್ರೈಸ್ತರು, ಮಹಮ್ಮದೀಯರು ಎಲ್ಲರೂ ಹಿಂದೂಗಳೇ! ಇನ್ನೇನು ಇವರೆಲ್ಲ ಹೊರಗಿನಿಂದ ಬಂದರು ಅಂತ ಇದ್ದೀಯಾ? ಇಲ್ಲ. ನಮ್ಮಲ್ಲಿ

ಇರೋ ಅನೇಕ ಭಕ್ತರು, ಗುರುಗಳು, ಯೋಗಿಗಳು ಇವರ ಜೊತೆಗೆ ಕ್ರಿಸ್ತ, ಮಹಮ್ಮದ್ ಸೇರಿಕೊಂಡಾಗ, ನಮ್ಮ ದೇಶಕ್ಕೆ ಒಳ್ಳೆಯ ಗತಿ. ನೀನು ಕ್ರಿಸ್ತನನ್ನು ಗೌರವಿಸು. ಹಾಗೆಂದು ಇತರರ ದೇವರನ್ನು ತಿರಸ್ಕರಿಸಬೇಡ. ಯಾರು ಎಲ್ಲಿ ಯಾರಿಗೆ ಪೂಜೆ ಮಾಡಿದರೂ ಯಾವ ರೂಪಕ್ಕೆ ಪೂಜೆ ಕೊಟ್ಟರೂ ಅದೆಲ್ಲ ದೇವರಿಗೇ ಪೂಜೆ. ದೇವರು ಎಲ್ಲೆಲ್ಲೂ ಇರುವನು ಅಂದಮೇಲೆ ಯಾವ ರೂಪಕ್ಕೆ ಪೂಜೆ ಮಾಡಿದರೇನು?"

"ಹಾಗಂತೀರಾ ಅಪ್ಪಾ ಅವರೇ?"

"ಅದೇ ಸರಿಯಮ್ಮ! ಈಗ ನಾನು ನೋಡು ನಾಯರ್, ಹಿಂದೂ. ನಿಮ್ಮಮ್ಮ ಮೊದಲು ಹಿಂದೂ, ಆಮೇಲೆ ಕ್ರಿಸ್ತರು, ಆಮೇಲೆ ಈಗ ಅರ್ಧ ಹಿಂದೂ. ಅವಳ ಹಾಗೇ ನೀನೂ ಹಿಂದೂಕ್ರಿಸ್ತಳಾಗು. ಹಿಂದೂ ದೇವತೆಗಳೂ ನಿನ್ನ ಪೂಜೆ ತೆಗೆದುಕೊಳ್ಳಲಿ; ಕ್ರಿಸ್ತನಿಗೂ ಪೂಜೆ ಒಪ್ಪಿಸು."

ಮೇರಿಗೆ ಆ ವಾದ ಬಹಳ ಹಿಡಿಯಿತು. ಗೌಡನನ್ನು ಕರೆದಳು: "ಗೌಡರೆ, ನಮ್ಮ ಅಪ್ಪಾ ಅವರು ಹೇಳೋದು ಕೇಳಿದರೇನ್ರಿ? ಅವರೂ ನಿಮ್ಮ ಶಿವಪೂಜೆ ಮಾಡು ಅಂತಾರೆ. ಬನ್ನಿ ಬನ್ನಿ" ಎಂದು ಕರೆದುಕೊಂಡು ಬಂದಳು.

ನಾಯಿರ್ ಗೌಡ ಇಬ್ಬರೂ ಮಾತನಾಡಿದರು. ನಾಯಿರ್ ಹೇಳಿದನು: "ಇದು ಕಲಿಯುಗ. ಅಮಾವಾಸ್ಯೆಯ ಹಾಗೆ ಈ ಕಾಲ. ಹುಣ್ಣಿಮೆಯ ದಿನ ಚಂದ್ರ ಇರುತ್ತಾನೆ. ಅವೊತ್ತು ಜಗತ್ತಿಗೆಲ್ಲ ಬೆಳಕು. ಅವೊತ್ತು ಬೀದಿಯಲ್ಲಿ ಯಾರೂ ಬೆಳಕು ತರಬೇಕಾಗಿಲ್ಲ. ಆದರೂ ಮನೆಯಲ್ಲಿ ಬೆಳಕು ಇಲ್ಲದಿದ್ದರೆ ಆದೀತೆ? ಆದರೆ ಅಮಾವಾಸ್ಯೆಯ ದಿನ ಅಂತೂ ಮನೆಯಲ್ಲೂ ಬೇಕು. ಬೀದಿಗೆ ಹೋದರೆ ಬೇಕೇಬೇಕು. ಹಾಗೆ. ಈಗ ಪ್ರತಿಯೊಬ್ಬರೂ ಪೂಜೆ ಮಾಡಬೇಕು."

"ಸ್ವಾಮಿ, ನಾವು ನಿಮ್ಮಂಗೆ ಹೆಚ್ಚಾಗಿ ಓದಿದವರಲ್ಲ. ಈ ಕುಟ್ಟಿಯಮ್ಮ ಕರಿಯನ ಕಥೆ ಕೇಳಿದರಲ್ಲ. ಅವ ದೆವ್ವವಾಗಿ ನಮ್ಮನ್ನ ಗೋಳು

ಹುಯ್ಕೊಂಡೆ. ಈಗ ಮೂರು ತಿಂಗಳ ಹಿಂದೆ ಒಬ್ಬರು ಸ್ವಾಮಿಗಳು ಬಂದರು. ಅವರು ಭಾರಿ ಜೀವ. ಅವರಿಂದ ನಾವೆಲ್ಲ ಬದುಕಿದೋ. ಅವರು ದಿನಾ ಶಿವಪೂಜೆ ಮಾಡು ಅಂದರು. ಮಂತ್ರ ಕಲಿತುಕೋ ಅಂದರು. ಈಗ ಮನೇಲಿ ನಾನು ನನ್ನ ಹೆಂಡಿರು ಎಲ್ಲರೂ ಶಿವಪೂಜೆ ಮಾಡುತ್ತಿದ್ದೀವಿ. ನಮ್ಮ ಮೇರೀನೂ ನಮಗೆ ಸೇರಿದಮೇಲೆ ನಾವು ಮಾಡಿದಾಗೇ ಮಾಡಬೇಡವಾ? ಇವೊತ್ತು ನೀವೂ ಆಗಬೋದು ಅಂದ ರಂತೆ. ನೀವು ಹೂಂ ಅಂದರೆ ಅವಳನ್ನು ನಮ್ಮ ಊರಿಗೆ ಕರಕೊಂಡು ಹೋಗಿ ಮಂತ್ರಗಿಂತ್ರ ಎಲ್ಲಾ ಕಲಿಸಿ ಕಳುಹಿಸಿಕೊಡುತೀನಿ."

"ನಿಮ್ಮ ಹಾಗೇ ನಾನು. ಅವರಮ್ಮನ್ನ ಕೇಳಿ."

"ಕೇಳೋವ. ಅದಿರಲಿ, ಏನು ಮಾಡಿದರೂ ನಮ್ಮ ಚಿಕ್ಕರಾಯ ಮಾತ್ರ ಪೂಜೆ ಮಾಡೊಲ್ಲನಲ್ಲ! ಏನು ಮಾಡೋವ? ಅದೇ ಅವನ ಹೆಂಡತಿ ನೋಡಿ. ಅಬ್ಬಾ! ಏನು ಭಕ್ತಿ! ಒಳ್ಳೆಯ ಮಾರಾಯಿತಿ. ಒಳ್ಳೇ ಪುಣ್ಯಾತ್ಮಗಿತ್ತಿ ಹೆತ್ತ ಮಗಳು ಸ್ವಾಮಿ! ಇವ ಮಾತ್ರ ಉಹುಂ! ದುಡ್ಡು, ದುಡ್ಡು, ದುಡ್ಡು. ಅವನಿನ್ನು ಹತ್ತು ತಲೆ ತಿಂದರೂ ಸಮೆಯೋ ದಿಲ್ಲ; ಅಷ್ಟು ದುಡ್ಡದೆ! ಆ ಮಗನೋ ಪುರುಷಾಮೃಗ. ದೇವರು ಇಬ್ಬರ ಬುದ್ಧಿ ಅಪ್ಪನಿಗೆ ಕೊಟ್ಟು, ಇಬ್ಬರ ದಡ್ಡತನ ಒಬ್ಬನಿಗೆ ಕೊಟ್ಟ ದ್ದಾನೆ ಅನ್ನೋ ಅಂಗದೆ. ಇನ್ನು ಹತ್ತು ವರ್ಷ ಆದರೂ ಆ ಮಗ ಎಸ್.ಎಸ್.ಎಲ್.ಸಿ. ಪಾಸ್ ಮಾಡುತಾನೋ ಇಲ್ಲವೋ?"

"ಏನಿಲ್ಲ, ಅದಕ್ಕೆಲ್ಲ ನಮ್ಮ ಹತ್ತಿರ ಔಷಧ ಇದೆ. ನಿಮ್ಮದು ಮೋಟಾರು ಕೆಟ್ಟುಹೋದರೆ ರಿಪೇರಿ ಮಾಡೋಲ್ಲ ಹಾಗೆ ಅದೆಲ್ಲ ಮಾಡ ಬಹುದು. ಆದರೆ ಅದರ ಫಲ ಅವನಿಗೆ ಆಗೋಲ್ಲ. ಅಷ್ಟೆ! ಅದಿರಲಿ, ಆ ಸ್ವಾಮಿಗಳು ಯಾರು? ಅದು ಕೊಂಚ ಹೇಳಿ."

"ಅವರ ಹೆಸರು ಶಿವಾನಂದರು ......"

"ಶಿವಾನಂದರೋ?"

"ಹೌದು."

"ಬೊಡ್ಡ ಕಣ್ಣು. ಅಷ್ಟು ಎತ್ತರವಾದ ಆಳು ಅಲ್ಲ; ಗಿಡ್ಡೂ ಅಲ್ಲ. ಒಳ್ಳೆ ಎಣ್ಣೆಗೆಂಪು. ಹೌದೋ?"

"ಹೌದು."

"ಸರಿ. ನಮ್ಮ ಸ್ವಾಮಿಗಳೇ! ಕೆಂಪ, ಕೆಂಪ, ಇಲ್ಲಿ ಬಾ. ನೋಡು, ನಿಮ್ಮ ಸ್ವಾಮಿಗಳೇ ಗೌಡರಿಗೂ ಅನುಗ್ರಹ ಮಾಡಿರೋದು. ಗೌಡರೇ, ಅವರೇ ಬಂದು ಇವಳಿಗೆ ನೀನು ನಿಮ್ಮ ದೇಶಕ್ಕೆ ಹೋಗಿ ನಿಮ್ಮ ಜನದೊಡನೆ ಸುಖವಾಗಿರುತೀಯಾ ಎಂದು ಭವಿಷ್ಯ ಹೇಳಿದ್ದು. ಅವರು ಹಾಗೆ ಹೇಳಿದ ತಿಂಗಳಿಗೆ ಇಲ್ಲಿಂದ ಮಗಳು ಇರೋ ಸುದ್ದಿ ಬಂತು. ನಿಮ್ಮ ರಾಯರು ನಿನ್ನೆ ಬಂದು ನೆಂಟತನ ಹೇಳಿದ್ದು ಅದೆಲ್ಲ ನಿಮಗೆ ಗೊತ್ತು ತಾನೇ?"

"ಹಾಗಾದರೆ ನಿಮಗೆ ಅವರ ದರ್ಶನ ಆಗಿತ್ತೆ?"

"ಆಗಿತ್ತು. ಅವರೇ ಅಪ್ಪಣೆ ಕೊಟ್ಟಿದ್ದಾರೆ: ಬೆಂಗಳೂರಲ್ಲಿ ನಮ್ಮದು ಎರಡು ಒಡವೆ ಅದೆ; ಅದನ್ನು ಜೋಪಾನ ಮಾಡೋ ಕೆಲಸ ನಿಮ್ಮದು ಅಂತ ನನಗೆ ವಹಿಸಿದ್ದಾರೆ. ನಿನ್ನೆ ಒಂದು ಒಡವೆ ಕಂಡೆ; ಇನ್ನೊಂದು ಇನ್ನೂ ಕಂಡಿಲ್ಲ."

"ನೀವು ಕಂಡ ಒಡವೆ ಯಾವುದು?"

"ಆ ಮಗು ವೀಣಾ"

"ಸೋಮಿಗಳ ಕಣ್ಣಲ್ಲಿ ಅದಲ್ಲ ಒಡವೆ. ನಮ್ಮ ನರಸಿಂಹಯ್ಯನೋರ ಮಗ ಶ್ರೀನಿವಾಸ. ಯಾರೂ ಅಂತೀರಿ. ನಾನು ಕಾರು ಹತ್ತುವಾಗ ಕರೆದು ಒಂದು ನೂರು ರೂಪಾಯಿನ ನೋಟು ಕೊಟ್ಟಿನಲ್ಲ. ಅವನು. ಏನಂತೀರಿ? ಸೋಮಿಗಳು ತಲೆಯ ಮೇಲೆ ಕೈಯಿಟ್ಟುಬಿಟ್ಟರು. ಈಗ ಆ ಹುಡುಗ ನಾನು ವಿಚಾರಿಸಿದೆನಲ್ಲ, ಒಂದು ದಿನ ಜಪ, ದೇವರ ಪೂಜೆ, ಬಿಟ್ಟವನಲ್ಲ; ಅದು ಒಡವೆ."

"ಸರಿ. ಕೆಂಪ, ನಮಗೆ ಎರಡು ಒಡವೆಯೂ ಸಿಕ್ಕಿತು. ಇನ್ನು ನಾವು ಕಾವಲಿಗೆ ಸಿದ್ಧವಾಗಬೇಕು."

"ಅಂದರೆ?"

"ಅದೂ ನಮಗೂ ತಿಳಿದು. ಸ್ವಾಮಿಗಳು ಹೇಳಿದರು; ಅವರಿಗೆ ಏನು ವಿದ್ಯೆ ಕಲಿಸಬೇಕೋ, ಔಷಧ ಕೊಡಬೇಕೋ, ಏನಾದರೂ ರಹಸ್ಯ

ತಿಳಿಸಬೇಕೋ ಏನೋ ಒಂದು ಕಾಣೆವು. ಅಂತೂ ನಾವೂ ಸಿದ್ಧವಾಗಿ ಬಂದಿದೀವಿ. ನಾನೂ ನನ್ನ ಆಸ್ತಿಗೀಸ್ತಿ ಎಲ್ಲಾ ಮಾರಿ, ಆ ಹಣ ಎಲ್ಲಾ ಇಂಪೀರಿಯಲ್ ಬ್ಯಾಂಕಿನಲ್ಲಿಟ್ಟು ಬಂದಿದ್ದೀನಿ."

"ಸೋಮಿ, ತಡೀರಿ. ನೀವು ಇವರನ್ನ ಹೆಸರು ಹಿಡಿದು ಕರೆದ ಮೇಲೆ ಏನೋ ನೆನೆಪಾಯಿತು. ನಮ್ಮ ಕನ್ಯಾಮಂದಿರಕ್ಕೆ ವೈದ್ಯರು ಒಬ್ಬರು ಸಂಗೀತಗಾರರು ಒಬ್ಬರು ಬೇಕು ಅಂತ ಅಡ್ವರ್‌ಟೈಸ್ ಮಾಡಿದ್ದೆ. ಅದರಲ್ಲಿ ಬುದ್ಧಿವಂತಿಕೆಯಾಗಿ ಸಂಬಳ ಇಲ್ಲ. ಆದರೆ ಮನೆ ಕೊಡುತೀವಿ; ಇಲ್ಲದಿದ್ದರೆ ಅದೂ ಇಲ್ಲ. ಯಾರಾದರೂ ಬರುವಹಾಗಿದ್ದರೆ ದಯವಿಟ್ಟು ಬರೆಯೋದು ಅಂತ ಹಾಕಿದ್ವೋ! ನಮ್ಮ ಅಡ್ವರ್‌ಟೈಸ್ ಮೆಂಟಿಗೆ ಮಲೆಯಾಳದಿಂದ ಎರಡು ಕಾಗದ ಉತ್ತರ ಬಂದಿವೆ. ಒಂದು ಶಂಕರ ಅಂತ ವೈದ್ಯರು. ಇನ್ನೊಬ್ಬ ಕೆಂಪಮ್ಮ ಅಂತ ಸಂಗೀತಗಾರರು. ನಾಳೆ ಮೀಟಿಂಗಿನಲ್ಲಿ ಆ ವಿಷಯ ಬರುತ್ತವೆ. ಅದೇನಾದರೂ ನೀವೇನೋ ?"

ನಾಯರ್ ನಕ್ಕುಬಿಟ್ಟರು. "ಆ ಹುಚ್ಚರು ನಾವೇ! ನಮುಗೀಗ ಸಂಬಳಸಾರಿಕೆ ಏನೂ ಬೇಡ. ದೇವರು ನಮುಗೆ ಬೇಕಾದ್ದೆಲ್ಲ ಕೊಟ್ಟಿದ್ದಾನೆ. ನಾವು ಇನ್ನು ಬದುಕಿರುವವರೆಗೂ ನಮುಗೆ ಬೇರೆ ಕೆಲಸವಿಲ್ಲ. ಆ ಎರಡು ಒಡವೆ ಜೋಪಾನ ಮಾಡೋದು. ಆಯಾ ಸಮಯಕ್ಕೆ ಸರಿಯಾಗಿ ಏನು ಮಾಡಬೇಕು ಅನ್ನುವದನ್ನು ಗುರುಗಳು ಹೇಳುತ್ತಾರೆ....."

"ಅಂದರೆ ಅವರು ಬರುತ್ತಾರಾ ?"

"ಏನು ಆರು ಮಣದ ದೇಹ ಹೊತ್ತು ಬಂದರೆ ಬಂದಹಾಗೆ ಇಲ್ಲದಿದ್ದರೆ ಇಲ್ಲವೋ? ನಾವು ನಿತ್ಯಾ ಪೂಜೆಗೆ ಕೂತುಕೊಂಡಾಗ ದರ್ಶನವಾಗುತ್ತದಲ್ಲಾ! ಆಗ ಹೇಳ್ತಾರೆ."

"ಹಾಗಾದರೆ ನಮುಗೊಂದು ಉಪಕಾರ ಆಗಬೇಕಲ್ಲಾ !"

"ಆಗೇ ಇದೆಯಲ್ಲಾ !"

"ಅಂದರೆ ?"

"ನಿನ್ನೆ ರಾತ್ರಿಯದು ತಾನೇ?"

"ಹೌದು."

"ಅದು ಆಗಲೇ ಇತ್ಯರ್ಥವಾಯಿತು. ಇವೊತ್ತು ಬೆಳಿಗ್ಗೆ ಹೇಳಿದರು. ಅದರಿಂದಲೇ ನಿನ್ನೆಯ ರಾತ್ರಿ ಅಷ್ಟು ಧೈರ್ಯವಾಗಿ ನಮಗೆ ಇರಲಿ ಅಂತ ಕುಟ್ಟಿಯಮ್ಮನಿಗೆ ಹೇಳಿದ್ದು. ಅವಳಿಗೂ ಇವೊತ್ತು ರಾತ್ರಿ ಸ್ವಪ್ನವಾಗುತ್ತದೆ. ಅವಳು ಬಂದು ನಾಳೆ ನಿಮಗೆ ಹೇಳುತ್ತಾಳೆ."

"ಶಿವಶಿವ, ಆ ನಮ್ಮಪ್ಪನ ದಯೆ ಏನು ಹೇಳಲಿ! ಆಯಿತು. ಸ್ವಾಮಿ, ಆದರೂ ನಮ್ಮ ದೊಡ್ಡ ರಾಯರು ರಮೇಶ್‌ಗೆ ಏಕೆ ಸೋಮಿ ಅಂಥಾ ದುರ್ಮರಣ ಬಂತು ?"

"ಅದೂ ಕೇಳಬಹುದು. ಅದು ಕೇಳಿ ಈಗ ಏನಾಗಬೇಕು ? ಮುಂದಿನ ಕೆಲಸ ಮಾಡೋಣ, ಆ ಒಡವೆ ಕರೆಯಿಸಬೇಕಲ್ಲ ?"

"ಆಗಲಿ. ಇವೊತ್ತೇ ಕಾರು ಕೊಟ್ಟು ಕಳಿಸಿ ಮಧ್ಯಾನ್ನಕ್ಕೆ ಕರಿಸೋವ."

ಮೇರಿಯು ತಿಂಡಿ ಕಾಫಿ ಎಲ್ಲ ತೆಗೆಸಿಕೊಂಡು ಬಂದಳು. ಎಲ್ಲರೂ ಒಂದು ಗಳಿಗೆ ಅತ್ತ ತಿರುಗಿದರು.

* * * *

ಮಧ್ಯಾಹ್ನ ಮೂರು ಗಂಟೆಯಿರಬಹುದು. ಪ್ರೊಫೆಸರ್ ಮನೆಯಲ್ಲಿ ಸೀತಮ್ಮ, ಮೋಹನಬಾಯಿ, ವೆಂಕಟೇಶಯ್ಯ, ಶತಾನಂದಂ, ನಾಲ್ವರೂ ಕುಳಿತಿದ್ದಾರೆ. ಪ್ರೊಫೆಸರ್ ಹೆಂಡಿತಿಯೂ ಇದ್ದಾರೆ. ಅವರು ಇವೊತ್ತು ಕನ್ಯಾಮಂದಿರದ ಪಾಠಪ್ರವಚನಗಳನ್ನು ಕುರಿತು ಇತ್ಯರ್ಥ ಮಾಡುವುದಕ್ಕೆ ಸೇರಿದ್ದಾರೆ. ನಾಳೆ ಟ್ರಸ್ಟಿಗಳ ಮೀಟಿಂಗ್. ಅದಕ್ಕೆ ರಿಪೋರ್ಟ್ ಹೋಗಬೇಕು.

ಸೀತಮ್ಮನವರು "ನಮ್ಮ ಮಕ್ಕಳು ಬಹಳ ಬಹಳ ಓದಿಬಿಡ ಬೇಕು. ಪ್ರೊಫೆಸರ್—ನಿಮ್ಮ ಮ್ಯಾಥ್‌ಮ್ಯಾಟಿಕ್ಸ್ ಸ್ಪೈಸ್ ಹೇಳಿ ಮಕ್ಕಳನ್ನ ಕೊಲ್ಲಬೇಡಿ. ಹೈಸ್ಕೂಲಿಗೆ ಹೋಗಿಬರೋ ಹೆಣ್ಣು ಮಕ್ಕಳನ್ನು ನೋಡಿ. ಕೀರೇಸೊಪ್ಪು ಕಿತ್ತು ಬಿಸಿಲಲ್ಲಿ ಒಣಗಹಾಕಿದ ಹಾಗೆ ಆಗಿರೋ ಆ ಮೊಕ ನೋಡಿದರೆ ನನಗೆ ಸಂಕಟವಾಗುತ್ತೆ. ಸುಲಭವಾದ ಪಾಠ ಇರಬೇಕು. ಆಟ ಹೆಚ್ಚಾಗಿರಬೇಕು. ಮುಂದಿನ ಜನಾಂಗ ಬದುಕೋ ಅವರು ಗುರುಗಳಾಗಬೇಕು. ಹಾಗೆ ಕರ್ರಿಕುಲಂ ಮಾಡಿ" ಎಂದರು.

ಪ್ರೊಫೆಸರ್ ಒಂದು ಗಳಿಗೆ ಯೋಚನೆ ಮಾಡಿ "ಹುಂ, ಇನ್ನೂ ಮುಂದಕ್ಕೆ ಮಾತು ನಡಿಯಲಿ." ಎಂದರು.

ಮೋಹನಬಾಯಿ ಹೇಳಿದಳು: "ನಾನು ಈ ವಿಚಾರದಲ್ಲಿ ಏನೂ ಮಾತನಾಡಲಾರೆ. ಆದರೂ ನನಗೆ ಒಂದು ಆಸೆ ಇದೆ. ನಮ್ಮ ವೀಣಾಗೆ ಸಂಸ್ಕೃತ ಬರಬೇಕು; ಸಂಗೀತ ಬರಬೇಕು; ಇಂಗ್ಲಿಷ್ ಬರಬೇಕು. ಅಂತ. ಬಹುಶಃ, ಮಕ್ಕಳು ಹೆತ್ತಿರೋ ಇತರರಿಗೂ ಇದೇ ಆಸೆ ಇರಬೇಕು. ಅದರಿಂದ ಕನ್ಯಾಮಂದಿರದಲ್ಲಿ ಈ ಮೂರೂ ಇರಲಿ ಅಂತೀನಿ. ನೀವೂ ಒಪ್ಪಬೇಕು." ಪ್ರೊಫೆಸರ್ ಕೂಡಲೇ ಹೇಳಿದರು; "ವೆಂಕಟೇಶಯ್ಯ, ಮೊದಲು ಗುರುತು ಹಾಕಿ—ಲಾಂಗ್ವೇಜಸ್; ಕನ್ನಡ ದೇಶದಲ್ಲಿ ಇದ್ದೇವೆ ಕನ್ನಡ ಬೇಕೇ ಬೇಕು. ಸಂಸ್ಕೃತ, ಇಂಗ್ಲಿಷ್, ಇದ್ದೇ ಇರಬೇಕು. ಹಿಂದಿಯೇ"

"ಇಲ್ಲಾ ಪ್ರೊಫೆಸರ್, ಕನ್ನಡ ಬೇರೇ ಕಲಿಸೋದೇನು? ಕನ್ನಡ ದಲ್ಲಿ ಪಾಠ ಹೇಳಲಿ. ಈ ಭಾಷೆಗಳಲ್ಲಿ ಪಾಠ ಹೇಳೋ ವಿದ್ವಾಂಸರಾಗ ಬೇಕಿಲ್ಲ ನಮ್ಮ ಮಕ್ಕಳು. ಓದಿದ್ದು ಅರ್ಥವಾಗಿ, ಮಾತನಾಡೋಕೆ ಬಂದರೆ ಸಾಕು. ಅದರಿಂದ ಮಾತನಾಡುವುದೇ ಗುರಿಯಾಗಿ ಇಟ್ಟು ಕೊಂಡು ಸಂಸ್ಕೃತ, ಇಂಗ್ಲಿಷ್, ಹಿಂದಿ, ಕಲಿಸಿ, ಸುಮ್ಮನೆ ಹತ್ತು ಹದಿನೈದು ವರ್ಷ ಒಂದೊಂದು ಭಾಷೆಗೆ ಬೇಡ."

"ಹಾಗೂ ಆಗಲಿ."

ಮುಂದೆ ಗಣಿತ ಚರಿತ್ರೆ ಅನ್ನೋದರೊಳಗಾಗಿ ಫೋನ್ ಬಂತು. ಪ್ರೊಫೆಸರ್ ರಿಸೀವರ್ ತೆಗೆದುಕೊಂಡರು.

"ಯಾರು?"

"ನಾನು, ಗೌಡ. ಪ್ರೊಫೆಸರ್ರೇ! ನಮಗೆ ಮಲೆಯಾಳದ ಕಡೆಯಿಂದ ನಿಮ್ಮ ಕನ್ಯಾಮಂದಿರದಲ್ಲಿ ಬಿಟ್ಟೆ ದುಡಿಯುತ್ತೇವೆ ಅಂತ ಕಾಗದಗಳು ಬಂದಿವೆಯಲ್ಲ, ಅವುಗಳ ಜೊತೆಗೆ ಇನ್ನೂ ಯಾವವಾದರೂ ಬಂದಿವೆಯೇನು?"

"ನೀವು ಕೇಳೋದು ಚೆನ್ನಾಗಿದೆ. ನೂರಾರು ಕೊಟ್ಟರೂ ಬರೋರು ಇಲ್ಲ. ಸಾಲದ್ದಕ್ಕೆ ನನ್ನ ಹೆಸರೂ ಹಾಕಿದ್ದೀರಿ. ಅಂಥಾದ್ದರಲ್ಲಿ ಈ ನಾಗರಹಾವಿನ ಹತ್ತಿರ ಬಾಳೋಕೆ ಯಾರು ಬಂದಾರು? ಆವೆರಡೇ ಬಂದಿರೋದು."

"ಅವರು ಯಾರು ಬಲ್ಲಿರಾ?"

"ಇಲ್ಲ. ನನಗೆ ಗೊತ್ತಿಲ್ಲ."

"ನಿನ್ನೆ ಹಾಡಿದರಲ್ಲ ಜಾನಮ್ಮ ಅವರೇ ಕೆಂಪಮ್ಮ. ನಿನ್ನೆ ಟೀ ಪಾರ್ಟಿಯಲ್ಲಿ ಎಲ್ಲರಿಗೂ ಪಲ್ಟಿ ಹೊಡೆಸಿದರಲ್ಲ ನಾಯರ್, ಅವರೇ ಶಂಕರ!"

"ನಿಜವಾಗಿ?"

"ನಿಜವಾಗಿ!"

"ಹಾಗಾದರೆ ಪಸಂದಾಯಿತು. ಫೈನ್ ಫೈನ್."

"ಏನೋ ಕೆಲಸದಲ್ಲಿದ್ದೀರೇನೋ?"

"ತಮ್ಮ ಕೆಲಸವೇ ದೇವ್ರು."

"ನಡೀಲಿ, ನಡೀಲಿ."

"ಲೀಜರ್ ಇದ್ದರೆ ನೀವೂ ಬನ್ನಿ. ಎಲ್ಲರೂ ಕೂತು ಫೈನಲೈಸ್ ಮಾಡೋಣ"

"ಬಂದರೂ ಬರುತೀನಿ. ಆದರೆ ವೈದ್ಯ, ಅದೂ ನಮ್ಮ ನಾಟೀ, ಗಿಡಮೂಲಿಕೆ ವೈದ್ಯ, ಮಾತ್ರ ಮರೆಯಬೇಡಿ."

"ಎಸ್ ಎಸ್, ಮರೀಬೇಡಿ, ಬನ್ನಿ. ಐದು ಗಂಟೆ ವರೆಗೂ ಕೂತಿರುತೀವಿ."

ಪ್ರೊಫೆಸರ್ರು, ಗೌಡರು ಹೇಳಿದ್ದನ್ನು ಎಲ್ಲರಿಗೂ ಹೇಳಿದರು. ಎಲ್ಲರೂ ಸರಿ ಸರಿ ಅಂದರು.

ಶತಾನಂದಂ ಏನೋ ಯೋಚಿಸುತ್ತಿರುವಾಗ ಅವರ ಹೆಂಡಿತಿ ನೆನೆಪು ಕೊಟ್ಟರು: "ಬೆಳಿಗ್ಗೆ ಹೇಳಿದ್ದಿರಿ, ಫೇಯಿತ್ ಹೆಚ್ಚಾಗಬೇಕು; ಸೋಫಿಸ್ಟಿಕೇಷನ್ ಕಮ್ಮಿಯಾಗಬೇಕು; ಹಾಗೆ ಕರ್ರಿಕುಲಂ ಮಾಡಬೇಕು ಅಂತ. ಅಲ್ಲವೆ?"

"ಹೌದು ಹೌದು."

"ಸೋಫಿಸ್ಟಿಕೇಷನ್ ಎಂದರೇನು?"

"ತಲೆಹರಟೆ. ಈಗ ಓದೋದು ಅಂದರೆ ತಲೆಹರಟೆ ಕಲಿಯೋದು ಅನ್ನುವದಾಗಿದೆ, ಅದು ತಪ್ಪಬೇಕು. ಈಗ ಬರುತ್ತಿರುವ ಗಾಂಧಿಸಿಸ್ಟಂ ಪರವಾಯಿಲ್ಲ. ಕೊಂಚ ಕೈಕೆಲಸ ಹೆಚ್ಚಾಗಿದೆ. ಆದರೂ ಅದು ಸಾಲದು. ನಾವು ಸರ್ವೋದಯದ ಪ್ರಿನ್ಸಿಪಲ್ ತೆಗೆದುಕೊಳ್ಳೋಣ. ಓದು ಕಡಿಮೆಯಾಗಿರಲಿ; ಕೆಲಸ ಹೆಚ್ಚಾಗಿರಲಿ. ಸಂಗೀತ, ವೈದ್ಯ ಇರಲಿ. ಬರು ಬರುತಾ ವೈದ್ಯ ಹೆಚ್ಚು ಮಾಡೋಣ. ಫೆಯಿತ್ ಹೆಚ್ಚಾಗುವ ಹಾಗೆ, ದಿನಾ ಪೂಜೆ ನಡೆಯೋ ಏರ್ಪಾಡು ಮಾಡಬೇಕು."

"ನಮ್ಮ ಮನೆಯಲ್ಲಿ ನಮ್ಮ ತಂದೆ ಒಂದು ದಿನ ಪೂಜೆ ಬಿಟ್ಟಿರಲಿಲ್ಲ. ಆದರೂ ನನಗೇಕೆ ಫೆಯಿತ್ ಬರಲಿಲ್ಲ?" ಸೀತಮ್ಮನವರು ಕೇಳಿದರು.

ಪ್ರೊಫೆಸರ್ ನಕ್ಕು ಹೇಳಿದರು: "ನೀವು ನಾರ್ಮಲ್ ಅಲ್ಲ

ಸೀತಮ್ಮ. ನೀವು ರಿವೋಲ್ಟ್ ಆದವರು. ನಾನೂ ನಿಮ್ಮ ಹಾಗೆಯೇ ರಿವೋಲ್ಟ್. ನಾವು ಹೊಸ ನಾಗರಿಕತೆಯ ಮೋಹಕ್ಕೆ ಸಿಕ್ಕಿ ಹಿಂದಿನದೆಲ್ಲ ಕಂಡೆಮ್ನ್ ಮಾಡೋಕೆ ಹೊರಟು, ನಾವೇ ಕಂಡೆಮ್ನ್ ಆಗಿಹೋಗಿದ್ದೇವೆ. ಕೋಪ ಮಾಡಿಕೊಳ್ಳಬೇಡಿ. ಕಂಬಳಿಯವನ್ನ ಹೊಡೆದರೆ, ದುಪ್ಪಟಿಯವನು ಎಚ್ಚೆತ್ತನಂತೆ. ಹಾಗೆ, ನಾವು ಎಡವಿದ್ದು ನಮ್ಮ ಮಕ್ಕಳಿಗೆ ಲಾಭವಾಗಲಿ."

ಸೀತಮ್ಮನಿಗೆ ಕೋಪ ಬರಬೇಕಾಗಿತ್ತು. ಆದರೆ ಪ್ರೊಫೆಸರ್ ಹೇಳಿದ ಮೃದುರೀತಿ, ಗಾಯದ ಮೇಲೆ ಕೈಯಿಟ್ಟರೂ ಅಲ್ಲಿದ್ದ ಮುಲಾಂನಿಂದ ಹಿತವಾದ ಹಾಗೆ ಆಗಿ ಅವರೂ ನಕ್ಕರು.

ಹೀಗೆಯೇ ಆಗಿ ಸಂಜೆಯವರೆಗೂ ಮೀಟಿಂಗ್ ನಡೆದು ಆಗಬೇಕಾದ ಕೆಲಸವೆಲ್ಲ ಮುಗಿಯಿತು.

ಕೆಂಪಮ್ಮ ಸಂಗೀತಕ್ಕೆ, ನಾಯರ್ ವೈದ್ಯಕ್ಕೆ ಗುರುಗಳಾಗುವುದು. ಒಂದು ಸಣ್ಣ ವೈದ್ಯಶಾಲೆ ಕನ್ಯಾಮಂದಿರದ ಜೊತೆಯಲ್ಲಿ ನಡೆಯಬೇಕು. ದಿನವೂ ದೇವರ ಪೂಜೆ ಆಗಬೇಕು. ವೆಂಕಟೇಶಯ್ಯನವರಿಗೆ ದೇವರ ಪೂಜೆ, ಸಂಸ್ಕೃತಪಾಠ, ಮ್ಯಾನೇಜರ್‌ಷಿಪ್ಪು. ಅವರಿಗೆ ಸಹಾಯ ಮಾಡಲು ಒಬ್ಬ ಕ್ಲಾರ್ಕ್, ಒಬ್ಬ ಆಳು ಎಂದಾಯಿತು. ಮೋಹನಬಾಯಿಯವರು ದೇವರಪೂಜೆಯ ಖರ್ಚನ್ನು ವಹಿಸುವುದು; ಅವರ ಹೆಣ್ಣಾಳೇ ಕನ್ಯಾಮಂದಿರದಲ್ಲೂ ಕೆಲಸ ಮಾಡುವುದು ಎಂದಾಯಿತು.

## ೧೨

ಗೌಡನು ಹೋಗಿ ವೀಣಾ ಶ್ರೀನಿವಾಸರನ್ನು ಕರೆದು ತಂದನು. ಜಾನಮ್ಮ ನಾಯರ್ ಇಬ್ಬರೂ ಬಾಗಿಲಲ್ಲಿ ನಿಂತಿದ್ದು ಮಹಾಪುರುಷರನ್ನು ಸ್ವಾಗತಿಸುವಂತೆ ಅವರನ್ನು ಎದುರುಗೊಂಡು ಕರೆದುಕೊಂಡು ಬಂದರು.

ವೀಣಾನೇ ಜಾನಮ್ಮನನ್ನು ಮೊದಲು ಮಾತಾಡಿಸಿದಳು: "ಅವೊತ್ತಿನಿಂದ ನಿಮ್ಮನ್ನು ನೋಡಲಿಲ್ಲ. ನಿಮ್ಮ ಸಂಗೀತ ಬಲು ಚೆನ್ನಾಗಿತ್ತು. ನನಗೂ ಹೇಳಿ ಕೊಡುತ್ತೀರಾ? ನೀವು ಹಾಗೆ ಹೇಳಿಕೊಟ್ಟರೆ ಹೀಗೆ ಕಲಿತುಕೊಳ್ಳುತ್ತೀನಿ."

"ಆಗಲಮ್ಮ; ಅವೊತ್ತಿನಿಂದ ಅಂದೆಯಲ್ಲ; ನಿನ್ನೆ ಅಲ್ಲವೆ ನಾವು ನೋಡಿದ್ದು?"

"ಹೌದರೀ, ನನಗೆ ಮಾತ್ರ ಎಷ್ಟೋ ದಿನವಾಯಿತು ಅನ್ನಿಸಿದೆ. ಆಯಿತು. ನಿಮ್ಮನ್ನೂ ನಾನು ಹೆಸರಿಟ್ಟು ಕರೆಯೋಲ್ಲ: ಅವರನ್ನೂ ಹೆಸರಿಟ್ಟು ಕರೆಯೋಲ್ಲ, ಏನಂತ ಕರೀಲಿ ಹೇಳಿ"

"ನೀನು ಏನು ಕರೆದರೆ ಅದೇ ಸರಿ."

"ಹಾಗಾದರೆ ಹೇಳಲೋ?"

"ಹೇಳು"

"ನೀವು ಏನೂ ಅಂದುಕೊಳ್ಳೋಲ್ಲವೋ?"

"ಇಲ್ಲ."

"ನಮ್ಮ ತಾತ ಈಗ ಇಲ್ಲ. ಅದರಿಂದ ಇವರು ನಮ್ಮ ತಾತ ಆಗಲಿ. ಅವರು ತಾತ ಆದ ಮೇಲೆ, ನೀವು ಅಜ್ಜಿ. ಆದರೆ ನಿಮಗೆ ತಲೆ ನರೆತಿಲ್ಲ: ನಿಜ. ಆದರೇನ್ರಿ? ಎಷ್ಟೋ ಜನಕ್ಕೆ ತಲೆನರೆಯೋಕೆ ಮುಂಚೆ ಮೊಮ್ಮಕ್ಕಳು ಆಗಿರೋಲ್ವೇ? ಹಾಗೆ ನೀವೂ ತಲೆನರೆಯದಿದ್ದ ಅಜ್ಜಿ. ಆಗಬಹುದೋ?"

ಜಾನಮ್ಮನಿಗೆ ನಾಯಿರ್‌ಗೆ ಆದ ಸಂತೋಷ ಪ್ರಕಟರೂಪವಾಗಿ ಕಣ್ಣುಗಳಲ್ಲಿ ಆನಂದಾಶ್ರುವಾಗಿ ಹರಿಯಿತು. ತಾತ ಮೊಮ್ಮಗಳ ಸಂಬಂಧವನ್ನು ಕಂಡಿದ್ದ ಗೌಡನು ಆ ಮಗುವಿನ ಮಾತು ಕೇಳಲಾರದೆ ಕಣ್ಣೀರಲ್ಲಿ ನೀರು ಬಿಡುತ್ತಾ ಮರೆಯಾದನು.

ವೀಣಾ ಕೇಳಿದಳು : "ಹಾಗಾದರೆ ನಿಮಗೆ ಒಪ್ಪಿಗೆ ತಾನೇ ?"

"ನಿಜವಾಗಿ ಒಪ್ಪಿಗೆಯಮ್ಮ?"

"ಗೌಡರೆ, ನನಗೆ ತಾತ ಸಿಕ್ಕಿದರು ಕಣ್ರೀ; ಜೊತೆಗೆ ಸಂಗೀತ ಹೇಳಿಕೊಡೋ ಅಜ್ಜೀನೂ ಸಿಕ್ಕಿದ್ರು, ಇದೆಲ್ಲ ನಿಮ್ಮಿಂದ ಅಲ್ಲವೇನ್ರೀ? ಥ್ಯಾಂಕ್ಸ್."

ಗೌಡನು ನೀಡಿದ್ದ ಕೈಹಿಡಿದು ಕುಲುಕಿ ಮಗುವನ್ನು ಎತ್ತಿಕೊಂಡನು. ಮೇರಿಯು ಅವನ ಕಂಕುಳಿಂದ ಅವಳನ್ನೆತ್ತಿಕೊಳ್ಳುತ್ತಾ, "ಅಮ್ಮನ್ನ ಅಪ್ಪಾವರನ್ನ ಅಜ್ಜಿ ತಾತ ಮಾಡಿಕೊಂಡೆ, ನನ್ನೇಕೆ ಬಿಟ್ಟು ಬಿಟ್ಟೆ" ಎಂದು ಕೇಳಿದಳು.

ವೀಣಾ ನಗುತ್ತಾ ಹೇಳಿದಳು; "ನಿಮ್ಮನ್ನು ಎಲ್ಲಿ ಬಿಟ್ಟೆ? ಅವರು ಅಜ್ಜಿ ಆದ ಮೇಲೆ ಅವರ ಮಗಳು ನೀವು ಏನಾಗಬೇಕು? ಹೇಳಿ. ಚಿಕ್ಕಮ್ಮ; ಅಲ್ಲವೇನ್ರಿ ಗೌಡರೆ?"

ಎಲ್ಲರೂ ನಕ್ಕರು. ಮೇರಿಗೆ ಏನೋ ಸಂತೋಷದ ಪರಮಾವಧಿ ಸೇರಿದ ಹಾಗಾಗಿದೆ. "ಆಗಲಮ್ಮಾ; ನನಗೂ ನಿನ್ನಂಥ ಮಗಳೂ ಬೇಕಾಗಿತ್ತು. ಹಾಗಾದರೆ, ಇನ್ನು ಮೇಲೆ ನಿನಗೆ ನಾನು ಚಿಕ್ಕಮ್ಮ, ಒಪ್ಪಿಕೊಂಡೆಯೋ?"

"ಹೌದು ಕಣ್ರೀ, ನಾನು ಸುಳ್ಳು ಹೇಳೋಲ್ಲ. ಬೇಕಾದರೆ ನಮ್ಮ ಯಜಮಾನರನ್ನ ಕೇಳಿ. ಏನ್ರೀ? ನಾನು ಸುಳ್ಳು ಹೇಳುತೀನೇನ್ರಿ?"

"ಬಿಡೆ, ನಿನ್ನ ವಯಸ್ಸಿನೋರು ಯಾರು ತಾನೇ ಸುಳ್ಳು ಹೇಳುತಾರೆ?"

"ಹಾಗಲ್ಲರೀ! ಸುಳ್ಳು ಹೇಳೋಕೆ ವಯಸ್ಸೇನು? ನಾನು ಆಟದಲ್ಲೂ ಸುಳ್ಳು ಹೇಳೋಲ್ಲ ಚಿಕ್ಕಮ್ಮ."

ವೀಣೆಗೆ ಹೀಗೆ ಉಪಚಾರವಾದ ಮೇಲೆ, ನಾಯಿರ್ ಶ್ರೀನಿವಾಸನ ಕಡೆಗೆ ತಿರುಗಿದರು. ಶ್ರೀನಿವಾಸನನ್ನು ಅವರೇ ಸೋಫಾದ ಮೇಲೆ ಕುಳ್ಳಿರಿಸಿದ್ದರು. ಒಂದು ತಟ್ಟೆ, ಒಂದು ಚೊಂಬು ಬಿಸಿನೀರು, ತಂದು ಇಟ್ಟುಕೊಂಡಿದ್ದರು. ಎಲ್ಲರನ್ನೂ ಕೂರಿಸಿ, ತಾವು ಭಕ್ತಿಯಿಂದ ಅವನ ಕಾಲುಗಳನ್ನು ತಟ್ಟೆಯಲ್ಲಿ ತೊಳೆದರು. ಆ ನೀರು ತಮ್ಮ ತಲೆಯಮೇಲೆ ಚೆಲ್ಲಿಕೊಂಡು ಜಾನಮ್ಮನಿಗೆ ಸನ್ನೆ ಮಾಡಿದರು. ಅವಳೂ ತಲೆಯಮೇಲೆ ಎರಚಿಕೊಂಡಳು. ಅದನ್ನು ಕಂಡು ಮೇರಿಯು "ನಿಮಗೆ ಬೇಕಾದ್ದು ನಮಗೆ ಬೇಡವೆ?" ಎಂದು ತಾನೂ, ಪ್ರೋಕ್ಷಿಸಿಕೊಂಡಳು. ಗೌಡನೂ ಹಾಗೆಯೇ ಮಾಡಿದನು.

ವೀಣಾ ಸುಮ್ಮನಿದ್ದಳು. ಮೇರಿಯು ಅವಳ ಮುಖವನ್ನು ನೋಡಿ "ನೀನೂ ತಕೋಮ್ಮ;" ಎಂದಳು. ಅವಳು "ಈಗಲ್ಲ ಚಿಕ್ಕಮ್ಮ; ನಾನು ದೊಡ್ಡವಳಾದಮೇಲೆ ಈ ಕೆಲಸ ನಿತ್ಯಮಾಡುತೀನಿ" ಎಂದಳು.

ನಾಯಿರ್ ಶ್ರೀನಿವಾಸನನ್ನು ಮಾತನಾಡಿಸಿದರು: "ತಾವೂ ನಿತ್ಯ ಗುರುಗಳ ದರ್ಶನ ಮಾಡುತ್ತೀರಲ್ಲವೆ?"

"ಹೌದು."

"ಅಲ್ಲಿ ಏನು ಅಪ್ಪಣೆಯಾಯಿತು."

"ತಾವು ಹೇಳಿದ ಹಾಗೆ ಕೇಳಬೇಕು ಅಂತ ಅಪ್ಪಣೆಯಾಯಿತು."

ನಾಯಿರ್‌ಗೆ ಮುಖ ತಟ್ಟೆ ಅಗಲವಾಯಿತು. "ಗುರುಗಳ ಅಪ್ಪಣೆ ಅಂದರೆ ನಾವು ತಲೆಯಮೇಲೆ ಇಟ್ಟುಕೋಬೇಕು. ಆದರೂ ತಾವು ಉತ್ತಮರು. ನಾನು ಏನೋ ತೋರಿದ್ದು ಹೇಳುತ್ತೇನೆ. ಅದನ್ನು ತಾವು ಗುರುಗಳಿಗೆ ತಿಳಿಸಿ, ಅವರೊಪ್ಪಿದ ಮೇಲೆ ಹಾಗೆ ಮಾಡೋಣ."

"ಇಲ್ಲ, ಪಂಡಿತರೆ, ರೋಗಿಗಳು ತಮ್ಮ ಭಾರವನ್ನೆಲ್ಲಾ ತಮಗೆ

ಒಪ್ಪಿಸುವ ಹಾಗೆ, ನಾನೂ ಮಾಡುತ್ತೇನೆ. ನನಗೆ ಅಪ್ಪಣೆಯಾಗಿರುವುದೂ ಹಾಗೆಯೇ; ಇವೊತ್ತಿನಿಂದ ಏನು ಮಾಡಬೇಕು ಹೇಳಿ."

"ತಮ್ಮ ಕೈ ನೋಡಬಹುದೇ ?"

"ಇಕೋ ನೋಡಿ."

ನಾಯರ್ ಶ್ರೀನಿವಾಸನ ಎರಡು ಕೈಗಳನ್ನೂ ನೋಡಿದನು. ದೀರ್ಘಕಾಲ ನೋಡಿದನು. ಜಾನಮ್ಮನನ್ನು ಕರೆದು "ಕೆಂಪ, ಇಂಥ ಕೈ ಇದುವರೆಗೆ ನೋಡಿದ್ದೀಯಾ ನೋಡು" ಎಂದು ಬಹು ವಿಶ್ವಾಸದಿಂದ, ಅಷ್ಟೇ ಅಭಿಮಾನದಿಂದ, ಅದೇ ಗೌರವದಿಂದ ತೋರಿಸಿದನು. "ನನ್ನಪ್ಪಾ, ಸಾವಿರ ಕಾಲ ಚೆನ್ನಾಗಿರಿ." ಎಂದು ಎರಡನ್ನೂ ತಲೆಯಮೇಲಿಟ್ಟು ಕೊಂಡನು.

ಗೌಡನೂ ಮೇರಿಯೂ ಮೊಕಮೊಕ ನೋಡಿಕೊಂಡರು. ಅವರು ಕಂಡದ್ದನ್ನು ವಿಸ್ತಾರವಾಗಿ ಕೇಳಬೇಕೆಂದು ಮೇರಿಯ ಕುತೂಹಲ. ಆದರೆ, ಅವಳಿಗೆ ನಾಲ್ಕು ಜನದಲ್ಲಿ ಮಾತನಾಡಿಯೇ ಅಭ್ಯಾಸವಿಲ್ಲ. ಅದನ್ನು ಅರಿತುಕೊಂಡು ಗೌಡನು "ಪಂಡಿತರು ತಾವು ಕಂಡದ್ದನ್ನ ನಮಗೆ ಹೇಳಬಾರದಾ? ನಾವು ಪಾಮರ ಜನ. ನಾವೂ ಸಂತೋಷ ಪಡುತ್ತೇವೆ." ಎಂದನು.

ನಾಯರ್ ಇನ್ನೂ ಒಂದು ಗಳಿಗೆ ಕೈಗಳನ್ನೇ ನೋಡುತಿದ್ದು, "ಹಾಗಾದರೆ ಕೇಳಿ. ಈ ಮಹಾಪುರುಷ ತಾನು ಸತ್ಯವನ್ನು ಕಾಣುತ್ತಾನೆ. ಇತರರಿಗೆ ತೋರಿಸುತ್ತಾನೆ. ಆದರೆ, ಆದರೆ, ಕೊನೆಗೆ, .. ...."

"ಕೊನೆಗೆ ಏನು ?"

"ಕಾಮ ಗೆದ್ದರೆ, ಜಗತ್ತಿಗೇ ಗುರು; ಸೋತರೆ ಒಡೆದ ಮುತ್ತು." ಶ್ರೀನಿವಾಸನು ಸಾಹಂಕಾರದಿಂದ ಹೇಳಿದನು: "ಇಲ್ಲ ಪಂಡಿತರೆ, ಗುರುಗಳು ನನ್ನನ್ನು ಒಡೆದ ಮುತ್ತು ಮಾಡುವುದಿಲ್ಲ."

ನಾಯರ್ ವಿನಯದಿಂದ ಹೇಳಿದರು; "ತಾವು ಆಗಬಾರದು.

ಅದಕ್ಕೇ ನನ್ನ ಕಾವಲು ಇಟ್ಟಿರೋದು. ಆದರೆ ತಾವು ಬಹಳ ಕಷ್ಟ ಪಡಬೇಕಲ್ಲ?"

"ಅದು ಕಷ್ಟವಲ್ಲ: ಗುರುಗಳ ಅಪ್ಪಣೆಯಂತೆ ನಡೆಯುವುದು. ಅದು ವ್ರತ. ಅದೇ ನನ್ನ ಜನ್ಮದ ತಪಸ್ಸು."

"ದೇವ, ಈಶ್ವರನ ಹಾಗೆ, ನಾರಿಯು ಜೊತೆಯಲ್ಲಿದ್ದು ಗೆಲ್ಲ ಬೇಕಲ್ಲ."

"ಗುರುಗಳು ಗೆಲ್ಲಿಸುತ್ತಾರೆ; ಸೋಲಿಸುವುದಿಲ್ಲ. ಕಾಮವೂ ಒಂದು ರೋಗ. ಅದಕ್ಕೆ ಔಷಧಿ ಹೇಳಿ."

"ದೇವ, ಶ್ರೇಯಸ್ಸು, ಪ್ರೇಯಸ್ಸು ಎಂದು ಎರಡು ಜೀವನದ ಗುರಿ. ಪ್ರೇಯಸ್ಸು ಚಿಕ್ಕದು ಶ್ರೇಯಸ್ಸು ದೊಡ್ಡದು. ಚಿಕ್ಕದನ್ನು ಬಿಟ್ಟು ದೊಡ್ಡದನ್ನು ಹಿಡಿಯಬೇಕು."

"ಆಗಬಹುದು. ಏನು ಮಾಡಬೇಕು? ಅದು ಹೇಳಿ."

"ದೇವ, ಶ್ರೇಯಸ್ಸು ಬೇಕು ಎಂದವರು, ಮನಸ್ಸಿಗೆ ಬೇಕಾದುದು ಏನೂ ಮಾಡಬಾರದು; ಏನೂ ಕೇಳಬಾರದು; ಏನೂ ಬೇಕು ಎನ್ನ ಬಾರದು."

"ಆಗಬಹುದು. ಇದು ಬೇಡ ಎಂದು ಬಿಡುವ ಕೆಲಸ. ಉಳಿ ದುದು ಹೇಳಿ."

"ಸದ್ಯದಲ್ಲಿ ಗೀತೆಯನ್ನು ಪಾರಾಯಣ ಮಾಡುತ್ತಿರಿ. ಮುಂದಿನ ಹಾದಿ ತಾನಾಗಿ ಗೋಚರಿಸುತ್ತದೆ."

"ಇದು ನಾವು ಮಾಡುವ ಕೆಲಸವಾಯಿತು. ನೀವೇನು ಮಾಡು ತ್ತೀರಿ?"

"ಕಲ್ಪದಲ್ಲಿ ಹೇಳಿರುವಂತೆ ಈ ದೇಹದ ಮೇಲೆ ಮೂಲಿಕಾಪ್ರಯೋಗ ಮಾಡಿ, ನಾಡೀ ಶುದ್ಧಿ, ಚಕ್ರಶುದ್ಧಿಗಳನ್ನು ಸಾಧಿಸುತ್ತೇನೆ. ಜ್ಯೋತಿಷ

ವನ್ನೂ ಸ್ವರಶಾಸ್ತ್ರವನ್ನೂ ಕಲಿಸಿ ಭವಿಷ್ಯತ್ತು ಅರಿವಾಗುವಂತೆ ಮಾಡು ತ್ತೇನೆ.''

"ಅಷ್ಟೇನೇನು ?"

"ಅಪ್ಪಣೆಯಾದರೆ ಯೋಗವನ್ನೂ ಆದಷ್ಟು ತಿಳಿಸುತ್ತೇನೆ.''

"ಸಾಲದು.''

"ಮತ್ತೇನೋ ತೋರಲಿಲ್ಲ."

ಶ್ರೀನಿವಾಸನು ಪಂಡಿತನ ನೆತ್ತಿಯ ಮೇಲೆ ಕೈಯಿಟ್ಟನು. ಪಂಡಿತನು ಗಂಭೀರನಾದನು. ಒಂದು ಗಳಿಗೆ ಧ್ಯಾನದಲ್ಲಿದ್ದು ಕಣ್ಣು ಬಿಡದೆ, "ಆಗಬಹುದು" ಎಂದನು.

"ಬಾಯಿಬಿಟ್ಟು ಹೇಳಿ."

"ಸರಸ್ವತಿಯನ್ನು ಪ್ರಚೋದನ ಮಾಡಿ, ಇವರನ್ನು ಸರ್ವಜ್ಞನನ್ನು ಮಾಡುತ್ತೇನೆ."

"ಕಲ್ಪ ?"

"ಶರ್ಕರಾ ಕಲ್ಪ!''

"ಸರಿ."

ಅಲ್ಲಿದ್ದವರಲ್ಲಿ ಜಾನಮ್ಮನಿಗೆ ಅರ್ಥಾರ್ಥ ತಿಳಿವಹಾಗಾಯಿತು. ಇತರರಿಗೆ ಏನೂ ತಿಳಿಯಲಿಲ್ಲ. ಅಂತೂ ಎಲ್ಲರಿಗೂ ಯಾವುದೋ ಒಂದು ದಿವ್ಯಪ್ರಭಾವಮಂಡಲದಲ್ಲಿ ತಾವಿರುವೆವು ಎಂಬುದು ಮಾತ್ರ ಬೋಧೆಯಾಗುತ್ತಿತ್ತು.

ಪಂಡಿತನು ಪ್ರಕೃತಿಸ್ಥನಾದಮೇಲೆ ವೀಣಾ ವಿನಯವಾಗಿ ಆತನ ಬಳಿಸಾರಿ ''ತಾತ, ನನ್ನ ಕೈಯ್ಯೀ ನೋಡಿ'' ಎಂದು ಕೈಗಳನ್ನು ಚಾಚಿದಳು. ಆತನು ವಿಶ್ವಾಸದಿಂದ 'ಆಗಲಿ, ಬಾ ತಾಯಿ' ಎಂದು ನೋಡಿದನು; ಜಾನಮ್ಮನಿಗೂ ತೋರಿಸಿದನು.

"ನಾನು ಏನಾಗುತ್ತೇನೆ ತಾತ!"

"ನೀನು ಭಾರಿಯ ಡಾಕ್ಟರ್, ಭಾರಿಯ ಸಂಗೀತಗಾರಳು ಆಗುತ್ತೀಯೆ ತಾಯಿ."

"ಶ್ರೀನಿವಾಸ ನನಗೆ ಗಂಡನಾಗುತ್ತಾನೆಯೇ ತಾತ!"

"ಶ್ರೀನಿವಾಸನೇನು ಏನಮ್ಮಾ ಮಹಾ! ನೀನು ಬೇಕು ಎಂದರೆ ಒಬ್ಬನಲ್ಲ, ನೂರು ಗಂಡರನ್ನು ಮಾಡಿಕೊಳ್ಳಬಲ್ಲೆ. ಅವೆಲ್ಲ ಇರಲಿ, ಈಗಲೇ ಏನು ಅವಸರ?"

"ಹಾಗಲ್ಲ ತಾತ. ಶ್ರೀನಿವಾಸನೇ ನನಗೆ ಗಂಡನಾಗುವ ಹಾಗೆ ನನಗೂ ಏನಾದರೂ ಮಾಡಿಕೊಡಿ."

"ಆಗಲಿ, ಆಗಲಿ, ಏನವಸರ?"

ವೀಣಾನೂ ಅಲ್ಲಿಗೇ ಬಿಟ್ಟಳು.

ಮಕ್ಕಳಿಗೆ ಬೇಕಾದಷ್ಟು ಹಣ್ಣು ಹಂಪಲು ಕೊಟ್ಟರು. ಮೇರಿ ನಾಯಿರ್‌ನ್ನು ಕರೆದು "ಅವರಿಗೂ ಕಾಫಿ ಕೊಡಲೆ?" ಎಂದು ಕೇಳಿದಳು.

"ಕೊಡು. ಆದರೆ ಅವರಿಗೆ ಕೊಡುವಾಗ ದೇವರಿಗೆ ಎಂದೇ ಕೊಡು."

"ಸರಿ."

ಐದು ಗಂಟೆಯಾಗುತ್ತಾ ಬಂತು. ಗೌಡನು ಯತ್ನವಿಲ್ಲದೆ ಮೀಟಿಂಗಿಗೆ ಹೋದನು. ಅವನಿಗೆ ಪಂಡಿತರ ಹತ್ತಿರ ಕೂತು ಶರ್ಕರಾ ಕಲ್ಪ ಎಂದರೇನು ಕೇಳಬೇಕು ಎಂದು ಆಸೆ. "ಮಕ್ಕಳು ಇಲ್ಲಿಯೇ ಇನ್ನಷ್ಟು ಹೊತ್ತಿರಲಿ. ನಾನು ಆದಷ್ಟು ಬೇಗ ಬಂದು ಕರೆದುಕೊಂಡು ಹೋಗುತ್ತೇನೆ" ಎಂದು ಹೇಳಿ ಹೋದನು.

ನಾಯಿರ್, ಜಾನಮ್ಮ, ಮೇರಿ ಮೂವರೂ ಆ ಮಕ್ಕಳೊಡನೆ ವಿನೋದವಾಗಿದ್ದರು. ಎಲ್ಲರೂ ಅನಿರ್ವಚನೀಯವಾದ ಆನಂದಪಡು

ತ್ತಿದ್ದಾರೆ. ಆದರೂ ಮೇರಿಗೆ ದಿಗಿಲು, ಎಲ್ಲಿ ವೀಣಾ ರಮೇಶನ ಕೊಠಡಿ ಬಾಗಿಲು ತೆಗೆದುಬಿಡುವಳೋ ಎಂದು ಹೆದರಿ, ಮೆತ್ತಗೆ ಯಾವಾಗಲೋ ಆ ಕೊಠಡಿಗೆ ಬೀಗ ಹಾಕಿಸಿದ್ದಳು.

ವೀಣೆ ಒಂದು ಗಳಿಗೆ ಸುಮ್ಮನೆ ಕುಳಿತುಕೊಂಡಾಳೆ? ಶ್ರೀನಿವಾಸನು ಏನೋ ಬಲ್ಲವನಂತೆ ನಾಯಿರ್ ಜಾನಮ್ಮ ಇವರೊಡನೆ ಮಾತನಾಡುತ್ತಿದ್ದಾನೆ. ಅವರೂ ಸರೀಕನೊಡನೆ, ಅಥವಾ ತಮಗಿಂತ ಉತ್ತಮನೊಡನೆ ಮಾತನಾಡುವಂತೆ ಗೌರವವಾಗಿ, ಗಂಭೀರವಾಗಿ, ಸಂತೋಷವಾಗಿ, ವಿನಯವಾಗಿ, ವಿಶ್ವಾಸವಾಗಿ, ಮನಃಪೂರ್ವಕವಾಗಿ ಮಾತನಾಡುತ್ತಿದ್ದಾರೆ. ಆ ಮಾತು ಅವಳಿಗೆ ಬೇಕಾದಂತಿಲ್ಲ. "ಏಳಿ ಚಿಕ್ಕಮ್ಮಾ, ನಿಮ್ಮ ಮನೆಯೆಲ್ಲಾ ನೋಡಿಕೊಂಡು ಬರೋಣ" ಎಂದು ಎಬ್ಬಿಸಿಕೊಂಡು ಹೊರಟಳು.

ಮನೆಯೆಲ್ಲಾ ನೋಡಿ, "ಏನು ಚಿಕ್ಕಮ್ಮಾ, ನಿಮ್ಮ ಮನೆಯೆಲ್ಲಾ ಮಲಗೋ ಮನೆಗಳೇ! ಎಲ್ಲೆಲ್ಲೂ ಮಂಚ ಸುಪ್ಪತ್ತಿಗೆ" ಎಂದು ಕೇಳಿದಳು. ಮೇರಿಯು ಏನು ಹೇಳಬೇಕೋ ತಿಳಿಯದೆ, "ನನಗೆ ನಿದ್ದೆ ಹೆಚ್ಚು. ಎಲ್ಲಿ ನಿದ್ದೆ ಬಂದರೆ ಅಲ್ಲಿ ಮಲಗಿಬಿಡೋದು" ಎಂದಳು.

ವೀಣೆಯು "ಈ ರೂಂನಲ್ಲಿ ಏನಿದೆ?" ಎಂದಳು.

"ಅಲ್ಲೇನದೆ? ಯಾವುದೋ ದಿನಾ ಬೇಡವಾದ ಸಾಮಾನು ಇಟ್ಟಿರೋ ಕೊಠಡಿ. ಇಲ್ಲಿ ಬಾ. ನಮ್ಮನೆಯ ಗುಲಾಬಿಯ ಗಿಡ ನೋಡು."

"ಹೌದು ಬಂದಾಗಲೇ ನೋಡಿದೆ. ಹೋಗಿ ಅಷ್ಟು ಹೂವೂ ಕೊಯ್ದುಕೊಳ್ಳೋಣ ಅಂದುಕೊಂಡೆ. ಅಷ್ಟರಲ್ಲೇ ಅಜ್ಜಿ ಬಂದು ಎತ್ತಿಕೊಂಡರು."

"ಈಗ ನಡೆಯಮ್ಮ ಹೋಗಿ ಬೇಕಾದಷ್ಟು ಹೂವು ಕಿತ್ತುಕೊ. ನಾನು ಕೊಯ್ದು ಕೊಡಲೇನು?

"ಬೇಡಿ. ನಾನೇ ಕೊಯ್ದುಕೊಳ್ಳುತ್ತೇನೆ."

"ಮುಳ್ಳಲ್ಲಮ್ಮ?"

''ಗುಲಾಬಿ ಗಿಡದಲ್ಲಿ ಹೂ ಕೊಯ್ಯುವಾಗ ಮುಳ್ಳು ತಗುಲಿದರೆ ನೋಯೋಲ್ಲ, ಚಿಕ್ಕಮ್ಮ."

ಮೇರಿಗೆ ಇದೇನು ಹುಡುಗಿ ಇದು ಎನ್ನಿಸಿತು. ಅದುವರೆಗೆ ಅವಳಿಗೆ ಅನುಭವವಿಲ್ಲದ ಮಾತೃಭಾವವೊಂದು ಅವಳಿಗೆ ಆವೇಶವಾದಂತಾಗಿ "ಹಾಗೇ ಆಗಲಮ್ಮಾ ನಿನಗೆ ಮುಳ್ಳು ತಗಲಿದರೂ ನೋಯದಿರಲಿ" ಎಂದು ಆಶೀರ್ವಾದ ಮಾಡಿದಳು.

*　　　*　　　*　　　*

ಅಂದಿನ ರಾತ್ರಿ ಗೌಡನು ಊಟವಾದ ಮೇಲೆ ನಾಯರ್ ಹತ್ತಿರ ಬಂದು, ''ದೇವ್ರು, ಅಪ್ಪಣೆಯಾದರೆ ಒಂದು ಮಾತು ಕೇಳಬೇಕು'' ಎಂದು ಪ್ರಾರ್ಥಿಸಿದನು.

"ಕೇಳಿ, ನಾವೆಲ್ಲ ಒಂದು ಮನೆಯ ಜನ ಅಲ್ಲವೋ? ಸಂಕೋಚವೇನು?"

''ತಾವು ಮಧ್ಯಾಹ್ನ ಅವರೊಡನೆ ಮಾತಾಡುವಾಗ ಶರ್ಕರಾಕಲ್ಪ ಅಂದರಲ್ಲ? ಅದೇನು?''

''ಅದೇ! ವೇದದಲ್ಲಿ ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ! ಎಂದು ಒಂದು ಮಂತ್ರವಿದೆ. ಆ ಮಂತ್ರದ ಅರ್ಥ, ಸಕ್ಕರೆಯೇ, ನನಗೆ ದಿವ್ಯ ಜನ್ಮ ಬರುವಂತೆ ಶುದ್ಧಿಮಾಡು ಎಂದು. ಅದನ್ನು ಪ್ರಯೋಗ ಮಾಡಿ ಸಿದ್ಧಿಯನ್ನು ಪಡೆಯುವುಕ್ಕೆ ಕಲ್ಪ ಎಂದು ಹೆಸರು. ನೀವು ತಿನ್ನುತ್ತೀರಲ್ಲ ದಾಯಪುಡಿಸಕ್ಕರೆ ಅದನ್ನು ಸರಿಯಾಗಿ ಉಪಯೋಗಿಸಿ ಕಲ್ಪ ಮಾಡಿದರೆ, ದೇಹ, ದಿವ್ಯದೇಹವಾಗುತ್ತದೆ."

''ನೀವು ಮಾಡಿನೋಡಿದ್ದೀರಾ?''

"ಒಳ್ಳೆಯ ಪ್ರಶ್ನೆ. ನಿಮ್ಮ ಹತ್ತಿರ ಬೇಕಾದಷ್ಟು ಹಣವಿದೆ. ನಿಮ್ಮ ಕೂಲಿಯವರಿಗೆ ಒಂದೊಂದು ಇಟಾಲಿಯನ್ ರಗ್ ಏಕೆ ಕೊಡೋದಿಲ್ಲ."

"ಅವರಿಗೆ ಕಂಬಳಿ ಕೊಟ್ರೆ ಸಾಕು. ರಗ್ಗೇಕೆ?"

"ನಿಮ್ಮ ಕಾಫೀ ಗಿಡಕ್ಕೆ ಅಷ್ಟು ಗೊಬ್ಬರ ಕೊಡುತ್ತೀರಲ್ಲ, ಹುರಳೀಗೆ ಏಕೆ ಕೊಡೋಲ್ಲ."

"ಅದಕ್ಕೆ ಬೇಕಿಲ್ಲ."

"ಅದೇ ಜಗತ್ತಿನ ಗುಟ್ಟು. ಒಂದೊಂದಕ್ಕೆ ಒಂದೊಂದು ಬೇಕು. ಒಂದೊಂದು ಒಂದೊಂದು ಕೆಲಸಕ್ಕೆ ಹುಟ್ಟಿದೆ. ಎಂಜನ್ನಿಗೆ ಇಜ್ಜಲು ಬೇಕು. ಮೋಟಾರಿಗೆ ಎಣ್ಣೆ ಬೇಕು. ಹಾಗೆ, ಲೋಕವನ್ನು ಉದ್ಧಾರ ಮಾಡುವ ಮಹತ್ಕಾರ್ಯಕ್ಕೆ ಹುಟ್ಟಿರೋ ಮಹಾನುಭಾವರಿಗೆ ಬೇಕಾಗಲಿ ಅಂತ ಎಷ್ಟೋ ಕಲ್ಪಗಳನ್ನು ಮಾಡಿದ್ದಾರೆ, ಅವು ಎಲ್ಲರಿಗೂ ಬೇಕಿಲ್ಲ. ಇದುವರೆಗೆ ಇಂಥಾ ಕಲ್ಪಪ್ರಯೋಗ ಮಾಡಬೇಕಾಗಿ ಬರಲಿಲ್ಲ. ಆದರಿಂದ ಮಾಡಲಿಲ್ಲ. ಅಷ್ಟೆ?"

"ಇವು ಯಾರಿಗೆ ಬೇಕಾದರೂ ಮಾಡಬಹುದೆ?"

"ನೋಡಿ. ಗೌಡರೆ, ಮೊದಲನೆಯದು ಎಲ್ಲರೂ ಒಂದೇ ಸಮ ಅನ್ನೋದು, ಒಂದು ಹುಚ್ಚು—ಪ್ರತಿಯೊಬ್ಬನೂ ಇನ್ನೊಬ್ಬನಿಗಿಂತ ಹೆಚ್ಚು ಹೌದು; ಕಮ್ಮಿಯೂ ಹೌದು. ನಿಮ್ಮ ಕಾಫೀ ತೋಟದಲ್ಲಿ ನೀವು ಮೆಟ್ಟಲು ಕಟ್ಟಿಲ್ಲವೆ ಹಾಗೆ. ಅದು ತಿಳಿದು ನಡೆಯೋದು ಒಳ್ಳೇದು. ಇಲ್ಲದಿದ್ದರೆ ಸಾಹಸ ಮಾಡಿದರೆ, ಬೆಟ್ಟ ಕಡಿದು ಬಯಲು ಮಾಡೋಕೆ ಆಗೋಲ್ಲವೆ? ಹಾಗೆ ಎಲ್ಲರನ್ನೂ ಒಂದೇ ಸಮ ಮಾಡಬಹುದು. ಆದರೆ ಅದು ಶ್ರಮ ಅಷ್ಟೆ? ಜೊತೆಗೆ ರೇಸ್ ಕುದುರೆ ಹುಟ್ಟಾ ರೇಸ್ ಕುದುರೆ ಯಾದರೆ ಶ್ರಮಪಟ್ಟರೂ ಸಾರ್ಥಕ."

"ಹಾಗಾದರೆ ಇವರನ್ನು ಸರ್ವಜ್ಞರನ್ನು ಮಾಡುತ್ತೀರಾ?"

"ಮಾಡುತ್ತೇನೆ."

"ನಾವು ನೋಡುತೀವಾ ?

"ನೀವೂ ನೋಡುತ್ತೀರಿ ?"

ಗೌಡನಿಗೆ ಸಂತೋಷವಾಯಿತು. ಏಕೆ, ಏನು, ಎನ್ನುವುದು ಮಾತ್ರ ಅವನಿಗೂ ತಿಳಿಯದು. ಆದರೂ ಸಂತೋಷವಾಯಿತು. ವೀಣಾ ವಿಚಾರವನ್ನೂ ಕೇಳಬೇಕು ಎನ್ನಿಸಿತು. ಕೇಳಲಿಲ್ಲ. ಏಕೋ ಏನೋ ಅದು ತಿಳಿಯದು.

ಹಾಗೆಯೇ ಒಂದು ಗಳಿಗೆ ಇದ್ದು "ನೋಡಿ, ಮರೆತೇಬುಟ್ಟಿದ್ದೆ. ಈ ದಿನ ತಮ್ಮನ್ನೂ ತಾಯಿ ಅವರನ್ನು ಕನ್ಯಾಮಂದಿರಕ್ಕೆ ಯಜಮಾನರನ್ನಾಗಿ ಮಾಡಿದ್ದೀವಿ." ಎಂದನು.

"ಯಜಮಾನರು ಎಂದರೆ ?"

"ತಾವು ಹೇಳಿದ ಹಾಗೆ ಮಂದಿರ ನಡೆಸೋದು ಅಂತ. ಪ್ರೊಫೆಸರ್ ಕೂಡ ಒಪ್ಪಿಬಿಟ್ಟರು."

"ಹಾಗೋ? ಅಲ್ಲಿ ನಾವು ನಮ್ಮ ವೈದ್ಯಶಾಲೆ ಕೂಡ ನಡಿಸಬಹುದಲ್ಲಾ ?"

"ಅಡ್ಡಿಯಿಲ್ಲ."

"ಸರಿ. ಆಮೇಲೆ ಮಿಕ್ಕದ್ದೆಲ್ಲಾ ಮಾತನಾಡೋಣ."

"ಮಾತೂ ಇಲ್ಲ; ಗೀತೂ ಇಲ್ಲ, ತಾವು ಹೇಳಿದ ಹಾಗೆ ನಡೆಯೋದು. ಆಯಿತು. ನಾಳೆ ನಾನು ಊರಿಗೆ ಹೊರಡಬಹುದೇ ?"

"ಕೆಂಪಗೆ ಒಂದು ಮಾತು ಹೇಳಿಬಿಡಿ."

"ತಾವೇ ನನ್ನ ಪರವಾಗಿ ಹೇಳಬೇಕು."

"ಅದೆಲ್ಲ ಆಗಿದೆ. ಹೋಗಿಬರುತೀವಿ ಅಂತ ಹೇಳೋದು ಅಷ್ಟೆ! ಎಷ್ಟು ದಿನ ಆಗಬಹುದು."

"ಒಂದು ತಿಂಗಳಾದರೂ ಬೇಡವಾ ?"

"ಅಲ್ಲಿ ಎಲ್ಲ ಸರಿಯಾಗಿರುತ್ತೊ ?"

"ಅಲ್ಲಿರೋ ನಮ್ಮ ಹೆಂಗುಸರು ಚಿನ್ನದಂಥಾವರು. ಆ ಯೋಚನೆ ನಿಮಗೆ ಬೇಡ. ಅಲ್ಲದೆ, ಗುರುಗಳ ವಿಚಾರ ಎತ್ತಿಬಿಟ್ಟರೆ, ಅವರು ಬೆಣ್ಣೇ ಮುದ್ದೆ."

"ಹಾಗಾದರೆ ಸರಿ."

"ಲೆಕ್ಚರ್ ಯಾವಾಗ ?"

"ಪ್ರೊಫೆಸರ್ ಬೇಕಾದಾಗ ಮಾಡಿಕೊಳ್ಳಲಿ."

"ನಾನು ಬಂದೇಬರಬೇಕು."

"ಹಾಗಾದರೆ ಸಂಗೀತಕ್ಕೆ ಬನ್ನಿ, ಲೆಕ್ಚರ್ ಮಾಡಿಕೊಂಡು ಹೋಗಿ."

"ಸರಿ. ನಾವೆಲ್ಲ ಬರುತ್ತೇವೆ.

"ಇಲ್ಲೇ ಇಳಿಸಿ."

"ಅಪ್ಪಣೆ."

*   *   *   *   *

ಈ ಮಾತು ಕಳೆದು ಇನ್ನೊಂದು ವಾರವಾಯಿತು. ಸೀತಮ್ಮ ಒಬ್ಬಳೇ ಕಾಫಿ ಕುಡಿಯುತ್ತ ಕುಳಿತಿದ್ದಳು. ಅಡುಗೆಯವಳು ಬಂದು ನಗುತ್ತ ನಿಂತುಕೊಂಡಳು. ಅವಳು ಸೀತಮ್ಮನ ಬಾತ್ಮಿದಾರಳು. ಊರಿನ ಗ್ರಾಮಸಾರವೆಲ್ಲ ಸೀತಮ್ಮನಿಗೆ ತಲಪುತ್ತಿದ್ದುದು ಆ ಜಲದಾರಿಯಿಂದ. ಸೀತಮ್ಮನು ಅವಳು ಹಾಗೆ ಬಂದು ನಿಂತುಕೊಂಡರೆ ಮನಸ್ಸಿಗೆ ಸಮಾಧಾನವಾಗಿದ್ದರೆ "ಏನು ಸಮಾಚಾರ ?" ಎನ್ನುವಳು. ಇಲ್ಲದಿದ್ದರೆ ಸುಮ್ಮನಿರುವಳು. ಅವಳೂ ಒಂದು ಗಳಿಗೆ ನಿಂತಿದ್ದು ಹೊರಟುಹೋಗುವಳು.

ಇವೊತ್ತು ಸೀತಮ್ಮನ ಮನಸ್ಸಿಗೆ ಆತಂಕವೇನೂ ಇರಲಿಲ್ಲ.

"ಏನು ಸಮಾಚಾರ?" ಎಂದು ಕೇಳಿದಳು.

"ಭಾರಿಯ ಸುದ್ದಿ."

"ಹಾಗಂದರೆ?"

"ಭಾರಿ ಜನಕ್ಕೆ ಸಂಬಂಧಪಟ್ಟದ್ದು."

"ಹೇಳಿ."

"ಮೋಹನಬಾಯಿ ಒಬ್ಬ ಗಂಡನ್ನ ಮಾಡಿಕೊಂಡರಂತೆ."

ಸೀತಮ್ಮ ಕುಡಿಯುತ್ತಿದ್ದ ಕಾಫಿಯ ಕಪ್ಪು ಹಾಗೆಯೇ ಕೆಳಗಿಟ್ಟು "ಆಂ?" ಎಂದಳು.

"ಹೌದು."

"ಯಾರು?"

"ಇನ್ನು ಯಾರು? ಪ್ರೆಸಿಡೆಂಟರೂ ಸೆಕ್ರಟರಿಗಳೂ."

"ಸರಿ. ಆಡೋಬಾಯಿಗೆ ಅಡ್ಡಿಯಿಲ್ಲ."

"ಇಲ್ಲಮ್ಮ. ಇಬ್ಬರೂ ಒಟ್ಟಿಗೆ ಸಿನೀಮಕ್ಕೆ ಕೂಡ ಹೋಗಿದ್ದರಂತೆ. ಒಂದೇ ಕಾರಿನಲ್ಲಿ ಬಂದರಂತೆ."

"ನಿಜವಾಗಿಯೂ ಜನಕ್ಕೆ ಬುದ್ಧಿಯಿಲ್ಲ. ಬೆಟ್ಟದ ನೆಲ್ಲಿಕಾಯಿ, ಘಟ್ಟದ ಉಪ್ಪು ಸೇರಿಸುವ ಜನ ಇಲ್ಲವೆ?"

ಅಡಿಗೆಯವಳು ತನ್ನ ವಾದವನ್ನು ಸಮರ್ಥಿಸಲು ಹಲವು ಕಾರಣಗಳನ್ನು ಹೇಳಿದಳು. ಸೀತಮ್ಮನು ಅವನ್ನೆಲ್ಲ ಗಂಭೀರವಾಗಿ ಕೇಳಿ, "ಹೋಗಿ ಡ್ರೈವರ್‌ನ ಬರಹೇಳಿ" ಎಂದಳು.

"ಅಷ್ಟಲ್ಲದೆ, ಅವೊತ್ತು ನನ್ನ ಬಾಯಲ್ಲಿ ಆ ಮಾತು ಬಂತೆ? ಹೀಗಾಗುತ್ತೆ ಅಂತ ನನಗೆ ಗೊತ್ತೇ ಇತ್ತು. ಹೋಗಿ ಈಗೇನಂತೀಯೆ? ಅಂತ ಕೇಳಿಯೇ ಬರಬೇಕು" ಎಂದುಕೊಂಡಳು.

ಡ್ರೈವರ್ ಬಂದು ಕಾಣಿಸಿಕೊಂಡನು.

"ಇಲ್ಲ. ನಾನು ತಿಳಿದರೂ ತಿಳಿಯದ ಹಾಗೆ ಇದ್ದರೆ ಒಳ್ಳೆಯದು. ಕೇರಿಗೆ ಬಂದವಳು ನೀರಿಗೆ ಬರದೇಹೋದಾಳೆ ?"

"ಇರಲಿ. ಈ ಬಳ್ಳಿ ಬೆಳೆದು ಕಾಯಿ ಬಿಟ್ಟರೆ, ಆಗಲಾದರೂ ಸೀತಮ್ಮನ ಬಳಿಗೆ ಬರಬೇಕಲ್ಲ! ತಾನಾಗಿ ಬರಲಿ.''

"ಈ ಕಪಿ, ಆ ಹಣ್ಣು ಕಚ್ಚುತ್ತೆ ಅಂತ ಗೊತ್ತಿತ್ತು. ನಿಜ. ಕಚ್ಚಿತು. ತಿಂದುಕೊಂಡು ಇದ್ದರಂತೂ ಸರಿಹೋಯಿತು. ಕಿತ್ತು ಆಯಿತು. ಕಚ್ಚಿ ಬೀದಿಗೆಸೆದರೆ?........ಮೋಹನನಿಗೆ ರೂಪವಿದೆ, ಗುಣ ವಿದೆ, ಐಶ್ವರ್ಯವಿದೆ. ಸಿಕ್ಕಿದ ಬೇಟೆ ತಪ್ಪಿಸಿಕೊಳ್ಳದಂತೆ ಹಿಡಿಯೋ ವಿವೇಕವಿಲ್ಲ. ಅದನ್ನು ತಂದುಕೊಡಬೇಕು...........ಅದೂ ಈಗಲ್ಲ. ಹೊಳೆ ಬಂದಾಗ ಈಜು ಬೀಳೋದು ಅಷ್ಟು ವಿವೇಕವಲ್ಲ."

ಡ್ರೈವರ್ ತಿರುಗಿ ಕಾಣಿಸಿಕೊಂಡನು.

"ಯಾಕೊ ಮೈಗೆ ಚೆನ್ನಾಗಿಲ್ಲ. ಅಂಥಾ ಭಾರಿಯ ರೋಗವೂ ಇಲ್ಲ ಅನ್ನು; ಆದರೂ ಹೋಗಿ ಡಾಕ್ಟರನ್ನು ಒಂದು ಸಲ ನೋಡಿ ಬರೋಣ ಅನ್ನಿಸತ್ತೆ; ಎಷ್ಟು ಹೊತ್ತಿಗೆ ಬರಲಿ ಅಂತ ಫೋನ್ ಮಾಡಿ ಕೇಳಿಕೊಂಡು ಬಾ."

ಡ್ರೈವರ್ ಸರಿ ಎಂದು ಹೋದನು.

"ನನಗೆ ಗೊತ್ತಿತ್ತು. ಒಟ್ಟು ಹಳಸಿತ್ತು; ನಾಯಿ ಹಸಿದಿತ್ತು. ಇರಲಿ, ಅದಕ್ಕೇನಂತೆ? ಲೋಕವೇ ಹೀಗೆ!" ಎಂದುಕೊಂಡು ಸೀತಮ್ಮನು ಅಲ್ಲಿಯೇ ಕುಳಿತಿದ್ದಳು.

---